# ಕಸ್ತೂರಿ

ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕ :
ಕೆ. ಶಾಮರಾವ್

**

ಸಹಸಂಪಾದಕ :
ಮಾಧವ ನಾ. ಮಹಿಷಿ

**

ಕಲೆ :
ಪಿ. ಆರ್. ಪಾಟೀಲ

**

ಮುಖಪುಟ :
ಸರಸ ಸಂಗಾತಿ

**

ಛಾಯಾಚಿತ್ರ :
ವಿ. ಎಂ. ಲಕ್ಕೀಮರದ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೮-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI. May 1986


# ಬೆಳಕಿಂಡಿ

ಸೇತುವೆಗಳ ಬದಲು ಗೋಡೆಗಳನ್ನು ಕಟ್ಟಿಕೊಳ್ಳುತ್ತಿರುವುದೆ ಜನ ಒಂಟಿತನ ಅನುಭವಿಸುತ್ತಿರುವುದಕ್ಕೆ ಕಾರಣ.

—ಜೊಸೆಫ್ ಫೋರ್ಟ್ ನ್ಯೂಟನ್

*

ನೂತನವಾಗಿರುವುದೆಲ್ಲಾ ಸದಾ ನಿಜವಲ್ಲ, ನಿಜವಾಗಿರುವುದೆಲ್ಲಾ ಸದಾ ನೂತನವಲ್ಲ.

—ವಿಲಿಯಂ ವಾಲ್ಬರ್ಸ್ ಸಾರ್ಜಂಟ್

*

ಬಹಳಷ್ಟನ್ನು ಸಾಧಿಸಲು ಇರುವ ಒಳದಾರಿಯೆಂದರೆ ಒಂದು ಸಲಕ್ಕೆ ಒಂದೇ ಕೆಲಸ ಮಾಡುವುದು.

—ರಿಚರ್ಡ್ ಸಿಸಿಲ್

*

ಯೋಗ್ಯತೆ ಮತ್ತು ಸುದೈವಗಳು ಒಂದಕ್ಕೊಂದು ಬೆಸೆದುಕೊಂಡಿರುತ್ತವೆಂದು ಮೂರ್ಖರಿಗೆ ಗೊತ್ತಾಗುವುದೇ ಇಲ್ಲ.

—ಜೋಹಾನ್ ವೂಲ್ಫಗಾಂಗ್ ವಾನ್ ಗಯಟೆ

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

## ಸಹಚಿಂತನ

**ಹೀಗೇಕೆ?**

ಈ ವರ್ಷದ ಮಾರ್ಚ್ ಸಂಚಿಕೆಯ 'ಸಹ ಚಿಂತನ'ದಲ್ಲಿ ಪ್ರತಿಯೊಂದು ಪತ್ರವೂ ಪ್ರಶಂಸೆಯನ್ನೇ ಒಳಗೊಂಡಿದೆ. ಹಿಂದಿನ ಸಂಚಿಕೆಯ ಯಾವುದೇ ಲೇಖನವನ್ನು ಟೀಕಿಸಿದ್ದ ಪತ್ರಕ್ಕೂ ಅಲ್ಲಿ ಸ್ಥಾನ ದೊರೆತಿಲ್ಲ. ಹೀಗೆ ಏಕಪಕ್ಷೀಯ ಅಭಿಪ್ರಾಯಗಳಿಗೆ ಅವಕಾಶ ಕೊಡುವುದು 'ಕಸ್ತೂರಿ'ಯ ಬೆಳವಣಿಗೆಗೆ ಆರೋಗ್ಯಕರವಲ್ಲ.

ಇಲಕಲ್ —ಬಂಡು ಕಟ್ಟಿ

**ಹೆಮ್ಮೆಯ ಅಂಶಗಳು**

ಖ್ಯಾತ ವಿಜ್ಞಾನಿ ಶ್ರೀ ಸಿ. ವಿ. ರಾಮನ್ ಮೃದಂಗ ವಿದ್ವಾಂಸರೂ ಆಗಿದ್ದರು ಎಂಬುದನ್ನು ತಿಳಿಸಿದ 'ಕಸ್ತೂರಿ'ಗೆ ಹಾರ್ದಿಕ ಧನ್ಯವಾದಗಳು. 'ಒಂದು ಸೈನಿಕ ಕಾರ್ಯಾಚರಣೆಯ ನೆನಪು' ಉತ್ತಮ. ಎಪ್ರಿಲ್ ತಿಂಗಳ 'ಕಸ್ತೂರಿ'ಯ ಮುಖಚಿತ್ರವೂ ಸಂಗ್ರಹಯೋಗ್ಯವಾಗಿದೆ.

ಗುಲಬುರ್ಗಾ —ಶೋಭಾ ಎಂ. ಹೆರಕಲ್ಲ

**ಜ್ವಲಂತ ಸಮಸ್ಯೆ**

'ದಾರಿ ಮೀರಿದ ಮಹತ್ವಾಕಾಂಕ್ಷೆ' (ಎಪ್ರಿಲ್ ೮೬) ಒಂದು ಸಮಕಾಲಿಕ ಲೇಖನ. ಜ್ವಲಂತ ಸಮಸ್ಯೆಯಾಗಿರುವ, ಸಾಕಷ್ಟು ದುಷ್ಪರಿಣಾಮಗಳನ್ನು ಉಂಟುಮಾಡಬಹುದಾದ ಮತಾಂತರವು ಇಂದೂ ಹಲವರಿಗೆ ಸಮಸ್ಯೆಯಾಗಿ ತೋರಿಬರುತ್ತಿಲ್ಲ! ಸತ್ಯವನ್ನು ನಿರ್ಭೀತಿಯಿಂದ ಹೇಳುವ ಧೈರ್ಯ ತೋರಿಸಿದ 'ಕಸ್ತೂರಿ'ಗೆ ಧನ್ಯವಾದಗಳು.

ಬೆಂಗಳೂರು —ಜನಾರ್ದನ ದೇವದಕೇರಿ

**ಸತ್ಯದೂರ ಅಂಶಗಳು**

ಪಿ. ಆರ್. ತಿಪ್ಪೇಸ್ವಾಮಿ ಸತ್ಯಾಂಶಗಳನ್ನು ಮರೆಮಾಚಿ 'ಪೈಲವಾನ್ ಪಾಪಯ್ಯನವರು' ಬರೆದಿರುವುದು ನನಗೆ ದಿಗಿಲು ಉಂಟುಮಾಡಿದೆ.

೧) ಮೈಸೂರು ನಗರದ ಫಕೀರ್ ಅಹಮದ್ ಸಾಹೇಬರ ಗರಡಿಗೆ ಸುಮಾರು ೨೦೦ ವರ್ಷಗಳಷ್ಟು ಇತಿಹಾಸವಿದೆ. ಈಗಲೂ 'ಫಕೀರ್ ಅಹಮದ್ ಸಾಹೇಬರ ಗರಡಿ' ಎಂಬುದಾಗಿ ಎಲ್ಲಾ ಸರಕಾರಿ ಹಾಗೂ ಕೋರ್ಟ್ ದಾಖಲೆಗಳಿದ್ದು, ವ್ಯವಹಾರ ನಡೆದು ಬರುತ್ತಾ ಇದೆಯೆ ಹೊರತು 'ಪಾಪಯ್ಯನವರ ಗರಡಿ' ಎಂದಲ್ಲ.

೨) ಇಲ್ಲಿರುವ ನಗಾರಿಯೂ ಗರಡಿಯ ಸ್ವಂತ ಆಸ್ತಿ. ಲೇಖನದಲ್ಲಿ ಬರೆದಿರುವಂತೆ ದಿವಂಗತ ಮಹಾರಾಜರು ಅದನ್ನು ದಯಪಾಲಿಸಿಲ್ಲ. ಅವರು ದಯಪಾಲಿಸಿದ್ದರೆ, ನಗಾರಿಯ ಮೇಲೆ ಅರಮನೆಯ ಗುರುತಾದ 'ಶ್ರೀ ಕೃಷ್ಣ' ಎಂಬ ಅಂಕಿತವಿರುತ್ತಿತ್ತು. ಈ ವಿಷಯವನ್ನು ಜಾನಪದ ವಸ್ತುಸಂಗ್ರಹಾಲಯದ ಮಾಜಿ ಸಂರಕ್ಷಕರಾದ ಲೇಖಕರು ಮರೆತಿರುವರೋ ಅಥವಾ ಉದ್ದೇಶಪೂರ್ವಕವಾಗಿ ಬರೆದಿರುವರೋ ತಿಳಿಯದು. ಅದೂ ಅಲ್ಲದೆ ಜಾನಪದ ವಸ್ತು ಸಂಗ್ರಹಾಲಯದಲ್ಲಿರುವ ಅನೇಕ ಕುಸ್ತಿ ಸಾಧನಗಳು ಕೂಡ ಗರಡಿಗೆ ಸೇರಿದ ವಸ್ತುಗಳೇ.

೩) ಪೈ. ಪಾಪಯ್ಯನವರು ಯಾವುದೇ ಶ್ರೀಮಂತ ಮನೆತನದಲ್ಲಿ ಜನಿಸಿದವರಲ್ಲ.

೪) ಫಕೀರ್ ಅಹಮದ್ ಸಾಹೇಬರ ಗರಡಿಗೆ ಆರಂಭದಲ್ಲಿ ಉಸ್ತಾದ್ ಮಲ್ಲಪ್ಪನವರು, ನಂತರ ಇವರ ಅಳಿಯಂದಿರಾದ ಉಸ್ತಾದ್ ನಂಜೇಗೌಡರು, ನಂತರ ಉಸ್ತಾದ್ ಎಂ. ಎನ್. ಅಪ್ಪಾಜಿ ಗೌಡರು, ನಂತರ ಈ ಕೆಳಗೆ ಸಹಿ ಮಾಡಿರುವ ನಾನು ಉಸ್ತಾದನಾಗಿ ಗರಡಿಯ ಉಸ್ತುವಾರಿಗಳನ್ನು ನೋಡಿಕೊಳ್ಳುತ್ತಿದ್ದೇನೆ.

ಈ ಮೇಲ್ಕಂಡ ಎಲ್ಲ ವಿಷಯಗಳಿಗೆ ದಾಖಲೆಗಳು ನಮ್ಮ ಬಳಿ ಇವೆ.

ಮೈಸೂರು —ಉ. ಎಂ. ಎನ್. ನಂಜರಾಜಪ್ಪ

ಪೈಲ್ವಾನ್ ಪಾಪಯ್ಯನವರ ಬಗ್ಗೆ ಮಾರ್ಚ್ ಸಂಚಿಕೆಯಲ್ಲಿ ಲೇಖನ ಬರೆದು ಪಿ. ಆರ್. ತಿಪ್ಪೇಸ್ವಾಮಿಯವರು ಕುಸ್ತಿ ಕಲೆಯ ಕುರಿತ ತಮ್ಮ ಅಜ್ಞಾನವನ್ನು ತೋಡಿಕೊಂಡಿದ್ದಾರೆ.

ಆಗಿನ ಮಹಾರಾಜರು ಪೈಲ್ವಾನ್ ಪಾಪಯ್ಯನವರನ್ನು, "ನಿಮಗೆ ಏನು ಬೇಕು ಕೇಳಿಕೊಳ್ಳಿ," ಎಂದು ಹೇಳಲು ಪೈಲ್ವಾನ್ ಪಾಪಯ್ಯನವರು, "ಸ್ವಾಮಿ, ದೆಹಲಿ ದರ್ಬಾರನ್ನು ನೋಡಬೇಕೆಂಬ ಆಸೆಯಾಗಿದೆ" ಎನ್ನಲು, ಪಾಪಯ್ಯನವರನ್ನು ಮಹಾರಾಜರು ತಮ್ಮ ಜೊತೆಯಲ್ಲಿ ದೆಹಲಿಗೆ ಕರೆದುಕೊಂಡು ಹೋದರು. ಪಾಪಯ್ಯನವರು ದೆಹಲಿ ದರ್ಬಾರಿನಲ್ಲಿ ಯಾರ ಜೊತೆಯಲ್ಲೂ ಕುಸ್ತಿ ಆಡಿಲ್ಲ.

ಪೈಲ್ವಾನ್ ಸುಲೇಮಾನರು ಪಾಪಯ್ಯ ನವರನ್ನು "ಚಿತ್" ಮಾಡಿ ಸೋಲಿಸಿದರು. ಅವಮಾನಿತರಾದ ಪಾಪಯ್ಯನವರು ಆಖಾಡ ದಲ್ಲೇ ತಮ್ಮ ಲಂಗೋಟಿ ಹರಿದುಹಾಕಿ ಅಂದಿನಿಂದ ಕುಸ್ತಿ ಆಡುವುದನ್ನು ಬಿಟ್ಟುಬಿಟ್ಟರು.

ಮೈಸೂರು —ಜಿ. ಪುರುಷೋತ್ತಮ

ಮಾರ್ಚ್ (೮೬)ನೆಯ ಸಂಚಿಕೆಯಲ್ಲಿ ತಿಪ್ಪೇಸ್ವಾಮಿಯವರು 'ಪೈಲ್ವಾನ್ ಪಾಪಯ್ಯನವರು' ೧೯೧೧ ದಿಲ್ಲಿಯಲ್ಲಿ ಜಾರ್ಜ್ ಚಕ್ರವರ್ತಿಗಳ ಕಿರೀಟ ಧಾರಣೆಯ ಸಮಾರಂಭದ ಅಂಗವಾಗಿ ಜರುಗಿದ ಮಲ್ಲಯುದ್ಧ ಸ್ಪರ್ಧೆಯಲ್ಲಿ, ಪೈ. ಪಾಪಯ್ಯನವರು ಜಯಶಾಲಿಯಾಗಿ, ಚಕ್ರವರ್ತಿಗಳಿಂದ ಸುವರ್ಣ ಪದಕ ಪಡೆದರು ಎಂದಿಷ್ಟೇ ಬರೆದಿದ್ದಾರೆ.

ಆಗಿನ ಆ ಪೈಲ್ವಾನನ ಹೆಸರು ತಿಳಿಸಿದ್ದರೆ, ಈಗಲೂ ತಿಳಿಸಿದರೆ, ಪ್ರಸಿದ್ಧಿಯ ತುಲನಾತ್ಮಕ ಮೌಲ್ಯಮಾಪನಕ್ಕೆ ಅನುಕೂಲ.

ಮುಂಬಯಿ —ಹ. ವೆಂ. ಕಾಡ್ಲೂರ

**ಪಲಾಯನವಾದಿ?**

'ಅಪರೂಪದ ಕೃಷಿ ವಿಜ್ಞಾನಿ ಡಾ. ಎ. ಎನ್. ನಾಗರಾಜ' ಪಾಂಡುರಂಗ ಹೆಗಡೆಯವರ ಲೇಖನ ಓದಿ ಖೇದವಾಯಿತು.

ಅಪಪ್ರಚಾರ ಹೇಗೆ ಅಪರಾಧವೋ ಅತಿಯಾದ ಪ್ರಚಾರವೂ ಹಾಗೆಯೆ. ನಾಗರಾಜರು ಮೈಸೂರಿನ ಕೆಳಲವಾಡಿಯಲ್ಲಿ ಐದು ಎಕರೆ ಹೊಲದಲ್ಲಿ ಕೃಷಿ ಪ್ರಾರಂಭಿಸಿದ್ದಲ್ಲ, ಇಪ್ಪತ್ತೆರಡು ಎಕರೆ ವಿಪುಲ ನೀರಿನ ಹಸನು ಭೂಮಿಯಲ್ಲಿ ಸುಮಾರು ಹತ್ತು ವರುಷಗಳ ಕಾಲ ಪುಸ್ತಕದ ಬದನೆಕಾಯಿಯನ್ನು ನೈಜವಾಗಿಸುವಲ್ಲಿ ಮಾಡಿದ ಯತ್ನ ವಿಫಲವಾಗಿ ಪಲಾಯನ ಮಾಡಿದವರು.

ನಾಗರಾಜರದು ಅಭಾವ ವೈರಾಗ್ಯ, ಸ್ವಭಾವ ವೈರಾಗ್ಯ ಅಲ್ಲ ಎಂಬುದಕ್ಕೆ ಸಾವಿರದಲ್ಲೊಂದು ಉದಾಹರಣೆ: ಬನ್ನಿ-ಕಳಲವಾಡಿ ಗ್ರಾಮ ರಾಯನಕೆರೆ ಸಮೀಪವಿರುವ ಮೈಸೂರಿನ ಇಂದ್ರಪ್ರಸ್ಥ. ನಾಗರಾಜರ ಅಂದಿನ ವಾನಪ್ರಸ್ಥ ಇಂದು ಇಂದ್ರಪ್ರಸ್ಥ.

"ಈ ಕೃಷಿಋಷಿಯ ಜ್ಞಾನವನ್ನು ಬಳಸಿಕೊಳ್ಳದ ಸರಕಾರದ ಬಗ್ಗೆ ಜಿಗುಪ್ಸೆ ಹುಟ್ಟಿತು..." ಪಾಂಡುರಂಗರು ಮಾತಿಗೆ ಮರುಳಾದದ್ದು ನಿಜ. ಮಾತು ಕೃತಿಯಲ್ಲಿ ಕಂಡಾಗ ಮಾತ್ರ ಅದಕ್ಕೆ ತೂಕ. ಕೃಷಿ ಕ್ಷೇತ್ರದಲ್ಲಿ ಏನನ್ನೂ ಸಾಧಿಸದ ಬೊಗಳೆಯನ್ನು ಭಾರತದ ಕೃಷಿ ನೀತಿ ರೂಪಿಸಲು ನಿಯೋಜಿಸಬೇಕು ಎಂಬಲ್ಲಿಯ ವರೆಗೆ ಶಿಫಾರಸು ಮಾಡಿ ವಾಚಕರನ್ನು ದಾರಿ ತಪ್ಪಿಸುವುದು ಅವಿವೇಕ.

ಮೈಸೂರು —ಎ. ಪಿ. ಚಂದ್ರಶೇಖರ

**'ಹಿಂದೂ' ಶಬ್ದದ ಅವಾಂತರ**

'ಕಸ್ತೂರಿ'ಯ ಎಪ್ರಿಲ್ ಸಂಚಿಕೆಯ ೯೬ ನೇ ಪುಟದಲ್ಲಿ ಪ್ರಕಟವಾಗಿರುವ 'ಹಿಂದೂ' ಶಬ್ದ ಹೇಗೆ ಬಂತು? ಚಿಕ್ಕ ಲೇಖನವನ್ನು ಓದಿ (ಲೇಖಕ ಚಿಂತಕ) ಈ ಪ್ರತಿಕ್ರಿಯೆ ಬರೆಯುತ್ತಿದ್ದೇನೆ. ಈ ಸಂದರ್ಭದಲ್ಲಿ ಜನವರಿ ೨೬, ೧೯೮೬ ರ 'ತರಂಗ'ದಲ್ಲಿ ಪ್ರಕಟವಾಗಿರುವ ಪ್ರಸಿದ್ಧ ವಿಮರ್ಶಕ ಭಗವಾನ್‌ರ 'ಹಿಂದೂ ಶಬ್ದದ ವಿವರಣೆ' ಎಂಬ ಲೇಖನವನ್ನು ತಾವು ಕೃಪೆ ಮಾಡಿ ಗಮನಿಸಬೇಕಾಗಿ ಪ್ರಾರ್ಥನೆ. ಆ ಲೇಖನದಲ್ಲಿ ಪ್ರಕಟವಾಗಿರುವ ವಿಚಾರಗಳನ್ನೂ ವಾಕ್ಯಗಳನ್ನೂ ಅನಾಮತ್ತಾಗಿ ಎತ್ತಿಕೊಂಡು ನಿಮ್ಮ 'ಚಿಂತಕ'ರು ಲೇಖಕೀಯ ವೈಭವವನ್ನು ಮೆರೆಸಿಕೊಂಡಿರುವುದನ್ನು ನೋಡಿದರೆ ಇವರು 'ಕಸ್ತೂರಿ'ಯ ಘನತೆಯನ್ನು ಕೆಳಗಿಳಿಸಲು ಪ್ರಯತ್ನಪಟ್ಟಂತಿದೆ. ಯಾವುದೇ ಆತುರದಿಂದ, ವಿವಿಧ ಮೂಲಗಳಿಂದ ವಿಷಯಗಳನ್ನು ತೆಗೆದುಕೊಳ್ಳಬಾರದೆಂದೇನೂ ಇಲ್ಲ. ಅದರೆ ಅವುಗಳ ಮೂಲ ಲೇಖಕರನ್ನು ಸ್ಮರಿಸಿಕೊಳ್ಳಬೇಕಾದುದು 'ಚಿಂತಕ'ರಂಥ ಲೇಖಕರ ಕರ್ತವ್ಯವೂ ಹೌದು, ಸೌಜನ್ಯವೂ ಹೌದು.

ಭಗವಾನ್‌ರೊಡನೆ ನಾನು ನಡೆಸಿದ ಸಂದರ್ಶನ ೧೯೮೧ರ 'ಕಸ್ತೂರಿ' ನವೆಂಬರ್‌ನಲ್ಲಿ ಪ್ರಕಟವಾಗಿದ್ದು, ಇಂದು ಸಹ ಎಷ್ಟೋ ಜನ ವಿಮರ್ಶಕರು ಅಲ್ಲಿನ ವಿಚಾರಗಳನ್ನು ತಮ್ಮದೆಂಬಂತೆ ಅಭಿವ್ಯಕ್ತಿಸಿಕೊಳ್ಳುತ್ತಿರುವುದು ನಮ್ಮ ಗಮನಕ್ಕೂ ಬಂದಿದೆ.

ಮೈಸೂರು —ತಿಪ್ಪೇಸ್ವಾಮಿ

ಕಸ್ತೂರಿ

ವರ್ಷ : ೩೦ ಮೇ ೧೯೮೬ ಸಂಚಿಕೆ : ೯

# ಶಿಷ್ಯ ಮತ್ತು ಕನ್‌ಫ್ಯೂಷಿಯಸ್

ಪ. ರಾಮಕೃಷ್ಣ ಶಾಸ್ತ್ರಿ

ಮಹಾತ್ಮ ಕನ್‌ಫ್ಯೂಷಿಯಸ್‌ನ ಶಿಷ್ಯರ ಪೈಕಿ ಒಬ್ಬ ಕೆಟ್ಟ ಗುಣದವನಿದ್ದ. ಇನ್ನೊಬ್ಬರನ್ನು ಹಿಂಸಿಸುವುದು, ಕದಿಯುವುದು, ಸುಳ್ಳು ಹೇಳುವುದು ಎಲ್ಲಾ ಅವನಿಗೆ ಪ್ರಿಯವಾಗಿತ್ತು.

ಶಿಷ್ಯನನ್ನು ತಿದ್ದಲು ಗುರು ಪ್ರಯತ್ನಪಟ್ಟ. ಸವಿ ಮಾತಿನಿಂದ ಹೇಳಿದ. ಒಂದು ಸಾರೆ ಹೊಡೆದ. ಆದರೂ ಆತ ದಾರಿಗೆ ಬರಲಿಲ್ಲ. ಕೊನೆಗೆ ಅವನಿಗೆ ಬುದ್ಧಿ ಹೇಳುವುದನ್ನು ಬಿಟ್ಟು ಅವನು ಒಂದು ಕೆಟ್ಟ ಕೆಲಸ ಮಾಡಿದ ಎಂಬ ಸುದ್ದಿ ಬರುತ್ತಲೇ ದೇವಮಂದಿರದ ಗೋಡೆಗೆ ಒಂದು ಮೊಳೆ ಹೊಡೆದಿಡುತ್ತಿದ್ದ. ಹೀಗೆ ಹೊಡೆದ ಮೊಳೆಗಳಿಂದ ಇಡೀ ಗೋಡೆ ತುಂಬಿತು.

ಒಂದು ದಿನ ಶಿಷ್ಯ ಕದಿಯುವಾಗ ರಾಜಭಟರ ಕೈಗೆ ಸಿಕ್ಕಿಬಿದ್ದ. ಅವನ ತಲೆ ಕಡಿಯಲು ವಧಾಸ್ಥಾನಕ್ಕೆ ಕರೆದೊಯ್ಯುವಾಗ ಆತ ಆರ್ತನಾಗಿ ಗುರುವನ್ನು ಕೂಗಿ ಕೂಗಿ ಕರೆದ. "ಇದೊಂದು ಸಲ ನನ್ನನ್ನು ಬಿಡಿಸಿ ಗುರುಗಳೇ. ಮುಂದೆ ಪ್ರಾಮಾಣಿಕನಾಗಿ ಬದುಕುತ್ತೇನೆ" ಎಂದು ಬೇಡಿಕೊಂಡ. ಕನ್‌ಫ್ಯೂಷಿಯಸ್‌ನ ಮಾತಿಗೆ ಮನ್ನಣೆಯಿತ್ತು ಶಿಷ್ಯನನ್ನು ಬಿಟ್ಟುಬಿಟ್ಟರು.

ಆಮೇಲೆ ಶಿಷ್ಯ ಕೆಟ್ಟ ಕೆಲಸ ಮಾಡುವುದನ್ನು ಬಿಟ್ಟು ಒಳ್ಳೆಯ ಕೆಲಸಗಳನ್ನೇ ಮಾಡಲಾರಂಭಿಸಿದ. ಆತ ಪ್ರತಿಯೊಂದು ಒಳ್ಳೆಯ ಕೆಲಸ ಮಾಡಿದಾಗಲೂ ಕನ್‌ಫ್ಯೂಷಿಯಸ್ ದೇವಮಂದಿರದ ಗೋಡೆಯಿಂದ ಒಂದು ಮೊಳೆ ಕಿತ್ತು ಹಾಕುತ್ತಿದ್ದ.

ಕೊನೆಯ ಮೊಳೆಯನ್ನು ಕೀಳುವ ದಿನ ಶಿಷ್ಯ ಉರಿಯುತ್ತಿದ್ದ ಮನೆಯೊಳಗೆ ಸಾಹಸದಿಂದ ಹೊಕ್ಕು ಸಾಯುತ್ತಿದ್ದ ಮಗುವನ್ನು ಉಳಿಸಿದ. ಆದರೂ ಅವನು ಕೆಟ್ಟವನೆಂದೇ ಭಾವಿಸಿದ ಜನ ಆತ ಕಳ್ಳತನಕ್ಕಾಗಿಯೇ ಒಳ ಹೊಕ್ಕನೆಂದು ತೀರ್ಮಾನಿಸಿ ಅವನಿಗೆ ಚೆನ್ನಾಗಿ ಹೊಡೆದುಬಿಟ್ಟರು. ಇದು ಕನ್‌ಫ್ಯೂಷಿಯಸ್‌ನಿಗೆ ತಿಳಿಯಿತು. ಶಿಷ್ಯ ತನ್ನ ಬಳಿಗೆ ಬರುವಾಗ ಕೊನೆಯ ಮೊಳೆಯನ್ನು ಆತ ಗೋಡೆಯಿಂದ ಕಿತ್ತೆಸೆದ.

ಶಿಷ್ಯ ತದೇಕ ದೃಷ್ಟಿಯಿಂದ ಗೋಡೆಯನ್ನೇ ನೋಡಿ, "ಗುರುಗಳೇ, ಗೋಡೆಯಿಂದ ಮೊಳೆಗಳನ್ನು ಕಿತ್ತು ತೆಗೆದ ಮೇಲೆ- ಮೊಳೆ ಹೊಡೆದ ಗುರುತುಗಳು ಇನ್ನೂ ಅಲ್ಲೇ ಶಾಶ್ವತವಾಗಿ ಉಳಿದು ಗೋಡೆ ಅಂದಗೆಟ್ಟಿದೆಯಲ್ಲ?" ಎಂದ.

"ಹೌದು ಮಗೂ. ಒಮ್ಮೆ ಕೆಟ್ಟ ಕೆಲಸಗಳನ್ನು ಮಾಡಿದರೂ ಹಾಗೆಯೇ. ಅವನು ಕೆಟ್ಟವನೆಂಬ ಅಪವಾದ ಹೋಗುವುದಿಲ್ಲ. ಆದ್ದರಿಂದ ಹಾಳು ಕೆಲಸ ಮಾಡುವ ಮುನ್ನ ಯೋಚಿಸಬೇಕು" ಎಂದ ಕನ್‌ಫ್ಯೂಷಿಯಸ್. ❀

## ಪ್ರಾರ್ಥನೆ

ಒಮ್ಮೆ ಇಬ್ಬರು ಮನುಷ್ಯರು ಪ್ರಾರ್ಥನೆ ಮಾಡುವುದಕ್ಕೆಂದು ದೇವಾಲಯಕ್ಕೆ ಹೋದರು. ಒಬ್ಬ ಫರಿಸಾಯ, ಮತ್ತೊಬ್ಬ ಸುಂಕ ಕೂಡಿಸುವವನು. ಫರಿಸಾಯರಲ್ಲಿ ಹೆಚ್ಚಿನವರು ತಾವು ಜ್ಞಾನಿಗಳು, ಭಕ್ತರು ಎಂಬ ಮನೋಭಾವದವರಾಗಿದ್ದು ತಮ್ಮನ್ನು ಶ್ರೇಷ್ಠರೆಂದು ಎಣಿಸಿಕೊಳ್ಳುತ್ತಿದ್ದರು. ಸುಂಕದವರು ಶ್ರೀಮಂತರಾಗಿದ್ದರೂ ಸಮಾಜದಲ್ಲಿ ಗೌರವ ಪಾತ್ರರಾಗಿರಲಿಲ್ಲ. ಇದು ಯೇಸುಕ್ರಿಸ್ತನ ಸೇವಾಕಾಲದಲ್ಲಿ ಪ್ಯಾಲೆಸ್ತೀನಿನ ಸ್ಥಿತಿಗತಿ. ಆ ಫರಿಸಾಯ ನಿಂತುಕೊಂಡು ತನ್ನೊಳಗೆ ಹೀಗೆ ಪ್ರಾರ್ಥಿಸಿದ. 'ದೇವರೇ, ಸುಲುಕೊಳ್ಳುವವರೂ ಅನ್ಯಾಯಗಾರರೂ ಹಾದರ ಮಾಡುವವರೂ ಆಗಿರುವ ಉಳಿದ ಜನರಂತೆ ನಾನಲ್ಲ, ಈ ಸುಂಕದವನಂತೆಯೂ ಅಲ್ಲ; ಆದ್ದರಿಂದ ನಿನಗೆ ಸ್ತೋತ್ರ ಮಾಡುತ್ತೇನೆ. ನಾನು ವಾರಕ್ಕೆ ಎರಡು ಸಲ ಉಪವಾಸ ಮಾಡುತ್ತೇನೆ; ನಾನು ಸಂಪಾದಿಸುವ ಎಲ್ಲದರಲ್ಲಿಯೂ ಹತ್ತರಲ್ಲೊಂದು ಪಾಲು ಕೊಡುತ್ತೇನೆ.'

ಅದೇ ವೇಳೆ ಆ ಸುಂಕದವನು ದೂರದಲ್ಲಿ ನಿಂತು ಆಕಾಶದ ಕಡೆಗೆ ಕಣ್ಣೆತ್ತಿ ನೋಡುವದಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡಿದುಕೊಳ್ಳುತ್ತಾ 'ದೇವರೇ, ಪಾಪಿಯಾದ ನನ್ನನ್ನು ಕರುಣಿಸು' ಅಂದನು.

ಈ ಇಬ್ಬರಲ್ಲಿ ಸುಂಕದವನು ನೀತಿವಂತನೆಂದು ನಿರ್ಣಯಿಸಲ್ಪಟ್ಟವನಾಗಿ ತನ್ನ ಮನೆಗೆ ಹೋದನು. ಫರಿಸಾಯನಾದರೋ ಏನೂ ಬದಲಾವಣೆ ಹೊಂದದೆ ಮನೆಗೆ ಹೋದನು.

ನೀತಿ : ತನ್ನನ್ನು ಹೆಚ್ಚಿಸಿಕೊಳ್ಳುವ ಪ್ರತಿಯೊಬ್ಬನು ತಗ್ಗಿಸಲ್ಪಡುವನು;
ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು.

ಆಧಾರ : ಬೈಬಲ್

-ವಿ. ಬಾಸೆಲ್ ಹನ್ಸ್

ಪಾ. ನಂ. ಆಚಾರ್ಯ



# ಬತ್ತಲೆ: ಮಂತ್ರದಲ್ಲಿ, ಮಾಟದಲ್ಲಿ, ಭಕ್ತಿಯಲ್ಲಿ

ಚಂದ್ರಗುತ್ತಿಯಲ್ಲಿ ಇತ್ತೀಚೆ ನಡೆದ ಘಟನೆ ದೇಶದ ಗಮನವನ್ನೆಲ್ಲ ಸೆಳೆದಿದೆ. ನಾಗರಿಕತೆಯು ಬಟ್ಟೆ ತೊಟ್ಟವರಿಗೆ ಬತ್ತಲೆ ಸೇವೆ ಅಂಧಶ್ರದ್ಧೆಯಾಗಿ, ಮೂಢ ನಂಬಿಕೆಯಾಗಿ ಗೋಚರಿಸುತ್ತದೆ. ಜಗದೋದ್ಧಾರದ ಹೊಣೆ ಹೊತ್ತವರು ಇಲ್ಲಿ ಕೈಹಾಕಿ ಕೈ ಸುಟ್ಟುಕೊಂಡದ್ದಕ್ಕೆ ಏನೇನೋ ಅರ್ಥಗಳನ್ನು ಹಚ್ಚಲಾಗುತ್ತಿದೆ. ಆದರೆ ಈ ಬತ್ತಲೆತನ ಮಾನವ ಸಂಸ್ಕೃತಿಯಲ್ಲೇ ವಿಶಿಷ್ಟ ಸ್ಥಾನ ಪಡೆದಿದೆಯೆಂಬುದನ್ನು ಲೇಖಕರಿಲ್ಲಿ ತೆರೆದು ತೋರುತ್ತಾರೆ.

ಬತ್ತಲೆ ಸೇವೆಯ ವಿಷಯ ಈಗ ತೀಕ್ಷ್ಣ ಪ್ರತಿಕ್ರಿಯೆ ಉಂಟುಮಾಡುವ ಪ್ರಶ್ನೆಯಾಗಿಬಿಟ್ಟಿದೆ. ಚಂದ್ರಗುತ್ತಿಯಲ್ಲಿ ವರ್ಷಕ್ಕೊಮ್ಮೆ ನಡೆಯುವ ಈ ವಿಧಿ, ದಲಿತರ ಪ್ರಶ್ನೆಯೊಡನೆ ತಳಕು ಬಿದ್ದಿರುವುದರಿಂದ ಅದರ ಉದ್ರೇಕಕಾರಕ ಶಕ್ತಿ ಹೆಚ್ಚಾಗಿದೆ. ಬತ್ತಲೆ ಸೇವೆ ನಡೆಯುತ್ತಿರುವುದು ಚಂದ್ರಗುತ್ತಿಯಲ್ಲಿ ಮಾತ್ರವಲ್ಲ, ಕರ್ನಾಟಕದಲ್ಲೇ ಹೇಳುವುದಾದರೆ ನಿಜಾಂ ಕರ್ನಾಟಕದ ಒಂದೆರಡು ಕಡೆ ಇಂಥ ವಾರ್ಷಿಕ ಸೇವೆ ಈಗಲೂ ನಡೆಯುತ್ತಿದೆಯೆಂದು ಕೇಳಿಬರುತ್ತದೆ. ನಿಜಾಮರ ಕಾಲದಲ್ಲಿ ಅದು ಸರಕಾರದ ಫರ್ಮಾನ್ ಮೂಲಕ ಹತ್ತಿಕ್ಕಲ್ಪಟ್ಟಿತ್ತೆಂದೂ ಹೈದರಾಬಾದಿನ ಬಿಡುಗಡೆಯ ನಂತರ ಬತ್ತಲೆ ಸೇವೆ ಪುನರುಜ್ಜೀವನಗೊಂಡಿತೆಂದೂ ತಿಳಿಯುತ್ತಿದೆ. ಒಂದು ಜನಾಂಗದ ಮನಸ್ಸನ್ನು ಹಿಡಿದುಕೊಂಡ ವಿಧಿಗಳ ಆಕರ್ಷಣ ಶಕ್ತಿ ಎಷ್ಟು ಪ್ರಬಲವಾಗಿರುತ್ತದೆಂದು ಇದು ತೋರಿಸುತ್ತದೆ. ಬತ್ತಲೆ ಸೇವೆಯ ಒಂದು ವೈಶಿಷ್ಟ್ಯವೆಂದರೆ ಅದನ್ನು ಒಪ್ಪಿಸುವವರು ಕೇವಲ ಹೆಂಗಸರು ಅಥವಾ ಗಂಡಸರಾಗಿರದೆ ಉಭಯತರೂ – ಅದೂ ಸಂಮಿಶ್ರವಾಗಿ ಅದನ್ನು



ಮಥುರಾದ (?) ಪ್ರೇಮದೇವತೆ

ಆಚರಿಸುವುದು. ಅದನ್ನು ಹತ್ತಿಕ್ಕಬೇಕು ಎನ್ನುವಾಗ ಮತ್ತೇನನ್ನಲ್ಲದಿದ್ದರೂ ಈ ಹರಕೆ ಹೊತ್ತವರು ಶುದ್ಧ ನಿಷ್ಕಲ್ಮಷ ಭಾವದಿಂದ ಅದನ್ನು ಪಾಲಿಸುತ್ತಾರೆಂಬ ಅಂಶವನ್ನು ಒಪ್ಪಬೇಕಾಗುತ್ತದೆ. ಯಾಕೆಂದರೆ, ದುರ್ಬುದ್ಧಿ ಇದ್ದದ್ದೇ ಆದರೆ ಸ್ತ್ರೀ–ಪುರುಷ ಮಿಶ್ರವಾದ ಈ ಸಾಮೂಹಿಕ ಸೇವೆಯ ಸಂದರ್ಭದಲ್ಲಿ ಹೆಂಗಸರಲ್ಲಿ ಅಲ್ಲದಿದ್ದರೂ ಗಂಡಸರಲ್ಲಿ ಕಾಮ ವಿಕಾರವನ್ನು ಮುಚ್ಚಿಕೊಳ್ಳುವುದು ಸಾಧ್ಯವಾಗಲಾರದು. ಈ ಸೇವೆ ಅಲ್ಲಿಗೆ ಹೋಗುವ ಪ್ರೇಕ್ಷಕರಿಗೆ ಒಂದು ವಿಕೃತ ಕುತೂಹಲವಾಗಿರಬಹುದು; ಆದರೆ ಹರಕೆ ಹೊತ್ತವರಿಗೆ ಅದು ಪ್ರಾಮಾಣಿಕ ಪ್ರಪತ್ತಿಯೇ ಸೈ.

ನಗ್ನವಿಧಿಯಲ್ಲಿ ಮಾನವ ಮನಸ್ಸಿನ ಅನೇಕ ಭಾವನೆಗಳು ಕೆಲಸ ಮಾಡುತ್ತವೆ. "ಮಾನ ಮುಚ್ಚಿಕೊಳ್ಳುವ" ಮಾನವ ಸಂಪ್ರದಾಯದಲ್ಲೇ ಬಹಳ ವೈವಿಧ್ಯವಿದೆ. ಉದಾಹರಣೆಗೆ, ಆಫ್ರಿಕದ ಕೆಲ ಜನಾಂಗಗಳಲ್ಲಿ ಹೆಣ್ಣು ಮದುವೆಯಾಗುವವರೆಗೆ ಮಾತ್ರ ಮಾನ ಮುಚ್ಚಿಕೊಂಡಿರಬೇಕಲ್ಲದೆ ಆಮೇಲೆ ಅವಳು ಬತ್ತಲೆಯಾಗಿರಬೇಕಂತೆ. ಮಾನ ಮುಚ್ಚಿಕೊಳ್ಳುವ ಕ್ರಮದಲ್ಲಿ ಅತಿ ಪ್ರಾಚೀನವಾದದ್ದು ಉಪಸ್ಥದ ಮೇಲೆ ಮಾತ್ರ ಒಂದಿಷ್ಟು ಹುಲ್ಲು ಕಟ್ಟಿಕೊಂಡಿರುವುದು. ಅಂದಮಾನ್ ನಿಕೋಬಾರ್ ದ್ವೀಪಗಳ ಒಂಗೆ ಜನಾಂಗದಲ್ಲಿ ಇಂದಿಗೂ ಅದರ ಉದಾಹರಣೆ ಸಿಗುತ್ತದೆ. ಅದರ ನಂತರದ್ದು ಸೊಂಟದ ಸುತ್ತ ಮಾತ್ರ ತೊಪ್ಪಲು ಕಟ್ಟಿಕೊಳ್ಳುವುದು. ಚಂದ್ರಗುತ್ತಿಯಲ್ಲಿ ಮನುಷ್ಯನ ಅತಿ ಪ್ರಾಚೀನವಾದ ಬತ್ತಲೆ ಸ್ಥಿತಿಯಲ್ಲಿ ಹೇಗೋ ಹಾಗೆ ಅದರ ಮುಂದಿನ ಅವಸ್ಥೆಯಾದ ಬರೇ ಸೊಪ್ಪು ಉಡುವ ಸೇವೆಯೂ ನಡೆಯುತ್ತಿದೆಯೆಂಬುದು ಕುತೂಹಲದ ಸಂಗತಿ. ಅನಂತರದ್ದು ಚರ್ಮಾಂಬರ. ಶಿವನು ಗಜಚರ್ಮಾಂಬರಧಾರಿಯೆಂದು ಪ್ರತೀತಿ. ಬ್ರಾಹ್ಮಣನಿಗೆ ಉಪನಯನಕಾಲದಲ್ಲಿ ಜನಿವಾರಕ್ಕೊಂದು ತುಣುಕು ಕೃಷ್ಣಾಜಿನವನ್ನು ಸುರಿದು ಇಡು

ವುದು ಆರ್ಯರ ಚರ್ಮಧಾರಿ ಅವಸ್ಥೆಯ ನೆನಪು ಕೊಡುತ್ತದೆ. ಅನಂತರದ ಉಣ್ಣೆಯ ಬಟ್ಟೆ; ಮುಂದೆ ನಾರಿನ ಮತ್ತು ಹತ್ತಿಯ ಬಟ್ಟೆ.

೨

ಸಂಪೂರ್ಣ ಮೈಮುಚ್ಚಿಕೊಳ್ಳುವುದು ನಾಗರಿಕ ಜನಾಂಗಗಳಲ್ಲಿ ಪ್ರಾರಂಭವಾದ ಮೇಲೆ ಕೂಡ ಬತ್ತಲೆತನದ ಬಗ್ಗೆ ಭಾವನೆಗಳು ಏಕರೂಪವಾಗಿರಲಿಲ್ಲ. ಪ್ರಾಚೀನ ಗ್ರೀಕ್ ಮತ್ತು ರೋಮನ್ ಶಿಲ್ಪಗಳಲ್ಲಿ ದೇವತೆಗಳನ್ನು ಮಾತ್ರವಲ್ಲ, ಪ್ರಸಿದ್ಧ ಮಾನವರನ್ನೂ ನಗ್ನವಾಗಿ ತೋರಿಸುತ್ತಿದ್ದರು. ಮಾನವನ ಸರ್ವಾಂಗಗಳು ಪವಿತ್ರವೆಂದೂ ಅವೆಲ್ಲ ಸರಿಯಾಗಿರುವುದೇ ಪ್ರಶಸ್ತವೆಂದೂ ಅವರ ಭಾವನೆಯಾಗಿತ್ತು. ಗ್ರೀಕರ ಓಲಿಂಪಿಕ್ ಕ್ರೀಡೆಗಳಲ್ಲಿ ಸ್ಪರ್ಧಿಗಳೆಲ್ಲರೂ ಬತ್ತಲೆಯಾಗಿಯೇ ಆಡೋಡುತ್ತಿದ್ದರು. ಈ ಆಟಗಳ ಪ್ರೇಕ್ಷಕ ವರ್ಗದಲ್ಲಿ ಹೆಂಗಸರೂ ಇರುತ್ತಿದ್ದರು. ಅದರಲ್ಲಿ ನಾಚತಕ್ಕದ್ದೇನೂ ಅವರಿಗೆ ಕಾಣಿಸುತ್ತಿದ್ದಿಲ್ಲ. ಮಹಾಭಾರತ, ಭಾಗವತ ಪುರಾಣಗಳ ಕಥೆಗಳಿಂದ ತರುಣಿಯರು ನದೀ ಸರೋವರಗಳಲ್ಲಿ ನಗ್ನವಾಗಿ ಸ್ನಾನಮಾಡುವುದು ದೇವ ದಾನವ ಗಂಧರ್ವ ಮಾನವರಲ್ಲಿ ಸಾಮಾನ್ಯವಾಗಿತ್ತೆಂದು ಅರ್ಥವಾಗುತ್ತದೆ, ಕೇರಳದಲ್ಲಿ ಈಚಿಗಿನ ವರೆಗೆ ಒಂದೇ ಕೆರೆಯಲ್ಲಿ ಸ್ತ್ರೀ–ಪುರುಷರು ಕೇವಲ ಕೌಪೀನಧಾರಿಗಳಾಗಿ ಸ್ನಾನಮಾಡುತ್ತಿದ್ದರೆಂದು ಕೇಳುತ್ತೇವೆ.

ಜಗತ್ತಿನ ಪ್ರಧಾನ ಜನಾಂಗಗಳಲ್ಲಿ ಯಹೂದ್ಯರು, ಮತ್ತು ಅವರ ಪ್ರಭಾವದಲ್ಲಿ ಬೆಳೆದ ಅರಬರು ಮಾತ್ರ ಬತ್ತಲೆಯನ್ನು ಅಧಮವೆಂದು ಬಗೆಯುತ್ತಾರೆ. ಇಜಿಪ್ತಿನಲ್ಲಿ ಬತ್ತಲೆ ನೃತ್ಯಗಳಿಗೆ ವಾದ್ಯಗಳನ್ನು ಬಾರಿಸುವ ಮುಸ್ಲಿಂ ಗಂಡಸರು ನರ್ತಕಿಯರಿಗೆ ಬೆನ್ನುಹಾಕಿ ಕೂಡುತ್ತಾರಂತೆ. ಪ್ರಾಚೀನ ಪಾಲಿಸ್ತಾನದಲ್ಲಿ ವಿಜೇತ ಗ್ರೀಕ್ ಮತ್ತು ರೋಮನ್ನರಿಗೂ ಜಯಿಸಲ್ಪಟ್ಟ ಯಹೂದ್ಯರಿಗೂ ಒಂದು ಮುಖ್ಯ ಘರ್ಷಣಾ



ಮಥುರಾದ ಯಕ್ಷಿ– ೨ನೇ ಶತಮಾನದ ಶಿಲ್ಪ

ಹೆಣ್ಣಿಗೆ ತನ್ನನ್ನು ಒಪ್ಪಿಸಿಕೊಳ್ಳುವ ಅಂತಿಮ ರೀತಿಯೆಂದರೆ ತಾನೊಲಿದವನ ಮುಂದೆ ಬತ್ತಲಾಗುವುದು. ಪ್ರಸಿದ್ಧ ಫ್ರೆಂಚ್ ಕಾದಂಬರಿಕಾರ ಮಾರ್ಸೆಲ್ ಪ್ರೌಸ್ತ್ ತನ್ನೊಂದು ಅನುಭವವನ್ನು ಹೇಳಿದ್ದಾನೆ. ಅವನು ಪ್ರಸಿದ್ಧನಾದ ಮೇಲೊಂದು ದಿನ ಚಳಿಗಾಲದ ಬೆಳಿಗ್ಗೆ ಅವನ ಕೋಣೆಗೆ ಏಕಾಂಗಿಯಾಗಿ ಒಬ್ಬ ತರುಣಿ ಬಂದು ಅವನಿಗೆ ತನ್ನ ಆತ್ಯಂತಿಕವಾದ ಮೆಚ್ಚುಗೆಯನ್ನು ನಿವೇದಿಸುತ್ತಾ ತಾನು ಹಾಕಿಕೊಂಡಿದ್ದ ಓವರ್ ಕೋಟನ್ನು ಬಿಚ್ಚಿದಳಂತೆ. ಒಳಗೆ ಅವಳು ಸಂಪೂರ್ಣ ಬತ್ತಲಾಗಿದ್ದಳು.

ಕಾರಣ ಬತ್ತಲೆತನದ ಬಗ್ಗೆ ಎರಡು ಜನಾಂಗ ಗಳಲ್ಲಿದ್ದ ಭಿನ್ನ ಮನೋವೃತ್ತಿಗಳು ಎಂದು ಜೇಮ್ಸ್ ಮಿಚನರ್ ಬರೆದಿದ್ದಾರೆ.

ವೈದಿಕ ಆಚಾರಸಂಹಿತೆಯಲ್ಲಿ ಸ್ವಂತ ಹೆಂಡತಿ ಯನ್ನೇ ಆದರೂ ಬತ್ತಲೆಯಾಗಿ ಸ್ನಾನ ಮಾಡು ವಾಗ ನೋಡಬಾರದೆಂಬ ವಿಧಿ ಇದೆ. ಬತ್ತಲೆ ಯಲ್ಲಿ ಹೆಣ್ಣನ್ನು ಕಂಡರೆ ಅವನು ಗಂಡನೇ ಸೈ ಎಂಬೊಂದು ನಂಬಿಕೆಯೂ ಇತ್ತು. ಶರ್ಮಿಷ್ಠೆ ಯಿಂದ ಬತ್ತಲೆಯಾಗಿ ಬಾವಿಗೆ ತಳ್ಳಲ್ಪಟ್ಟ ದೇವಯಾನಿಯನ್ನು ಯಯಾತಿ ಎತ್ತಿ ಪಾರು ಮಾಡಿದಾಗ ಅವಳು, "ನೀನು ನನ್ನನ್ನು ಬತ್ತಲೆಯಲ್ಲಿ ಕಂಡದ್ದರಿಂದ ನೀನೇ ನನ್ನನ್ನು ಮಾಡಿಕೋ," ಎಂದು ಅವಳು ಗಂಟುಬೀಳುತ್ತಾಳೆ. ತದ್ವಿರುದ್ಧವಾಗಿ ಒಂದೆರಡು ಬ್ರಾಹ್ಮಣ ಪಂಗಡ ಗಳಲ್ಲಿಯೇ ಗಂಡನಲ್ಲದವನ ಮುಂದೆ ಕೂಡ, ಅವನು ಮದುವೆಯಾಗಿ ಶೋಭನ ಪ್ರಸ್ತವಾ ದವನಿದ್ದರೆ, ಹೆಂಗಸರು ಬತ್ತಲೆಯಾಗಿ ಸ್ನಾನ ಮಾಡಲು ಅಡ್ಡಿಯಿಲ್ಲ ಎಂಬ ರೂಢಿ ಈಚೆಗಿನ ವರೆಗೆ ಇತ್ತೆಂದು ಕೇಳಿದ್ದೇನೆ. ಮೈನೆರೆಯದ ಹುಡುಗಿಗೆ ನಗ್ನಿಕಾ ಎಂಬ ಹೆಸರು ಸಂಸ್ಕೃತ ದಲ್ಲಿರುವುದು ಅರ್ಥಪೂರ್ಣವಾಗಿದೆ.

೩

ತಾಂತ್ರಿಕ ಮತ್ತು ಆಧ್ಯಾತ್ಮಿಕ ಆಚರಣೆಗಳಲ್ಲಿ ನಗ್ನತ್ವ ಬೇರೆ ಬೇರೆ ಸ್ತರಗಳಲ್ಲಿ ವರ್ತಿಸುತ್ತ ಬಂದಿದೆ. ಅತ್ಯಂತ ಉಚ್ಚ ಸ್ತರದಲ್ಲಿ ಆಧ್ಯಾತ್ಮಿಕ ನಗ್ನತ್ವ ನಿಲ್ಲುತ್ತದೆ. ಸಾಧನೆಯ ತುತ್ತತುದಿ ಗೇರಿದ ಧೀರರು ಅವಧೂತ ಮಾರ್ಗದಲ್ಲಿ ಕೌಪೀನವನ್ನು ಕೂಡ ತೊರೆದು ಅರಣ್ಯಗಳಲ್ಲಿ ಸಂಚರಿಸುತ್ತಿದ್ದರು. ವಸ್ತ್ರತ್ಯಾಗವೆಂಬುದು ಪ್ರಪಂಚದ ಸರ್ವಸಂಗವನ್ನು ತ್ಯಜಿಸುವುದಕ್ಕೆ ಸಂಕೇತವಾಗಿತ್ತು. ಶಿವನು ಸ್ವತಃ ದಿಗಂಬರ ನಾಗಿದ್ದ. ದಿಗಂಬರತ್ವ ಪುರುಷನಲ್ಲಿ ಇಂದ್ರಿಯ ನಿಗ್ರಹದ ಪರಾಕಾಷ್ಠೆಯಾಗಿತ್ತು. ಶಿವನ ಭಿಕ್ಷಾ ಟನ ಮೂರ್ತಿಯೂ ಬತ್ತಲೆಯೇ ಆಗಿತ್ತು. ಜೈನರಲ್ಲಿ ದಿಗಂಬರತ್ವ ಒಂದು ಅವಶ್ಯ ಸಂಪ್ರ ದಾಯವಾಗಿದೆ. ವಸ್ತ್ರವೆಂಬುದು ಅಹಂಕಾರದ ಗುರುತು. ರವೀಂದ್ರನಾಥ ಠಾಕೂರರು "ಮಲಿನ ವಸ್ತ್ರ ಛೇಡತೇ ಹಬೇ! ಆಮಾರ್ ಮಲಿನ ಅಹಂಕಾರ" ಎಂದು ಗೀತಾಂಜಲಿಯ ಒಂದು ಹಾಡಿನಲ್ಲಿ ಹೇಳುತ್ತಾರೆ. (ಮಲಿನ ವಸ್ತ್ರ ಬಿಡಲಿಕ್ಕೇ ಬೇಕು! ನನ್ನ ಮಲಿನ ಅಹಂಕಾರ). ಆದರೆ ಸಂಗ ಪರಿತ್ಯಾಗದ ಪರಾಕಾಷ್ಠೆಯನ್ನು ಅಪೇಕ್ಷಿಸಿದ ಜೈನರು ಕೂಡ, ಸ್ತ್ರೀಯರಿಗೆ ಸಂನ್ಯಾಸವಿತ್ತರೂ ಅವರಿಗೆ ದಿಗಂಬರತ್ವವನ್ನು ಅನುಮತಿಸಲಿಲ್ಲ. ಆದರೂ ಹನ್ನೆರಡನೇ ಶತ ಮಾನದ ಅಕ್ಕಮಹಾದೇವಿ ವೈರಾಗ್ಯ ತಾಳಿ ಚನ್ನಮಲ್ಲಿಕಾರ್ಜುನನಿಗೆ ಸಂಪೂರ್ಣ ಶರಣಾಗತ ಳಾಗಿ ತನ್ನದೆಂಬುದೇನೂ ಇಲ್ಲವೆಂದು ದಿಗಂಬರಿ ಯಾಗಿ ನಿಶ್ಶಂಕೆಯಿಂದ ಸಂಚರಿಸಿದಳು.

ವಾಮಾಚಾರ ಸಾಧನೆಯಲ್ಲಿ ಬತ್ತಲೆ ಪ್ರಧಾನ ವಾಗಿತ್ತು. ಸಾಧಕನಿಗೆ ಒಂದು ಮಟ್ಟದಲ್ಲಿ

ಪ್ರಾಯಪ್ರಬುದ್ಧಳಾದ ಬತ್ತಲೆ ತರುಣಿಯನ್ನು ತೊಡೆಯ ಮೇಲೇರಿಸಿಕೊಂಡು ಧ್ಯಾನಾರೂಢನಾಗಲು ಕೇಳಿಕೊಳ್ಳಲಾಗುತ್ತಿತ್ತು. ರಾಮಕೃಷ್ಣ ಪರಮಹಂಸರು ಇಂಥ ದಿವ್ಯದಿಂದ ಪ್ರಪ್ರಥಮ ಪ್ರಯತ್ನದಲ್ಲಿಯೇ ಉತ್ತೀರ್ಣರಾದರೆಂದು ಓದುತ್ತೇವೆ. ಸಾಧನೆಯ ಪರ್ಯವಸಾನದಲ್ಲಿ ದಕ್ಷಿಣೇಶ್ವರ ದೇವಾಲಯದಲ್ಲಿ ಅವರು ಬಹಿರಂಗವಾಗಿ ಷೋಡಶೀ ಪೂಜೆ ಮಾಡಿ ವ್ರತೋದ್ಯಾಪನೆ ಮಾಡಿದರು. ಷೋಡಶೀ ಪೂಜೆಯಲ್ಲಿ ಹದಿನಾರು ವರ್ಷದ ನಗ್ನ ತರುಣಿಯನ್ನು ಪೀಠದಲ್ಲಿ ಕೂಡಿಸಿ ಜಗನ್ಮಾತೆಯನ್ನು ಅವಳಲ್ಲಿ ಅಧಿಷ್ಠಾಪಿಸಿ ಆರಾಧಿಸಬೇಕು.

೪

ಮಂತ್ರ ತಾಂತ್ರಿಕ ಆಚರಣೆಗಳಲ್ಲಿ ಬತ್ತಲೆತನ ಒಂದು ಮುಖ್ಯ ಅಂಶವಾಗಿ ಜಗತ್ತಿನಲ್ಲೆಲ್ಲ ಈಚಿಗಿನ ವರೆಗೆ ಗ್ರಹಿಸಲ್ಪಟ್ಟಿತ್ತು. ಬತ್ತಲೆತನದಿಂದ ಮೇಲೆದ್ದು ಬಟ್ಟೆಯನ್ನು ಸ್ವೀಕರಿಸಿದ ಮನುಷ್ಯ ಈ ಮುಚ್ಚಿಕೊಳ್ಳುವಿಕೆಯ ವಿರುದ್ಧ ಒಂದು ಮಾನಸಿಕ ಶಂಕೆಯನ್ನು ಉಳಿಸಿಕೊಂಡು ಬಂದಿದ್ದಾನೆ. ಬಟ್ಟೆಗೆ ಮೈಲಿಗೆ ಅಂಟುತ್ತದೆ. ಉದಾಹರಣೆಗೆ ಶಿವಭಕ್ತರ ಬಟ್ಟೆಯನ್ನು ಮಡಿ ಮಾಡಿ ಒಯ್ಯುವಾಗ ಶೈವೇತರರು ಮುಟ್ಟಿದರೆ ಅವರನ್ನು ಹೊಡೆದು ಹಾಕುವುದಾಗಿ ಮಡಿವಾಳ ಮಾಚಯ್ಯ ಪ್ರತಿಜ್ಞೆ ಮಾಡಿದ್ದ. ಮೈಲಿಗೆ ಅಂಟಿದ ಮೇಲೆ ಆ ಬಟ್ಟೆಯಲ್ಲಿ ಮಾಡಿದ ಆರಾಧನೆ ಫಲ ಕೊಡುವುದಿಲ್ಲ. ಆದ್ದರಿಂದ ಮೈಲಿಗೆಯ ಭಯವಿಲ್ಲದಂತೆ ವಿವಸ್ತ್ರವಾಗಿರುವುದೇ ಲೇಸು. ಹೀಗೆ ಅಕಸ್ಮಾತ್ತಾಗಿ ಉಟ್ಟ ಬಟ್ಟೆ ಮೈಲಿಗೆಯಾದರೆ, ಮಡಿಯಲ್ಲಿ ಮಾಡಬೇಕಾದ ಕೆಲಸವನ್ನು (ಯಾರೂ ನೋಡದಂತೆ ಅನ್ನಿ) "ಬಿಚ್ಚುಮಡಿ"ಯಲ್ಲಿ ಮಾಡುತ್ತಿದ್ದ ಹೆಂಗಸರೂ ನನಗೆ ಗೊತ್ತು.

ಅಥವಾ ಒಂದು ಅನುಷ್ಠಾನದಲ್ಲಿ ಉಪಯೋಗಿಸಿದ ಬಟ್ಟೆಯಲ್ಲಿ ಇನ್ನೊಂದನ್ನು ಆಚರಿಸುವುದು ನಿಷಿದ್ಧ–ಎಂಬ ಒಂದು ವಿಚಾರವೂ ಇದೆಯೆಂದು ಎನ್. ಎಂ. ಪೆನ್ಜರ್ ಬರೆಯುತ್ತಾನೆ. ಈ ನಿಷೇಧದಿಂದ ಮುಕ್ತವಾಗಲೆಂದು ಬತ್ತಲೆ ಅನುಷ್ಠಾನದ ಸಂಪ್ರದಾಯ ಬೆಳೆದಿರಬಹುದೆಂದೂ ಆತ ಹೇಳುತ್ತಾನೆ.

ಮಂತ್ರ–ಮಾಟದಂಥ ಅಲೌಕಿಕ ಆಚರಣೆಗಳಲ್ಲಿ ಅಲೌಕಿಕವಾದ ರೀತಿಯೇ ಯುಕ್ತ ಎನ್ನುವ ತಿಳಿವಳಿಕೆಯೂ ಇತ್ತು. ನಗ್ನತ್ವ ಒಂದು ಅಲೌಕಿಕ ಅವಸ್ಥೆಯೇ ಅಲ್ಲವೇ? ನಗ್ನತ್ವಕ್ಕೆ ಭೂತ ಪ್ರೇತ ಪಿಶಾಚಿಗಳನ್ನು ಒಲಿಸುವ, ಹೆದರಿಸುವ ಶಕ್ತಿ ಇದೆಯೆಂಬ ನಂಬಿಕೆ ಇತ್ತು; ಬತ್ತಲೆ ಸ್ಥಿತಿಯಲ್ಲಿ ಮಾಡಿದ ಅನುಷ್ಠಾನಕ್ಕೆ ಅಪಾರ ಬಲ ಬರುತ್ತದೆ. ಔಷಧ ನಿರ್ಮಾಣದಿಂದ ಭೂತವಶೀಕರಣದ ವರೆಗೆ ಅನೇಕ ಕ್ಷೇತ್ರಗಳಲ್ಲಿ ಪ್ರಾಚೀನ ಮತ್ತು ಮಧ್ಯಯುಗೀನ ಮನುಷ್ಯ ದಿಗಂಬರತ್ವವನ್ನು ಬಳಸಿಕೊಂಡಿದ್ದಾನೆ.

ನಾನು ಚಿಕ್ಕಂದಿನಲ್ಲಿ ಕೇಳಿದ ಪ್ರಕಾರ ಕೆಲವು ಗಿಡಮೂಲಿಕೆಗಳನ್ನು ಬೆಳಗಿನ ಜಾವ ನಗ್ನಾವಸ್ಥೆಯಲ್ಲಿ ಸಂಗ್ರಹಿಸಿ ಅವುಗಳ ಶಕ್ತಿಯನ್ನು ಹೆಚ್ಚಿಸಬಹುದು. ಉದಾಹರಣೆಗೆ ಒಂದೆಲಗ ಅಥವಾ ತೆಮರೆ (ಉರಗೆ)ಯೆಂಬ ಸಸ್ಯವನ್ನು ಸೂರ್ಯೋದಯಕ್ಕೆ ಮುಂಚೆ ನಗ್ನಾವಸ್ಥೆಯಲ್ಲಿ ಕೈಯಲ್ಲಿ ಮುಟ್ಟದೆ ಬಾಯಿಂದಲೇ ಪ್ರಾಣಿಗಳ ಹಾಗೆ ೪೮ ದಿನಗಳ ವರೆಗೆ ಮೆದ್ದರೆ ಸಿದ್ಧಿಯಾಗುತ್ತದೆ. ಸ್ಮಶಾನ ಕಾಳಿಯ ವಶೀಕರಣಕ್ಕಾಗಿ, ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಬತ್ತಲೆಯಾಗಿ ಸ್ಮಶಾನಕ್ಕೆ ಹೋಗಬೇಕು. ರಾತ್ರಿ ನಿರ್ಜನ ಪ್ರದೇಶದಲ್ಲಿ ಒಂಟಿಯಾಗಿ ದಾರಿ ನಡೆಯುವ ಪ್ರಸಂಗ ಬಂದಲ್ಲಿ ಹೆಣ್ಣು ಪಿಶಾಚಿಯಿಂದ ತಪ್ಪಿಸಿಕೊಳ್ಳಬೇಕಾದರೆ ಉಟ್ಟ ಬಟ್ಟೆಯನ್ನು ಕಳಚಿ ತಲೆಗೆ ಸುತ್ತಿಕೊಳ್ಳಬೇಕು. ಯಾಕೆಂದರೆ, ಪಿಶಾಚಿಗಳಿಗೆ ಯಾಕೊ ಏನೋ ಬತ್ತಲೆಯೆಂದರೆ ಭಯ! ಕೆಲ ಅತಿಮಾನುಷ ಜೀವಿಗಳನ್ನು ಬತ್ತಲೆಯಾಗಿಯೇ ಚಿತ್ರಿಸುವುದು

ಶಿಲ್ಪ ಸಂಪ್ರದಾಯ. ಉದಾಹರಣೆಗೆ, ಸಾಂಚಿ ಸ್ತೂಪದಲ್ಲಿ ಸುಂದರವಾದ ಯಕ್ಷಿಣಿಯನ್ನು ಬತ್ತಲೆಯಾಗಿ ಕೆತ್ತಿದೆ. ನಾಗಾರ್ಜುನಕೊಂಡದ ಶಿಲ್ಪಗಳಲ್ಲಿಯೂ ಇಂಥ ನಿರ್ವಾಣ ಸುಂದರಿಯರಿದ್ದಾರೆ. ಲಜ್ಜಾಗೌರಿ ಮೊದಲಾದ ಮಾತೃ ದೇವತೆಗಳ ವಿಗ್ರಹಗಳು ಬತ್ತಲೆಯಾಗಿರುತ್ತವೆ. ಚಂದ್ರಗುತ್ತಿಯ ಮಾತಂಗಿಯೂ ಹೀಗೇ ಇದ್ದಾಳೋ ಏನೋ.

ನೈಸರ್ಗಿಕ ಶಕ್ತಿಗಳನ್ನು ಹೆದರಿಸಿ ನಮಗನುಕೂಲವಾಗಿ ವರ್ತಿಸುವಂತೆ ಮಾಡಲು ಬೆತ್ತಲೆತನದ – ಅದೂ ಹೆಂಗಸರ ನಿರ್ವಸ್ತ್ರ ಅವಸ್ಥೆಯ – ಪ್ರಯೋಗ ಜಗದ್ವ್ಯಾಪಿಯಾದ ಉಪಾಯವಾಗಿದೆ. ವಿಶೇಷವಾಗಿ ಬರಗಾಲ ಬಿದ್ದಲ್ಲಿ ದೇವತೆಗಳನ್ನು ನಾಚಿಸಿ ಮಳೆ ಕೊಡುವಂತೆ ಮಾಡಲು ಬತ್ತಲೆ ಹೆಂಗಸರು ಉಪಯೋಗ ಬೀಳುತ್ತಾರೆ. ಮಾನವಶಾಸ್ತ್ರದಲ್ಲಿ ಒಂದು ಮಹಾ ಆಧಾರ ಗ್ರಂಥವಾದ ಫ್ರೇಜರನ "ಗೋಲ್ಡನ್ ಬೋ" ಗ್ರಂಥದಲ್ಲಿ ಇಂಥ ಅಸಂಖ್ಯ ಉದಾಹರಣೆಗಳು ದೊರೆಯುತ್ತವೆ. ಕ್ರೈಸ್ತ ಧರ್ಮಕ್ಕೆ ಪರಿವರ್ತಿತವಾದ ಮೇಲೂ ಯುರೋಪಿನಲ್ಲಿ ಇಂಥ ವಿಧಿಗಳು ಜರಗುತ್ತಿದ್ದವು. ಈ ಶತಮಾನದ ಆರಂಭದ ವರೆಗೂ ರುಮೇನಿಯದಲ್ಲಿ ಬರಗಾಲ ಬಿದ್ದರೆ ಹುಡುಗಿಯರೂ ಪ್ರಬುದ್ಧ ಹೆಂಗಸರೂ ರಾತ್ರಿ ಬತ್ತಲೆಯಾಗಿ ಹಳ್ಳಿಯ ಗಡಿ ಪ್ರದೇಶಕ್ಕೆ ಹೋಗಿ ಒಂದೊಂದು ತಂಬಿಗೆ ನೀರನ್ನು ನೆಲಕ್ಕೆ ಚೆಲ್ಲುತ್ತಿದ್ದರು. ರಶಿಯದಲ್ಲಿ ಮಳೆ ಬರಿಸುವುದಕ್ಕಾಗಿ ಬತ್ತಲೆ ಹೆಂಗಸರು ಹಳ್ಳಿಯ ಸುತ್ತ ರಂಟೆ ಹೊಡೆಯುವುದಿತ್ತು.

ಭಾರತದಲ್ಲಿ – ಅದೂ ಆರ್ಯೇತರ ಜನಾಂಗಗಳ ನೆಲೆ ನಾಡುಗಳಲ್ಲಿ, ಇಂಥ ನಗ್ನವಿಧಿಗಳು ಧಾರಾಳವಾಗಿವೆ. ಮಿರ್ಜಾಪುರ ಜಿಲ್ಲೆಯಲ್ಲಿ ೧೮೯೨ರಲ್ಲಿ ದೀರ್ಘ ಅನಾವೃಷ್ಟಿಯ ನಂತರ ರಾತ್ರಿಯ ಎರಡನೇ ಜಾವದಲ್ಲಿ ಮೂವರು ಹೆಂಗಸರನ್ನು ವಿವಸ್ತ್ರರನ್ನಾಗಿ ಮಾಡಿ ಇಬ್ಬರನ್ನು ಎತ್ತುಗಳಂತೆ ನೊಗಕ್ಕೆ ಕಟ್ಟಿ ಮೂರನೆಯವಳಿಂದ ಉಳುವ ಸಾಂಕೇತಿಕ ಕ್ರಿಯೆ ಮಾಡಿಸಿದ ಮೇಲೆ (ಆ ವರೆಗೆ ಗಂಡಸರಿಗೆ ಅಲ್ಲಿ ಪ್ರವೇಶ ನಿಷಿದ್ಧವಾಗಿತ್ತು.) ಪಟೇಲ್ ಶಾನುಭಾಗರು ಬಂದು ಹೊಲದಲ್ಲಿ ಒಂದೊಂದು ಹಿಡಿ ಧಾನ್ಯವನ್ನು ಚೆಲ್ಲುತ್ತಿದ್ದರಂತೆ. ಆಮೇಲೆ ತಾನೇ ಬತ್ತಲೆ ಹೆಂಗಸರು ಬಟ್ಟೆ ಧರಿಸುತ್ತಿದ್ದರು. ಮಣಿಪುರದ ಮೇಥಿ ಜನಗಳಲ್ಲಿ, ಮಳೆ ಬಾರದಿದ್ದರೆ, ರಾಜನ ಮುಂದಾಳ್ತನದಲ್ಲಿ ಅವನೂ ಸೇರಿ ಗಂಡಸರೆಲ್ಲ ಬತ್ತಲೆಯಾಗಿ ಒಬ್ಬರನ್ನೊಬ್ಬರು ಅವಾಚ್ಯವಾಗಿ ಬಯ್ಯುತ್ತ ಗಲ್ಲಿ ಗಲ್ಲಿ ತಿರುಗುವುದೂ ಹೆಂಗಸರು ಬತ್ತಲೆಯಾಗಿ ಒಂದು ಒನಕೆಯನ್ನು ಒಯ್ದು ನದಿಯಲ್ಲಿ ಚೆಲ್ಲಿ ಕೊಡುವುದೂ (ಇರುಳಲ್ಲಿ) ಇತ್ತು. ಬಂಗಾಲದ ಪೂರ್ವ ಗಡಿಯಲ್ಲಿರುವ ರಂಗಪುರದಲ್ಲಿ ಬರಗಾಲ ಬಿದ್ದಾಗ ಬತ್ತಲೆ ಹೆಂಗಸರು ರಾತ್ರಿ ಬಾಳೇ ಗಿಡವನ್ನು ಹುದುಂ ದೇವನ ಪ್ರೀತ್ಯರ್ಥವಾಗಿ ನಟ್ಟು ಅದರ ಸುತ್ತ ಅಶ್ಲೀಲ ಹಾಡುಗಳನ್ನು ಹಾಡುತ್ತ ಕುಣಿಯುತ್ತಿದ್ದರೆಂದು ಸರ್ ಜಾರ್ಜ್ ಗ್ರಿಯರ್‌ಸನ್ ಬರೆಯುತ್ತಾನೆ. ಈ ದೇವತೆ ಆಸ್ಟ್ರಿಕ್ ಜನಾಂಗದವನು.

ಪುತ್ರಕಾಮಿನಿಯರಾದ ಬಂಜೆಯರಿಗಾಗಿ ಕೂಡ ಅನೇಕ ನಗ್ನವಿಧಿಗಳು ನಿಗದಿತವಾಗಿದ್ದವು. ಪಂಜಾಬಿನಲ್ಲಿ ದೀಪಾವಳಿ ವೇಳೆ ಮಂಗಳ ಅಥವಾ ರವಿವಾರ ಬಾವಿಯಲ್ಲೋ ಅರಳೀ ಮರದ ಬುಡದಲ್ಲೋ ಬತ್ತಲೆಯಾಗಿ ಮೀಯುವಂತೆ ಮಾಡಿಸಿ ಊರ ಮಂತ್ರವಾದಿಯ ಸಹಾಯದಿಂದ "ಚೌಕಪೂರ್ಣ" ಎಂಬ ಪೂಜೆಯನ್ನು ಬಂಜೆಯರಿಂದ ಮಾಡಿಸಲಾಗುತ್ತಿತ್ತು. ಅಥವಾ ಬಂಜೆಯರನ್ನು ರಾತ್ರಿ ಹೊತ್ತು ನಾಲ್ಕು ರಸ್ತೆ ಕೂಡುವಲ್ಲಿ, ಆಲ, ಅರಳಿ, ಮಾವು, ಅತ್ತಿ, ಶಿರೀಷ ಎಂಬ ಪಂಚ ಮಹಾವೃಕ್ಷಗಳ ತಳಿರುಗಳ ಹಾಸಿನ ಮೇಲೆ ಕೂರಿಸಿ ಐದು ಬಾವಿಗಳ ನೀರು ತಂದು ತೂತು ತಂಬಿಗೆಗಳಿಂದ ಆ ನೀರಿನ ಧಾರೆಗಳನ್ನು ಅವರ ಮೇಲೆ ಅಭಿಷೇಕ ಮಾಡಲಾಗುತ್ತಿತ್ತು. ನೀರು ವೀರ್ಯವಲ್ಲವೇ!

ಗುಣವಾಗದ ರೋಗಗಳ ನಿವೃತ್ತಿಗೂ ಬತ್ತಲೆ ವಿಧಿಗಳಿದ್ದವು. ಕಥಾಸರಿತ್ಸಾಗರದ ಒಂದು ಕಥೆಯಲ್ಲಿ ಪಿಶಾಚೋಪದ್ರವದಿಂದ ಬಂದ ರೋಗದ ನಿವೃತ್ತಿಗಾಗಿ, ನಿತ್ಯ ಬೆಳಗಿನ ಜಾವ ಒಂದು ಬೋಗಸೆ ಅಕ್ಕಿಯನ್ನು ನಿರ್ವಸ್ತ್ರವಾಗಿ ಒಯ್ದು ನಾಲ್ಕು ದಾರಿ ಕೂಡುವಲ್ಲಿ ಚೆಲ್ಲಬೇಕೆಂದು ರೋಗಿಗೆ ಸಲಹೆ ಕೊಡಲಾಗಿದೆ. ಹನುಮಂತನ ಕುಲದವರೆಂದು ಹೇಳಿಕೊಳ್ಳುವ ಉರಾಂವ್ ಜನಾಂಗದವರಲ್ಲಿ, ಸುಗ್ಗಿಯ ವೇಳೆ ನೊಣಗಳ ಬಾಧೆಯ ನಿವೃತ್ತಿಗಾಗಿ ಒಂದು ನಗ್ನ ವಿಧಿಯಿದೆ. ಊರಿನ ತರುಣರೆಲ್ಲ ಬತ್ತಲೆಯಾಗಿ ಆಮೇಲೆ ಭತ್ತದ ಹುಲ್ಲು ಸುತ್ತಿಕೊಂಡು ಮನೆ ಮನೆಗೆ ಹೋಗಿ ಭಿಕ್ಷೆ ಬೇಡಬೇಕು!

೫

ಆಧ್ಯಾತ್ಮಿಕವಾಗಿ, ಬತ್ತಲೆಯಾಗುವುದು ಸರ್ವಸಂಗ ಪರಿತ್ಯಾಗದ ದ್ಯೋತಕವಾಗಿದ್ದರೆ ಸಾಮಾಜಿಕ ಮತ್ತು ಧಾರ್ಮಿಕವಾಗಿ ಅದು ಶರಣಾಗತಿ ಮತ್ತು ಸಮರ್ಪಣ ಭಾವದ ಸಂಕೇತವಾಗಿದೆ. ಸೊಂಟದ ಮೇಲೆ ಬರಿ ಮೈಯಲ್ಲಿರುವುದು ದೇವಾಲಯಗಳಲ್ಲಿ ಗಂಡಸರಿಗೆ ಅನೇಕ ಕಡೆ ಅವಶ್ಯ ನಿಯಮವಾಗಿದೆ. ಇದು ಹಿಂದುಗಳಲ್ಲಿ ಮಾತ್ರವಲ್ಲದೆ ಮುಸ್ಲಿಮರಲ್ಲಿಯೂ ಇದೆ. ಮಕ್ಕಾದ ಕಾಬಾ ದೇವಸ್ಥಾನದಲ್ಲಿ ಪ್ರದಕ್ಷಿಣೆ ಮಾಡುವಾಗ ಸೊಂಟದ ಮೇಲೆ ಬರಿಮೈಯಲ್ಲಿರಬೇಕಾಗುತ್ತದೆಂದು ರಾಬರ್ಟ್‌ಸನ್ ಸ್ಮಿತ್ ಹೇಳಿದ್ದಾನೆ. ಹಿರಿಯರ ಮುಂದೆ ಮೈ ಮುಚ್ಚಿಕೊಳ್ಳದಿರುವುದು ಬ್ರಾಹ್ಮಣರಲ್ಲಿ ಒಂದು ಶಿಷ್ಟಾಚಾರವಾಗಿತ್ತು.

ಸಾಮಾಜಿಕ ಅಂತಸ್ತಿಗೂ ಬರಿಮೈಗೂ ಸಂಬಂಧವಿದೆ. ಕೇರಳದ ನಾಯರ್ ಹೆಂಗಸರಿಗೆ ಹಿರಿಯರ ಮುಂದೆ ಎದೆ ಮುಚ್ಚಿಕೊಳ್ಳಬೇಕೆಂಬ ವಿಧಿಯಿತ್ತು; ಆದರೆ ಸಮಾನಿಕರ ಮತ್ತು ಕೆಳಗಿನ ಅಂತಸ್ತಿನವರ ಮುಂದೆ ಅಥ್ಯ ಹೆಂಗಸರು ಮೊಲೆ ಬಿಟ್ಟುಕೊಂಡಿರುವುದೇ ಶಿಷ್ಟ ಸಮ್ಮತವಾಗಿತ್ತು. ಇದು ಶುಭ ಕಾರ್ಯಗಳಾದ ಆರತಿಯೇ ಮೊದಲಾದ ಸಂದರ್ಭದಲ್ಲಿ ತಲೆಗೆ ವಸ್ತ್ರ ಹಾಕಿಕೊಳ್ಳಬೇಕೆಂಬ ಶಿಷ್ಟಾಚಾರವನ್ನು ಹೋಲುತ್ತದೆ. ತದ್ವಿರುದ್ಧವಾಗಿ ಮೆಯ್ ಬಿಟ್ಟುಕೊಂಡಿರುವುದು ಸಾಮಾಜಿಕವಾಗಿ ನೀಚತ್ವದ ಸೂಚಕವೂ ಆಗಬಹುದು. ದಕ್ಷಿಣ ಕನ್ನಡದ ಹರಿಜನರಲ್ಲಿ ಅತಿ ಕೆಳಗಿನ ಸ್ತರದವರಾದ ಕೊರಗರ ಹೆಂಗಸರು ಮೊಲೆಗಳನ್ನು ಮುಚ್ಚಿಕೊಂಡಿರತಕ್ಕದ್ದಲ್ಲವೆಂದು ನಿಯಮ ಇತ್ತಂತೆ. ಕಳೆದ ಶತಮಾನದಲ್ಲಿ ಒಬ್ಬ ಯುರೋಪಿಯನ್ ಕಲೆಕ್ಟರನು ಅವರಿಗೆ ಆ ಹಕ್ಕು ದಯಪಾಲಿಸಿದನೆಂದು ಜನಶ್ರುತಿ. ಆತನು ಒಂದು ದಿನ ಕುದುರೆ ಸವಾರಿ ಮಾಡುತ್ತ ಹೋಗುತ್ತಿದ್ದಾಗ ಒಬ್ಬ ಕೊರತಿ ಎದುರಾದಳಂತೆ. ಅವನನ್ನು ಕಂಡೊಡನೆ ಅವಳು ತಾನುಟ್ಟ ತುಂಡು ಬಟ್ಟೆಯನ್ನು ತಟ್ಟನೆ ಬಿಚ್ಚಿ ಎದೆಗೆ ಹೊದ್ದುಕೊಂಡಳಂತೆ. ದೊರೆಗೆ ಆಶ್ಚರ್ಯವಾಯಿತು. ಅವನು ಕುದುರೆ ನಿಲ್ಲಿಸಿ ಆ ತರುಣಿಯನ್ನು ಪ್ರಶ್ನಿಸಿದಾಗ ಅವಳು ಕೆಳಗಿನ ಗುಹ್ಯಾಂಗ ಹುಟ್ಟುವಾಗಲೇ ಇದ್ದು ಅದರ ಬಗ್ಗೆ ನಾಚತಕ್ಕದ್ದೇನೂ ಇಲ್ಲ; ಮೇಲಿನದು ಆಮೇಲೆ ಬಂದದ್ದಾದ್ದರಿಂದ ದೊರೆಗಳ ಮುಂದೆ ಅದನ್ನು ತೋರಿಸಿಕೊಳ್ಳಲು ಲಜ್ಜೆಯಾಯಿತು ಎಂದಳಂತೆ!

ವಿಜಯದ ದ್ಯೋತಕವಾಗಿಯೂ ವಸ್ತ್ರಾಪಹರಣ ನಡೆಯುತ್ತಿತ್ತು. ಒಬ್ಬರ ಮೇಲೆ ಇನ್ನೊಬ್ಬರ ಅಧಿಕಾರದ ಪೂರ್ಣತ್ವವನ್ನು ಸೂಚಿಸುವುದಕ್ಕಾಗಿ ಈ ಪದ್ಧತಿ ಇದ್ದಂತೆ ಕಾಣುತ್ತದೆ. ಪ್ರಾಚೀನ ಕಾಲದಲ್ಲಿ ನಮ್ಮ ದೇಶದಲ್ಲಂತೂ ಗುಲಾಮರಿಗೆ — ಗಂಡೇ ಇರಲಿ, ಹೆಣ್ಣೇ ಇರಲಿ ವಸ್ತ್ರ ನಿಷೇಧವಿತ್ತೆಂಬುದಕ್ಕೆ ಹರಪ್ಪಾ ನಾಗರಿಕತೆಯ ಅವಶೇಷಗಳಲ್ಲೇ ಪುರಾವೆಗಳು ಸಿಗುತ್ತವೆ. ಅನಂತರದ ಕಾಲದಲ್ಲಿಯೂ ಅರಮನೆಗಳ ದಾಸಿಯರು ಕನಿಷ್ಠಮಾನದ ವಸ್ತ್ರ ಧರಿಸುತ್ತಿದ್ದರು. ದ್ರೌಪದಿಯ ವಸ್ತ್ರಾಪಹರಣದ ಸಮರ್ಥನೆಗಳಲ್ಲಿ ಇದೂ ಒಂದು ಅಂಶವಾಗಿರಬೇಕು. ಪಣದಲ್ಲಿ ಸೋತದ್ದರಿಂದ ದಾಸಿಯಾದವಳಿಗೆ

ಬಟ್ಟೆ ಸಲ್ಲದು. ಅದಲ್ಲದೆ ಅವಳ ಗಂಡಂದಿರನ್ನು ಅವಮಾನಿಸುವ ಉದ್ದೇಶವೂ ಇತ್ತು. ಕರ್ನಾಟಕದ ಶಾಸನಗಳಲ್ಲಿ ಕುತೂಹಲಕರವಾದ ಒಂದಂಶ ಇದೆ. ಒಂದೂರಿನವರು ಇನ್ನೊಂದರ ಮೇಲೆ ದಾಳಿ ಮಾಡಿದಾಗ ಗೆದ್ದವರು ಸೋತ ಊರಿನ ಹೆಂಗಸರ "ಉಡೆಯುರ್ಚ" ಕೊಂಡೊಯ್ಯುತ್ತಿದ್ದರು. ಅದು ಊರ ಗಂಡಸರ ಗಂಡಸ್ತನಕ್ಕೇ ಸವಾಲಾಗಿರುತ್ತಿತ್ತು. ಯುದ್ಧದಲ್ಲಿ ಸೋತು ಮೂರ್ಛೆ ಹೋದವರ ಬಟ್ಟೆ ಬಿಚ್ಚಿಕೊಂಡೊಯ್ಯುವುದೂ ಒಂದು ಅವಮಾನ ಸಾಧನವಾಗಿರುತ್ತಿತ್ತು.

ಕೊನೆಯದಾಗಿ ಬೆತ್ತಲೆಯೆಂಬುದು ಭಕ್ತಿ, ಶರಣಾಗತಿ, ಸಮರ್ಪಣಭಾವದ ಪರಾಕಾಷ್ಠೆಯೂ ಆಗಿದೆ. "ಮಾನ" ಎಂಬ ಶಬ್ದಕ್ಕೆ ಮರ್ಯಾದೆ, ಗೌರವ ಎಂದಲ್ಲದೆ ಅಹಂಕಾರವೆಂದೂ ಗುಪ್ತಾಂಗವೆಂದೂ ಅರ್ಥಗಳಿವೆ. (ಮಾನ ಮುಚ್ಚುವುದು ಎಂಬ ಪ್ರಯೋಗ ನೋಡಿ.) ವಸ್ತ್ರವೆಂಬುದು, ಮೊದಲೇ ಹೇಳಿದ ಹಾಗೆ ಅಹಂಕಾರದ ಅವಶೇಷವನ್ನು ತೋರಿಸುತ್ತದೆ. ಅತ್ಯಂತ ಪ್ರಿಯರಾದವರಲ್ಲಿಯೂ ಪರಮಾತ್ಮನಲ್ಲಿಯೂ ಏನನ್ನೂ ಮುಚ್ಚಿಕೊಳ್ಳುವಂತಿಲ್ಲ. ಸರ್ವಾರ್ಪಣವಿಲ್ಲದೆ ದೇವ ಒಲಿಯುವುದಿಲ್ಲ. ಅಹಂಕಾರವೆಂಬುದೇ ನಮ್ಮ ಚರಮ ಗೋಪ್ಯ. ಅದೇ ಮಾನ. ಭಾಗವತ ಪುರಾಣದ ಆ ಅತ್ಯಂತ ಮೋಹಕವಾದ ಗೋಪೀವಸ್ತ್ರಾಪಹರಣ ಪ್ರಸಂಗದಲ್ಲಿ ಈ ಪೂರ್ಣ ಶರಣಾಗತಿಯ ಆವಶ್ಯಕತೆಯನ್ನೇ ಧ್ವನಿಸಿದ್ದಾರೆ. ಪರಮಾತ್ಮನೊಬ್ಬನೇ ಪುರುಷ, ಜೀವಾತ್ಮರೆಲ್ಲರೂ ಹೆಣ್ಣುಗಳು, ಗೋಪಿಯರು. ಯಾರನ್ನು ತನ್ನವರನ್ನಾಗಿ ಮಾಡಿಕೊಳ್ಳಬೇಕೆಂದು ಪರಮಾತ್ಮ ಬಯಸುತ್ತಾನೋ ಅವರನ್ನು ಅವನು ಪೂರ್ಣ ಬತ್ತಲಾಗಿ ಮಾಡುತ್ತಾನೆ. ಆತ್ಯಂತಿಕ ಮುಹೂರ್ತಗಳಲ್ಲಿ ನಾವು ನಮಗೇ ಬತ್ತಲಾಗುತ್ತೇವೆ — ಯಮುನೆಯಲ್ಲಿಳಿದ ಗೋಪಿಯರಂತೆ. ಆದರೆ ದೇವರ ಮುಂದೆ ಬತ್ತಲಾಗಲು ಇನ್ನೂ ಅಳುಕುತ್ತೇವೆ. ಇದು ಅಹಂಕಾರ. ಅದನ್ನು ಉಳಿಸಿಕೊಳ್ಳಲು ಒಂದೇ ಕೈಯಿಂದಾದರೂ ಮಾನಸ್ಥಾನವನ್ನು ಮುಚ್ಚಿಕೊಳ್ಳುತ್ತೇವೆ. ಅದನ್ನೂ ಬಿಟ್ಟರೆ ನಮ್ಮ ಶರಣಾಗತಿ ಸಂಪೂರ್ಣವಾಗುತ್ತದೆ.

ಚಂದ್ರಗುತ್ತಿಯಲ್ಲೋ ಇನ್ನೆಲ್ಲಿಯೋ ಬತ್ತಲೆ ಸೇವೆ ಒಪ್ಪಿಸುವವರ ಮನೋಭಾವ ಇದು. ಮನುಷ್ಯ ಪ್ರಯತ್ನದಿಂದ ಪರಿಹರಿಸಲಾರದ ಯಾವುದೇ ಆತಂಕವನ್ನು ಅವರು ಮಾತಂಗಿಗೆ ಸಂಪೂರ್ಣ ಶರಣಾಗತರಾಗಿ ಪರಿಹರಿಸಿಕೊಳ್ಳಲು ಬಯಸುತ್ತಾರೆ. ಅದು ದೈನ್ಯದ ಚರಮ ಸೀಮೆ. ❁



ಪರ್ಷಿಯನ್ ಸೂಫಿಗಳಲ್ಲೆಲ್ಲಾ ಅತಿ ಪ್ರಮುಖರಾದ ಬಯಾಜಿದ್‌ರನ್ನು, "ನಿಮಗೆಷ್ಟು ವಯಸ್ಸು?" ಎಂದು ಕೇಳಲಾಯಿತಂತೆ.

ಅವರು, "ನಾಲ್ಕು ವರ್ಷಗಳು," ಎಂದು ಉತ್ತರಿಸಿದರಂತೆ! ಅವರನ್ನು ಪ್ರಶ್ನಿಸಿದಾತ "ಅದು ಹೇಗೆ ಸಾಧ್ಯ?!" ಎಂದು ಅಚ್ಚರಿಗೊಂಡು ಪ್ರಶ್ನಿಸಿದ.

ಬಯಾಜಿದ್, "ಈ ಪ್ರಪಂಚದ ನನಗೂ ದೇವರಿಗೂ ಮಧ್ಯೆ ಎಪ್ಪತ್ತು ವರ್ಷಗಳ ಕಾಲ ಪರದೇ ಹಾಕಿತ್ತು. ಕೊನೆಯ ನಾಲ್ಕು ವರ್ಷಗಳಿಂದ ಆತನನ್ನು ನೋಡುತ್ತಿದ್ದೇನೆ. ಯಾವ ಕಾಲದಲ್ಲಿ ಒಬ್ಬರಿಗೆ ಪರದೆ ಹಾಕಲಾಗಿರುತ್ತದೋ ಆ ಕಾಲ ಆತನ ಜೀವನಕ್ಕೆ ಸೇರಿದುದಲ್ಲ," ಎಂದು ಹೇಳಿದರು.

—ಎಸ್. ವಿಶ್ವನಾಥ

# ಇದುವೇ ಜೀವ ಇದು ಜೀವನ

ಬೆಳಗಾಂವಿಯಿಂದ ಶಿವಮೊಗ್ಗಕ್ಕೆ ಬರಬೇಕಿತ್ತು. ಸಾಯಂಕಾಲ ೫-೩೦ರ ಬೆಳಗಾಂವಿ–ಹಾಸನ ಬಸ್ಸಿಗೆ ಕಾಯುತ್ತಾ ಬಸ್ ಸ್ಟ್ಯಾಂಡಿನಲ್ಲಿ ಕುಳಿತಿದ್ದೆ. ಅಲ್ಲೇ ಠಳಾಯಿಸುತ್ತಿದ್ದ ಒಂದು ವ್ಯಕ್ತಿ ನನ್ನೊಂದಿಗೆ ಮಾತಿಗೆ ಬಂತು. ತಾನು ಮೂಡುಗೆರೆಗೆ ಹೋಗಬೇಕಾಗಿಯೂ, ಯಾವುದೋ ಒಂದು ಮಷೀನನ್ನು ಬೆಳಗಾಂವಿಗೆ ರಿಪೇರಿಗೆ ತಂದಿದ್ದಾಗಿಯೂ, ರಿಪೇರಿಯಾದ ಅದನ್ನು ವಾಪಸ್ಸು ಮೂಡುಗೆರೆಗೆ ಒಯ್ಯುತ್ತಿರುವುದಾಗಿಯೂ, ತಾನೂ ನಾವು ಕಾಯುತ್ತಿದ್ದ ಬಸ್ಸಿಗಾಗಿಯೇ ಕಾಯುತ್ತಿರುವುದಾಗಿಯೂ ಆತ ಹೇಳಿದ. ಸ್ವಲ್ಪ ಹೊತ್ತಿನ ನಂತರ ಸ್ಟ್ಯಾಂಡಿಗೆ ಬರುತ್ತಿದ್ದ ಬಸ್ಸನ್ನು ತೋರಿಸಿ, ಅದೇ ನಮ್ಮ ಬಸ್ಸೆಂದು ಉಸುರಿ ಅಲ್ಲೇ ಎಲ್ಲೋ ಕಣ್ಮರೆಯಾದ. ನಾನು ಬಸ್ಸಿನಲ್ಲಿ ನನ್ನ ಸೀಟಿನಲ್ಲಿ ಕುಳಿತದ್ದಾಯಿತು. ಸಲ್ಪ ಹೊತ್ತಿನಲ್ಲೆ ಆ ವ್ಯಕ್ತಿ ನನ್ನ ಬಳಿ ಬಂದು ತನ್ನ ಮಷೀನಿನ ಲಗ್ಗೇಜು ಚಾರ್ಜು ಕೊಡಬೇಕಾಗಿದೆಯೆಂದೂ, ಅಲ್ಲಿಯ ಕೌಂಟರಿನಲ್ಲಿ ಚಿಲ್ಲರೆ ಇಲ್ಲವಾಗಿಯೂ, ನನ್ನ ಬಳಿ ಒಂದು ನೂರು ರೂಪಾಯಿ ನೋಟಿಗೆ ಚಿಲ್ರೆನೋಟುಗಳಿದ್ದರೆ ಕೊಡುವಂತೆಯೂ ಕೇಳಿದ. ನಾನು ನನ್ನಲ್ಲಿ ಇಲ್ಲವೆಂದ ಮೇಲೆ ಎರಡು ಐವತ್ತು ರೂಪಾಯಿಗಳ ನೋಟುಗಳಿದ್ದರೂ ಆದೀತೆಂದು ಹೇಳಿದ. ನಾನು ಪುನಃ ನನ್ನಬಳಿ ಒಂದು ನೂರು ರೂಪಾಯಿಗಳೇ ಇಲ್ಲವೆಂದಮೇಲೆ ಆತ ಹೊರಟುಹೋದ. ಅನಂತರ ನಾನು ಕುಳಿತ ಸೀಟಿನ ಪಕ್ಕದಲ್ಲಿ ಬಸ್ಸಿನ ಕೆಳಗಡೆ ನಿಂತು, ಬಸ್ಸಿನ ಟಾಪನ್ನು ನೋಡುತ್ತಾ ಕೂಲಿಯವನಿಗೆ ಹೇಳುತ್ತಿರುವಂತೆ, "ಮಷೀನನ್ನು ಇನ್ನೂ ಸ್ವಲ್ಪ ಮುಂಭಾಗದಲ್ಲಿಡು, ಇನ್ನೂ ಸ್ವಲ್ಪ; ಈಗ ಸಾಕು ಸರಿಯಾಯಿತು." ಎನ್ನುತ್ತಿದ್ದ. ಎರಡು ಮೂರು ನಿಮಿಷಗಳನಂತರ ಪುನಃ ನನ್ನಲ್ಲಿಗೆ ಬಂದು, "ಹದಿನೈದು ರೂಪಾಯಿಗಳನ್ನು ಕೊಟ್ಟಿರಿ, ಲಗ್ಗೇಜು ಚಾರ್ಜು ಕೊಟ್ಟು ಬರುತ್ತೇನೆ. ಅಲ್ಲಿ ಚಿಲ್ಲರೆ ಇಲ್ಲವೆನ್ನುತ್ತಾರೆ. ಊರು ತಲಪುವುದರಲ್ಲಿ ನನ್ನಲ್ಲಿರುವ ೧೦೦ರ ನೋಟಿಗೆ ಚಿಲ್ಲರೆ ಮಾಡಿಸಿ ವಾಪಸ್ಸು ಕೊಡುತ್ತೇನೆ." ಎಂದು ಹೇಳಿದ. ನಾನು ಕೂಡಲೆ ಕೊಟ್ಟೆ. ಅನಂತರ ಆಸಾಮಿ ನಾಪತ್ತೆ. –ಕೆ. ಶಾಮರಾವ್

ಅಂದು ದೀವಳಿಗೆಯ ಪಾಡ್ಯ. ಪ್ರತಿಸಲದಂತೆ ನಾನು ಬೆಳಗಾವಿಯಿಂದ ಗೋಕಾಕಿನಲ್ಲಿರುವ ನಮ್ಮ ಸಿನೇಮಾ ಥಿಯೇಟರಿನಲ್ಲಿಯ ಲಕ್ಷ್ಮೀ ಪೂಜೆಗೆಂದು ಪೂಜೆಯ ಸಾಮಾನುಗಳೊಂದಿಗೆ ಬೆಳಗಿನ ಬಸ್ಸಿನಲ್ಲಿ ಹೊರಟಿದ್ದೆ. ಬಸ್ಸು ಅರ್ಧ ದಾರಿಯಲ್ಲಿರುವ ನೇಸರಗಿಯಲ್ಲಿ ಬಸ್–ನಿಲ್ದಾಣದಲ್ಲಿ ನಿಲ್ಲದೆ ಅದರ ಎದುರುಗಡೆಯ ಪೋಲೀಸ ಸ್ಟೇಷನ್ನಿನ ಎದುರು ನಿಂತಿತು. ನಾನು ಮೊದಲನೇ ಸಾಲಿನಲ್ಲಿ ಐದನೇ ನಂಬರಿನ ಸೀಟಿನ ಮೇಲೆ ನನ್ನ ಎಲ್ಲ ಸಾಮಾನುಗಳೊಂದಿಗೆ ಕುಳಿತಿದ್ದೆ. ಕಡೆಯ ಸಾಲಿನಲ್ಲಿ ಕುಳಿತಿದ್ದ ಹರೆಯದ ಹೆಣ್ಣುಮಗಳೊಬ್ಬಳು ಎದ್ದು ನಿಂತು ಬಗ್ಗಿ–ಬಗ್ಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಬಸ್ಸು ನಿಂತಾಗ ಎಲ್ಲರ ಕಣ್ಣುಗಳೂ ಅವಳ ಕಡೆಗೆ. ಪಾಪ ಎಂದೊಬ್ಬನೆಂದರೆ — "ನಿಜವಾದ ವಿಷಯ ಯಾರಿಗೆ ಗೊತ್ತು?" ಎಂದ ಇನ್ನೊಬ್ಬ. ಬೆಳಗಾವಿ ಬಸ್ ನಿಲ್ದಾಣದಲ್ಲಿ ಅವಳ ಪತಿ ಅವಳನ್ನು ಕಳಿಸಲು ಬಂದಾಗ ತನ್ನ ಕೊರಳಲ್ಲಿಯ ೨ ತೊಲೆಯ ಬಂಗಾರದ ಚೈನು ಅವಳ ಕೊರಳಲ್ಲಿ ಹಾಕಿ ಬಸ್ಸು ಹತ್ತಿಸಿ ಹೋಗಿ ಬಾ ಎಂದು ಕಳಿಸಿದ. ಆದರೆ ಬಸ್ಸು ಬಿಟ್ಟಮೇಲೆ ಕೊರಳಲ್ಲಿಯ ಚೈನು ಮಾಯ. ಬಿದ್ದು ಬಿದ್ದು ಅಳುವ ಕಾರಣ ಇದು.

"ನೀನು ಮರೆತಿರಬಹುದು."

"ಬಸ್ಸು ಹತ್ತುವ ಮೊದಲೇ ಯಾರಾದರೂ ಕಿತ್ತಿರಬಹುದು."

"ಇದೆಲ್ಲ ಸುಳ್ಳಿನ ಕಂತೆ." ಹೀಗೆ ತಲೆಗೆ ಒಬ್ಬೊಬ್ಬರು ಮಾತನಾಡುವವರೆ.

"ಎಲ್ಲರನ್ನೂ ಒಬ್ಬೊಬ್ಬರನ್ನಾಗಿ ತಪಾಸು ಮಾಡಿರಿ." ಪ್ರವಾಸಿಗರಲ್ಲೊಬ್ಬ ಚೀರುದನಿಯಿಂದ ಹೇಳಿದ.

ನನಗೆ ಮೈ ಜುಮ್ಮೆಂದಿತು.

ಗಂಡಸರೆಲ್ಲ ಒಬ್ಬೊಬ್ಬರಾಗಿ ಕೈಗಳನ್ನು

ಕುದುರೆಯ ಬಾಲಗಳಂತೆ ಮಾಡಿ ಕೆಳಗೆ ಇಳಿಯು ತೊಡಗಿದರು. ಪೇದೆಯೊಬ್ಬ ಬಸ್ಸಿನ ಬಾಗಿಲಲ್ಲಿ ನಿಂತು ಅವರ ಮೈಸವರಿ ಕೆಳಗೆ ಬಿಡುತ್ತಿದ್ದ. ಬಸ್ಸಿನಲ್ಲಿಯ ಗಂಡಸರ ಸಂಖ್ಯೆ ಮುಗಿಯುತ್ತಾ ಬಂದಿತು. ನಾನು ಕುಳಿತಲ್ಲಿಯೇ ಗೋಣನ್ನು ಬದಿಯ ಕಿಡಕಿಯ ಗಾಜಿಗೆ ತಾಗಿಸಿ ನಿದ್ದೆ ಹತ್ತಿದವರಂತೆ ಕಣ್ಣುಮುಚ್ಚಿ ಅಲ್ಲಿ ನಡೆಯುತ್ತಿದ್ದುದನ್ನೆಲ್ಲಾ ಗಮನಿಸುತ್ತಿದ್ದೆ. ಕಂಡಕ್ಟರ್ ಅಳುವವಳನ್ನು ಬಸ್ಸಿನಲ್ಲಿಯ ಐದಾರು ಮಹಿಳಾ ಪ್ರವಾಸಿಗರ ಬಳಿ ಕರೆದು ತಂದು, "ಇವರನ್ನು ನೀನೇ ತಪಾಸಿಸು! ಇವರು ಇಳಿಯುವುದು ಬೇಡ," ಎಂದಾಗ ಅವಳು ಅಳುತ್ತಲೇ ಒಬ್ಬರ ಮೈ ಸವರಿ ಸೆರಗಿನಲ್ಲಿ ಕೈ ಹಾಕಿದಂತೆ ಮಾಡಿ, 'ಇಲ್ಲಾ' ಎನ್ನುತ್ತ ಹಿಂತಿರುಗಿದಳು.

''ಎಲ್ಲರೂ ಇಳಿದರು ನಾನು ಮುಂದಿನ ಸೀಟನಲ್ಲಿ ಕುಳಿತವ ಎದ್ದೂ ನಿಲ್ಲಲಿಲ್ಲ! ಕೆಳಗೂ ಇಳಿಯಲಿಲ್ಲ!

ಯಾರಾದರೂ ಕೇಳಿದರೆ?

ಕೊರಳನ್ನು ತಪಾಸಿಸಿದರೆ?

ಹುಂ...ಎರಡು ಚೈನು ಏಕೆ? ಎಂದರೆ?

ಹೌದು. ನನ್ನ ಕೊರಳಲ್ಲಿ ಎರಡು ಚೈನುಗಳು.

ಅಳುವ ಹೆಣ್ಣುಮಗಳು ವರ್ಣಿಸುವಂತಹ ಚೈನುಗಳು.

"೨ ತೊಲೆ.''

"ಹಗ್ಗದಂಥದು.''

ಥಟ್ಟನೆ ಯಾರಾದರೂ ನಾನು ಸುಮ್ಮನೇ ಕುಳಿತವ್ವನ್ನು ನೋಡಿ ಸಂಶಯಗೊಂಡು ಕಾಲರಿಲ್ಲದ ನೆಹರೂ ಶರ್ಟ ಹಾಕಿದ ನನ್ನ ಕುತ್ತಿಗೆಗೆ ಕೈಹಾಕಿದ್ದರೆ ಚೈನು ಅನಾಯಾಸವಾಗಿಯೇ ಸಿಗುತ್ತಿತ್ತು.

ಅದೇನೋ ಸುದೈವ. ಯಾರೂ ನನ್ನ ಗೋಜಿಗೇ ಹೋಗಲಿಲ್ಲ.

ಅಂದು ನನ್ನ ಕೊರಳಲ್ಲಿ ಎರಡು ಚೈನುಗಳು- ಒಂದು ನನ್ನದು ದಿನಾಲೂ ಕೊರಳಲ್ಲಿರುತ್ತಿದ್ದುದ್ದು. ಇನ್ನೊಂದು ಲಕ್ಷ್ಮೀ ಪೂಜೆಗಾಗಿರುವ ಕಲಶದ ಕೊರಳಲ್ಲಿ ಹಾಕಲು ನನ್ನ ಮಗಳು ತನ್ನ ಕೊರಳಲ್ಲಿದ್ದುದನ್ನು ತೆಗೆದು, "ಇದನ್ನು ತಂಬಿಗೆಗೆ ಹಾಕಿರಿ ಪಪ್ಪಾ,'' ಎಂದು ಕೊಟ್ಟಿದ್ದು. ಹೀಗಾಗಿ ಎರಡೂ ಕೊರಳಲ್ಲಿ ಹಾಕಿಕೊಂಡಿದ್ದೆ. ಆದರೆ ತಪ್ಪಿ, ಅದೇನಾದರೂ ಸಿಕ್ಕಿದರೆ—ಈ ವಿವರಣೆಯನ್ನು ಯಾರಾದರೂ ನಂಬಬಹುದಿತ್ತೇ?

"ಅದೆಲ್ಲಾ ಕೋರ್ಟಿನಲ್ಲಿ''—

"ಅಲ್ಲಿಯ ವರೆಗೆ ತಾ ಅದನ್ನು,'' ಅಂದಿದ್ದರೆ ಗತಿಯೇನು? ಅಲ್ಲಿಯ ತನಕ ಚೈನು ಹೋಗುವದಿರಲಿ ಸಕಾಲಕ್ಕೆ ಲಕ್ಷ್ಮೀ ಪೂಜೆಯೂ ಆಗುತ್ತಿರಲಿಲ್ಲ.

ಆದರೆ ದೇವರ ದಯೆಯಿಂದ ಅಂತಹ ಅಪವಾದದಿಂದ ಪಾರಾದೆ. ಆ ಹೆಣ್ಣುಮಗಳು ನೇಸರಗಿಯಲ್ಲಿ ಕೆಳಗಿಳಿದವಳು ಮತ್ತೆ ಹತ್ತಲಿಲ್ಲ. ಮರಳಿ ಬೆಳಗಾವಿ ಬಸ್ಸು ಹತ್ತಿದಳು.

ನಮ್ಮ ಬಸ್ಸು ಇಳಿಸಿದ ಪ್ರವಾಸಿಕರನ್ನು ಹತ್ತಿಸಿಕೊಂಡು ಮುಂದುವರಿಯಿತು.

ನಾನು ಸರಿಯಾಗಿ ಎಚ್ಚತ್ತವರಂತೆ ನೆಟ್ಟಗೆ ಎದ್ದು ಕುಳಿತು ಸುತ್ತಲೂ ನೋಡಿದೆ.

ನೀಳವಾಗಿ ನಿಟ್ಟುಸಿರೊಂದನ್ನು ಬಿಟ್ಟೆ.

—ಬಿ. ಡಿ. ಮುಜಲೀಕರ

ತಿರುಮಲೆ ತಿಮ್ಮಪ್ಪನ ದರ್ಶನಕ್ಕಾಗಿ ಹೋದಾಗ 'ಧರ್ಮೋ ರಕ್ಷತಿ ರಕ್ಷಿತಃ'–'ಧರ್ಮವನ್ನು ಕಾಪಾಡಿರಿ ಅದು ನಿಮ್ಮನ್ನು ಕಾಪಾಡುತ್ತದೆ' ಎಂಬ ಸಂದೇಶ ಫಲಕ ಸ್ವಾಗತಿಸಿದಾಗ ಮೈ ಮನಗಳು ಪುಳಕಿತವಾದವು. ದೇವಸ್ಥಾನದ ಹಿಂದುಗಡೆಯೇ ಆರ್ಯಸಮಾಜ ಸಕಲರಿಗೂ ಉಚಿತ ಭೋಜನವೇರ್ಪಡಿಸಿದ ಫಲಕವೂ ಕಣ್ಣಿಗೆ ಬಿತ್ತು. ಅಲ್ಲಿ ಊಟ ತೀರಿಸಿದರಾಯಿತೆಂದುಕೊಂಡು ಹೋದೆ. ಬಾಗಿಲಲ್ಲೇ ಕೃಷ್ಣವರ್ಣದ ಮಹಾಬ್ರಾಹ್ಮಣನೊಬ್ಬ ಕರ್ಕಶ ಧ್ವನಿಯಲ್ಲಿ "ಗೋತ್ರ ಯಾವುದು?" ಎಂದು ಕೇಳಿದ. "ವಿಶ್ವಾಮಿತ್ರ" ಎಂದು ಅವನ ಕಿವಿಯಲ್ಲುಸುರಿದೆ. ಕೂಡಲೇ ಆತ ಅಟ್ಟಹಾಸದಿಂದ ನಕ್ಕು ನನ್ನ ಕುತ್ತಿಗೆ ಕೈ ಹಾಕಿ ಹೊರಕ್ಕೆ ದೂಡಿದ. ಭಗವಂತನ ಸನ್ನಿಧಾನದಲ್ಲಿ ಧರ್ಮ ನನ್ನನ್ನು ಕಾಪಾಡಿತ್ತು. ನಾನು ಮತ್ತೆ ನನ್ನ ಗೋತ್ರ ಹೇಳಿಕೊಂಡು ಊಟ ಮಾಡಿಬರುವ ಹುಚ್ಚು ಪ್ರಯತ್ನವನ್ನು ಮಾಡಲಿಲ್ಲ.

—ಟಿ. ಕೆ. ಆಚಾರ್ಯ

ಮೌಲ್ಯ ವಿವೇಚನ ಮಾಲೆ-೪



# ವರ್ತಮಾನದ ಕೃತಿ ಸ್ವಾದ

## ರತ್ನನ ಪದಗಳು / ಮಾತನಾಡುವ ಕಲ್ಲು / ಸುಬ್ಬಣ್ಣ

ದೇಶಪಾಂಡೆ ಸುಬ್ಬರಾಯ

೬

### ಜಿ. ಪಿ. ರಾಜರತ್ನಂ/ ರತ್ನನ ಪದಗಳು

೧

ನೀನ್ ಅಂತನ್ನೋ ನಾಮರ್ದನ್ಗೆ
ನಿನ್ ಅಪ್ಪಾಂತ್ ಅನ್ಬೇಕು
ತುಳಿಯಾಕ್ ಬಂದೌನ್ ತಿರಗ್ಸಂಗ್ ಎಸದು
ಕರ್ಮಾಕ್ ಬೆಂಕ್ಯಾಕ್ಬೇಕು

೨

ಲಕ್ಸ ಚಿಕ್ಕೋರ್ ಮಾಡಿದ್ ಕೆಲಸ
ದೊಡ್ಡೋನ್ ಒಬ್ಬಂಗ್ ಎಸರು
ಇಂತಾ ದೊಡ್ಡೋರ್ ದೊಡ್ಡ ಎಸರೂಂದ್ರೆ
ಲಗ್ನಾ ಆಗ್ದೇನ್ ಬಸರು

೩

ಮುನ್ನೂರ್ ಮೂವತ್ತ್ ಕೋಟಿ ದೇವ್ರು
ಸುಮ್ಕೆ ಕುತ್ಕೊಂಡೌರೆ
ನರಳೋರ್ ಗೋಳ್ಗೆ ಕಿವಿ ಮುಚ್ಕೊಂಡಿ
ಸತ್ತಂಗ್ ಬಿದ್ಕೊಂಡೌರೆ

೪

ದೇವ್ರು ಗೀವ್ರು ಅನ್ಕೊಂಡ್ ಇದ್ರೆ
ನಮಗ್ ಈಗ್ ಉದ್ದಾರ್ ಇಲ್ಲ
ದೇವ್ರಿಗೆ ದೇವ್ರೆ; ನಮಗೇ ನಾವೇ
ಬೆಳೆದವರ್ ಪಾಲಿಗ್ ಬೆಲ್ಲ

೫

ಗುಡಿಗೋಳ್ ಪಕ್ದಾಗ್ ಗುಡಿಸಿಲ್ ಪುಡಿ
ಬಡವನ್ಗೇ ದೇವರ್ ಮಾಡಿ
ಬಡವರ್ ಬೋನಕ್ ಬೊಗ್ಗೇಸ್ತಿದ್ದೆ
ಪೂಜಾರೀಗೋಳ್ಗ ಎಮ್ಕೇನ
ಗುರು ನಾನ್ ಆಗೋದ್ ಸುಂಕೇನ

ಯಾವುದೋ ಬ್ಲ್ಯಾಕ್ ಪ್ಯಾಂಥರ್‌ನ ಇತ್ತೀಚಿನ ಬಂಡಾಯ ಕವಿತೆಗಳಿಂದ ಎತ್ತಿಕೊಂಡ ಸಾಲುಗಳಲ್ಲ ಇವು; ಡಿಸೆಂಬರ್ ೧೯೭೪ ರಲ್ಲೇ ಪ್ರಕಟವಾದ, ಜಿ. ಪಿ. ರಾಜರತ್ನಂ ಅವರ 'ರತ್ನನ ಪದಗಳ'ಲ್ಲಿಯ ಕೆಲವೇ ಆಯ್ಕೆಗಳು ಇವು. ಇಂದು ಕೆಲವಾದರೂ ವಲಯಗಳಲ್ಲಿ, ಒಂದು ಬಗೆಯ ಸಾಮುದಾಯಿಕ ಅನಿವಾರ್ಯತೆಯಾಗಿ ಪ್ರತಿಪಾದಿತವಾಗುತ್ತಿರುವ ಇಂಥ ಧೋರಣೆ ಕೆಲವುಗಳು, ಕೆಲವೊಮ್ಮೆ, ವೈಯಕ್ತಿಕ ಅನಿವಾರ್ಯತೆಯೇ ಆಗಿ, ಎಷ್ಟೆಲ್ಲ ಮೊದಲೇ ಬಂದುಬಿಡಬಹುದು ಎಂಬುದನ್ನು ಸೂಚಿಸುವುದಕ್ಕಾಗಿಯೇ ನಾನು ಈ ಸಾಲುಗಳನ್ನು ಎತ್ತಿ ತೋರಿಸಿದ್ದು. ಎಂದರೆ ಕೇವಲ ನವುರು ಭಾವನೆಗಳು. ಕನಸುಗಾರಿಕೆಗಳು, ಅತೀವ ಆದರ್ಶಗಳು ಮಾತ್ರವೇ ಗೊಂಬೆಯಾಡುತ್ತಿದ್ದ ಗಾಳಿಯಲ್ಲಿ ಇಂಥ ಉರಿಯುವ ಅಲೆಗಳಿದ್ದದ್ದು ನನಗಂತೂ ಐತಿಹಾಸಿಕವಾಗಿ ಮಹತ್ವದ್ದಾಗಿ ಕಾಣುತ್ತದೆ.

(ಹಾಗಿದ್ದೂ ಒಂದು ಪದ್ಯದಲ್ಲಿ ಒಂದು ವಿರೋಧಾಭಾಸವಿರುವುದನ್ನೂ ನಾನು ಗಮನಿಸಿದ್ದೇನೆ.)

ಆದರೆ ಇದು ಮಾತ್ರವೇ ಅಲ್ಲದೆ ಅಂದಿನ ನವೋದಯದ ಅನೇಕ ಮಹತ್ವದ ಧೋರಣೆಗಳನ್ನು, ಪ್ರತಿಪಾದನೆಗಳನ್ನು ಅಷ್ಟೇ ಪ್ರಭಾವಶಾಲಿಯಾಗಿ, ಆದರೆ ಒಂದು ಐತಿಹಾಸಿಕ ಅನನ್ಯತೆ ಎಂಬಷ್ಟು ಭಿನ್ನವಾಗಿ ತೋರಿದ ಶ್ರೇಯಸ್ಸು 'ರತ್ನನ ಪದಗಳಿ'ಗಿದೆ.

ರತ್ನನ ಮೊಕಾಬಿಲೆ, ಬುಂಡೆ ಭಕ್ತ ರತ್ನ, ಮುನಿಯನ್ ಗಿರಾಕಿ ರತ್ನ, ಪುಟ್ನಂಜಿ ರತ್ನ, ರುಸ್ತುಂ ರತ್ನ, ಈ ಐದು ಹಂತಗಳ ಮಧ್ಯ ಸಾಗುವ ಇಲ್ಲಿಯ ೭೭ ಕವಿತೆಗಳಲ್ಲಿ; ಒಂದು ಭಿನ್ನವೇ ಆದ ಲೋಕದ, ಬದುಕಿನ, ವ್ಯಕ್ತಿಗಳ ಒಂದೊಂದೇ ವೈಶಿಷ್ಟ್ಯಗಳು, ಗುಣಾವಗುಣಗಳು, ನಂಬಿಕೆಗಳು, ಅನಿಸಿಕೆಗಳು, ಉದ್ದಕ್ಕೂ ನಮ್ಮೆದುರು ತೆರೆದುಕೊಳ್ಳುತ್ತ ಹೋಗುತ್ತವೆ. ರತ್ನ, ಪುಟ್ನಂಜಿ, ಮುನಿಯ, ಬೇವಾರ್ಸಿ, ವುಂಬ ಇವರು ಈ ಲೋಕದ ಅನಾವರಣಕ್ಕೆ ಮುಖ್ಯ ಕಾರಣೀಗರಾಗುತ್ತಾರೆ.

ಇಲ್ಲಿ ಕವಿ ತನ್ನ ಇಡಿಯ ವ್ಯಕ್ತಿತ್ವವನ್ನು ಒಡ್ಡಿಕೊಂಡದ್ದು ಕೇವಲ ಒಂದು ಅನುಭವ ತಳಪಾಯದ ಅನುಭೂತಿಗಲ್ಲ; ಒಂದು ತೀರ ಬೇರೆಯದೂ ವಿಶಿಷ್ಟವೂ ಆದ ಇಡಿಯ ಲೋಕಕ್ಕೇ ಎಂಬುದು ಬಹಳ ಮುಖ್ಯ. ಇಲ್ಲಿರುವದು ಬರಿಯ ಒಂದು ಭಾವ ಲೋಕವಲ್ಲ, ಸಮಗ್ರ ಬದುಕಿನ ಲೋಕ. ಈ ಲೋಕಕ್ಕೆ ತನ್ನದೇ ಆದ ಸ್ವಯಂಪೂರ್ಣ ಪರಿಕರಗಳಿವೆ, ವಿಭಿನ್ನ ಘಟ್ಟಗಳಿವೆ, ವಿಶಿಷ್ಟ ವ್ಯಕ್ತಿಗಳಿದ್ದಾರೆ. ಈ ಎಲ್ಲವೂ ಸೇರಿ, ನಮ್ಮ ಶಿಷ್ಟ ಬದುಕಿನ ಚೌಕಟ್ಟನ್ನು ಎಲ್ಲ ರೀತಿಯಲ್ಲೂ ಮಿಕ್ಕುವ ಒಂದು ಬೇರೆಯದೇ ಆದ ಜಗತ್ತೇ ನಮ್ಮೆದುರು ಸೃಷ್ಟಿಯಾಗಿ ಬಿಡುತ್ತದೆ.

ಇಂಥ ಒಂದು ಜಗತ್ತಿನ ಮಂಡನೆ ಎಂದರೆ, ಅನೇಕ ಬದುಕುಗಳ ಮಂಡನೆ. ಎಂದರೆ ಅದು ನೆಮ್ಮಿಕೊಂಡ ಜೀವನ ದ್ರವ್ಯಗಳ ಮಂಡನೆ. ಆತುಕೊಂಡ ಅನೇಕ ರೂಢಿ, ಅಭ್ಯಾಸ, ಆಚಾರ, ವಿಚಾರ, ಆಶೆ, ನಿರಾಶೆ, ಪ್ರೀತಿ, ಅಪ್ರೀತಿ ಈ ಎಲ್ಲದರ ಮಂಡನೆ ಎಂದು ಬೇರೆ ಹೇಳಬೇಕಾಗಿಲ್ಲ. ಹೀಗಾಗಿ ಇಲ್ಲಿಯ ಲೋಕ, ಎಲ್ಲ ಏಳೂ ಬಣ್ಣಗಳನ್ನೂ ಢಾಳಾಗಿ ತೊಡೆದುಕೊಂಡದ್ದನ್ನು ಇಲ್ಲಿ ಗುರುತಿಸಬಹುದು.

ಆದರೆ, ಈ ಎಲ್ಲ ಬಣ್ಣದ ಬದುಕುಗಳ ಹಿನ್ನೆಲೆಯಲ್ಲಿ, ಒಂದು ಆರ್ದ್ರವಾದ ಜೀವದ ತುಡಿತವೇ ಮಂಡಿತವಾಗಿದ್ದು, ಪ್ರಾಯಶಃ ಇದೇ ಈ ಕೃತಿಯ ಒಂದು ವಿಶಿಷ್ಟ ಅನನ್ಯತೆ ಎಂದು ಹೇಳಬಹುದೇನೋ.

ಒಂದು ಆಯ್ದ ಸಮುದಾಯದ ವಿಶಿಷ್ಟ ಭಾಷೆಯನ್ನು ಒಂದು ಭಿನ್ನವಾದ ಅಭಿವ್ಯಕ್ತಿಗೆ ಒಗ್ಗಿಸಿಕೊಳ್ಳುವುದೇ ಬೇರೆ. ಆ ಸಮುದಾಯದ ಜಗತ್ತನ್ನೇ ಮಂಡನೆಗೆ ಆಯ್ದುಕೊಂಡು, ಅದಕ್ಕಾಗಿ ಅದರ ಭಾಷೆಯ ವೈಶಿಷ್ಟ್ಯವನ್ನೇ ಉಪಯೋಗಿಸುವದೇ ಬೇರೆ. ಇಲ್ಲಿ, ಎರಡನೆಯ ಮಾರ್ಗವನ್ನು ಆಯ್ದುಕೊಂಡ ರಾಜರತ್ನಂ, ಬರಿಯ ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಮಾತ್ರವಲ್ಲ, ಶೈಲಿ, ಪರಿಸರ, ಪ್ರಸಂಗ, ಈ ಎಲ್ಲದರಲ್ಲೂ ಸಾವಯವವಾಗಿ ಪೂರಕವಾಗುವ ಕಟ್ಟಡವನ್ನೇ ನಿರ್ಮಿಸಿಕೊಂಡದ್ದು ಇಲ್ಲಿಯ ಯಶಸ್ಸಿಗೆ ಕಾರಣವೆನ್ನಬಹುದು.

ಕುಡಿದು ಬಿದ್ದ ರಸ್ತೆ, ('ಎಲೇಲೇಲೇ ರಸ್ತೆ, ಏನು ಅವ್ವೆವಸ್ತೆ.') ಸೊಟ್ಟ ಮುಖದ ಚಂದ್ರ, ಕುಡಿದು ಗಿರ್ ಗಿರ್ ಗಿರ್ ಗಿರ್ಕಿ ಹೊಡೆಯುವ ದೀಪಗಳು, 'ಸಾಯೋ ಮುದುಕ ಸಂಜೆ ಸೂರ್ಯ' ಇವು ಸೋಜಿಗವಾಗಿಯೂ ಸ್ವಾಭಾವಿಕವಾಗುವುದು ಈ ಕಾರಣದಿಂದಲೇ.

'ಸಮಾಧಾನ'ದಲ್ಲಿ, ಸೂರ್ಯನನ್ನು ಬದಿಗಿತ್ತು ನೀಡಿದ ಹಗಲು ರಾತ್ರಿಗಳ ವರ್ಣನ ವೈಖರಿ, ಈ ದಿಸೆಯಲ್ಲಿ ಇನ್ನು ಒಂದು ಹೆಜ್ಜೆ ಮುಂದೆ ಸಾಗುತ್ತದೆ.

"ಸಂಜೆ ಆಯ್ತು, ಅಂದರ್ ಸಾಕ್, ಪಚ್ಚಿಮದೂರಾಚೇಲಿ, ಮಡಗಿರೋ ಪಡಕಾನೇಗ್ ಓಡೋಯ್ತಾನೆ, ಪಟ್ಟಾಗಿ ಒಡದ್ಬುಟ್ಟು ತೂರಾಡ್ತಾ ತೂಗ್ತಾನೆ, ಕಣ್ಗಳ್ನ ಕೆಂಪಗ್ ಮಾಡ್ ತೇಲಿಸ್ತಾನೆ, ತೂರಾಡ್ತಾ ಮೋರೀಗೆ ಮೋಚ್ತಾನೆ ಸೂರ್ಯಪ್ಪ, ಕೆಸರೆಲ್ಲ ಛಿಲ್ಲಂತ ಮೇಲ್ ಆರ್ತದೆ, ಅದು ಕಂಡು 'ಕತ್ಲಾತು ಕತ್ಲಾತು' ಅನ್‌ಕೊಂಡಿ, ಬೆಪ್ತಕಡಿ ಲೋಕೆಲ್ಲ ಕೂಗ್

ಆಕ್ತದೆ."

ಪುಟ್ನಂಜಿ ಭಾಗದ ಅನೇಕ ಪದ್ಯಗಳು ಆಧುನಿಕ ಕನ್ನಡ ಸಂದರ್ಭದಲ್ಲಿ, ಎತ್ತಿ ಹೇಳ ಬಹುದಾದ ಉತ್ತಮ ಪ್ರೀತಿ ಪದ್ಯಗಳಾಗಿವೆ ಎಂದರೆ ಸಾಕು. ಆದರೆ ಪುಟ್ನಂಜಿಯ ಕೊನೆ ಕುರಿತಂತೆ ಬರುವ ಅಸ್ಪಷ್ಟತೆಗಳಿಂದಾಗಿ, ಪ್ರಿತಿಯು ಇನ್ನೊಂದು ಮುಖವಾದ ನೋವು (ಪ್ರೀತಿಯಷ್ಟೇ ಆರ್ದ್ರವಾಗಿ) ನಮ್ಮನ್ನೂ ತಾಗದೆ ಪ್ರತ್ಯೇಕ ನಿಲ್ಲುವುದು ಇಲ್ಲಿಯ ಒಂದು ಸೋಲು, ನಿಜಕ್ಕೂ, "ವಸ್ತು ಓದ್ರೆ ನೆಳ್ಳೂ ನೂನೆ, ಜೊತೆಯಾಗ್ ಓಗೋದ್ ತತ್ವ. ನಂಜಿ ಓಗಿ ನೆಪ್ಪುಳಿಯಾದು, ನನ್ ಪುಟ್ನಂಜಿ ಮಾತ್ವ'" ನಮ್ಮನ್ನು ಇನ್ನು ಹೆಚ್ಚು ತಾಗಬೇಕಿತ್ತು.

ನವೋದಯ ಸಂದರ್ಭದ ಅನೇಕ ಗುಣ ವೈಶಿಷ್ಟ್ಯಗಳನ್ನು ಇಲ್ಲಿಯ ಕವಿತೆಗಳು ನೆಮ್ಮಿ ಕೊಂಡಿದ್ದರೂ, ಕೆಲವಾದರೂ ವಿಷಯಗಳಲ್ಲಿ ರಾಜರತ್ನಂ, ಬಹುಪಾಲು ಸಮಕಾಲೀನರಿಗಿಂತ ಭಿನ್ನರಾಗಿದ್ದುದನ್ನು ಗುರುತಿಸಬಹುದು. ಒಂದು ಉದಾ: ಜೋಗದ ಜಲಪಾತ ಕುರಿತ ಅವರ ಕವಿತೆ. (ಬೇಂದ್ರೆ ಮೊದಲ್ಗೊಂಡು) ಅನೇಕ ಕವಿತೆಗಳಿಗೆ ಒಂದು ರುದ್ರ ರಮಣೀಯ ಸೌಂದರ್ಯವಾಗಿ, ಈ ಜಲಪಾತ ಕಂಡರೆ, ರಾಜ ರತ್ನಂ ಅವರಿಗೆ, ಇಲ್ಲದವರನ್ನು ಉಳ್ಳವರು ಸುಲಿಯುವ, ಶೋಷಿಸುವ, ಗೇಲಿಮಾಡುವ, ಹೆದರಿಸುವ ಒಂದು ರುದ್ರ ಮನೋಹರ ಅಸಹ್ಯವಾಗಿ ಕಾಣಿಸುತ್ತದೆ.

ಆದರೆ, ರಾಜರತ್ನಂ, ನಿಜಕ್ಕೂ ಮಹತ್ವದ ಕವಿಗಳಾಗಿ ಕಾಣಿಸುವದು, (ನಾನು ಲೇಖನ ಆರಂಭದಲ್ಲಿ ಪ್ರಸ್ತಾಪಿಸಿದಂತಹ) ಅವರ ಸಾಮಾ ಜಿಕ ಕಳಕಳಿಗಳಿಂದಾಗಿ, ಸಾಮಾಜಿಕ ಅನಿಷ್ಟಗಳನ್ನು ಪ್ರಶ್ನಿಸುವ ತಮ್ಮ ದಿಟ್ಟತನದಿಂದಾಗಿ. "ಅಗ್ನಾ ನೀಗೆ ಮೆಲ್ಗ್ ಯೇಳ್ತಾರೆ, ಎಂಟ್ ಅತ್ ಸಾರೆ ಬುದ್ದಿ, ಕೇಳ್ದೆ ಓದ್ರೆ ಗೊತ್ತೈತಲ್ಲ, ಯಿಡ್ಕೊಂಡ್ ಮಾಡ್ಸೋದ್ ಬದ್ದಿ," ಎಂದು ಕೇಳುವ ಧೈರ್ಯದಿಂದಾಗಿ. "ಪರಪಂಚ್ಗೆಲ್ಲ ಒಡೆಯ ನೀನು, ಏನ್ ಏಳಾನೆ ನಿನ್ಗೆ, ಗುಡಿಸೋ ಪೊರಕೆ ಆಗೋದ್ನಲ್ಲ, ಎಜಮಾನ್ನೇನೆ ಮನ್ಗೆ," ಎಂಗು ವ್ಯಥಿಸುವ ನೋವಿನಿಂದಾಗಿ. "ಲೋಕ್ ಮುಳುಗೋಕ್ ತಾವ್ ಕೊಟ್ಬೋನ್ಗೆ, ಮೊಕ್ಕೆ ಸೆಗಣಿ ನೀರು" ಎರಚುವ ರೊಚ್ಚಿನಿಂದಾಗಿ. ಈ ಸಂಕಲನದ ನಿಜವಾದ ಅನನ್ಯತೆ ಇದೇ ಎಂದು ನಾನು ಭಾವಿಸುತ್ತೇನೆ.

'ಮುನಿಯನ್ನ ಯೆಂಡಕ್ಕ ಬೋಲೋರೇ ಜೈ'
'ರತ್ನಂಗೂ ಪದಗಳ್ಗೂ ಹೀಗೇ ಜೈ ಸೈ'.

## ೭

## ಆನಂದಕಂದ/ ಮಾತನಾಡುವ ಕಲ್ಲು

ಜನಪದ ಭಾಷೆ, ಜನಪದ ಶೈಲಿ, ವಸ್ತು, ಬದುಕಿನ ವಿಭಿನ್ನ ರೀತಿನೀತಿಗಳನ್ನು, ಅನೇಕ ಬಗೆಗಳಲ್ಲಿ, ತಮ್ಮ ಅಭಿವ್ಯಕ್ತಿಗಳಿಗೆ ಮತ್ತು ಅಗತ್ಯಗಳಿಗೆ ತಕ್ಕಷ್ಟನ್ನು ಉಪಯೋಗಿಸಿಕೊಂಡ ಅನೇಕ ಲೇಖಕರು ನಮ್ಮಲ್ಲುಂಟು. ಆದರೆ ಈ ಎಲ್ಲದರ ಹಿಂದೆ ತುಯ್ಯುವ ಜೀವನ ಮೌಲ್ಯವನ್ನೇ ಬದುಕಿನ ನಿಜವಾದ ಮೌಲ್ಯವೆಂದು ದೃಢವಾಗಿ ನಂಬಿಕೊಂಡ ಲೇಖಕರು ನಮ್ಮಲ್ಲಿ ಕಡಿಮೆ. ಹಾಗೆ ನಂಬಿಕೊಂಡದ್ದು ಮಾತ್ರವಲ್ಲದೆ, ಆ ಮೌಲ್ಯಗಳು ಮತ್ತು ಜೀವನ ದ್ರವ್ಯಗಳು ಕೊಡುವ ನೀತಿ ನಿಯಮ, ಶ್ರದ್ಧೆ ವಿಶ್ವಾಸ, ಸುಖ-ದುಃಖ ಇತ್ಯಾದಿಗಳನ್ನು ಪ್ರಜ್ಞಾಪೂರ್ವಕ ವಾಗಿ ಸ್ಪಂದಿಸಿ ಅವನ್ನು ಅಷ್ಟೇ ಗಾಢವಾಗಿ ಪ್ರತಿ ಪಾದಿಸಿದ ಅಪರೂಪ ಬರಹಗಾರರು ಬೆಟಗೇರಿ ಕೃಷ್ಣಶರ್ಮ. 'ಆನಂದಕಂದ' ಎಂಬ ಕಾವ್ಯನಾಮ ದಲ್ಲಿ ಅವರು ಬರೆದ 'ಮಾತನಾಡುವ ಕಲ್ಲು' ಅಷ್ಟೇ ಅಪರೂಪದ ಕಥಾ ಸಂಕಲನಗಳಲ್ಲಿ ಒಂದು.

ಜುಲೈ ೧೯೪೯ರಲ್ಲಿ ಪ್ರಕಟವಾದ ಈ ಸಂಕಲನ ದಲ್ಲಿ ಒಟ್ಟು ಎಂಟು ಕಥೆಗಳಿವೆ. ಬರಿಯ ಜಾನಪದ ಮೌಲ್ಯಗಳನ್ನು ನಂಬಿದ ಬದುಕುಗಳಲ್ಲಿ ಮಾತ್ರ ವಲ್ಲ, ಯಾವ ಮೌಲ್ಯವನ್ನೇ ನಂಬಿದ ಬದುಕುಗ ಳಲ್ಲೂ ಕಾಣಬಹುದಾದ, ಬರಬಹುದಾದ, ಕೆಲವು

ಸಾಮಾನ್ಯ ಸಮಸ್ಯೆಗಳನ್ನೂ ಪ್ರಸಂಗಗಳನ್ನೂ ಘಟನೆಗಳನ್ನೂ ಈ ಕಥೆಗಳು ಹೊಂದಿವೆ. ಆದರೆ ಅವುಗಳ ಒಳನೆಯ್ಗೆಗಳಲ್ಲಿ ಮತ್ತು ಮುಖ್ಯವಾಗಿ ಅವು ಪರಿಹಾರ ಕಂಡುಕೊಳ್ಳಬೇಕೆನ್ನುವ ಜಾಡುಗಳಲ್ಲಿ, ದಾರಿಕಂಡುಕೊಳ್ಳುತ್ತಿರುವ ತಿರುವುಗಳಲ್ಲಿ, ಈ ಮೌಲ್ಯ ಪ್ರತಿಪಾದನೆ, ನಂಬಿಕೆ, ಶ್ರದ್ಧೆ, ವಿಶ್ವಾಸಾದಿಗಳು ಢಾಳಾಗಿ ಎದ್ದು ಕಾಣಿಸುತ್ತವೆ. ಅಷ್ಟೇ ಏಕೆ, ಆರಂಭದಿಂದ ಕೊನೆಯವರೆಗೆ ಈ ಎಲ್ಲ ಮಂಡಿತ ಅನುಭವಗಳನ್ನು, ಬದುಕನ್ನು, ಪ್ರತಿಕ್ರಿಯಿಸುವ ಎಲ್ಲ ಪರಿಶ್ರಮಗಳಲ್ಲೂ ಈ ಒಂದು ಗಟ್ಟಿಯಾದ ತಳಪಾಯ ಎದ್ದು ಕಾಣಿಸುತ್ತದೆ. ಇದೇ ಆನಂದಕಂದರು ನಂಬಿ, ಪ್ರತಿಪಾದಿಸುವ 'ಜಗತ್ತು.'

ಈ ಜಗತ್ತಿನಲ್ಲಿ, ಆನಂದಕಂದರು ಕಂಡದ್ದು, ಮೆಚ್ಚಿಕೊಂಡದ್ದು, ಆದ್ದರಿಂದ ಪ್ರತಿಪಾದಿಸಿದ್ದು: ನ್ಯಾಯತತ್ಪರತೆ, ಸತ್ಯಸಂಧತೆ, ಪ್ರಾಮಾಣಿಕ ನಿಲುವು, ಮುಗ್ಧ ವಿಶ್ವಾಸ, ಮರ್ಯಾದೆಯ ಗೌರವ ಇತ್ಯಾದಿಗಳೇ ಆಗಿದ್ದು ಗಮನಿಸಬೇಕಾದ ಸಂಗತಿ.

ಆದರೆ, ಇಲ್ಲಿ ನೋಡಲೇಬೇಕಾದ ಮುಖ್ಯ ಅಂಶವೆಂದರೆ, ಈ ಯಾವ ಪ್ರತಿಪಾದನೆಗಳೂ, ಬರಿಯ ತಾತ್ವಿಕ ಮಂಡನೆಗಳಾಗಿ ಆಗಲಿ, ಉಪದೇಶಭಾಷಣಾದಿಗಳಾಗಿ ಆಗಲೀ ಬಾರದೆ, ಒಂದು ಅತ್ಯಂತ ಸರಳವಾದ ಕಥೆ ಮಾತ್ರವೇ ಆಗಿ ಮೂಡಿಬರುವದು. ಅಷ್ಟೆ ಮುಖ್ಯವಾಗಿ, ಕಥೆಗಳ ಎಷ್ಟೊ ಸಂದರ್ಭಗಳಲ್ಲಿ, ಭಾವ ಮೂಲವಾದ ಸನ್ನಿವೇಶಗಳೂ ತಳಪಾಯಗಳೂ ಇದ್ದರೂ, ಲೇಖಕರು, ಎಲ್ಲೆಲ್ಲಿಯೂ ಭಾವ-ಪರವಶರಾಗದೆ, ಅತ್ಯಂತ ಸಂಯಮದಿಂದ, ವಾಸ್ತವಿಕ ದೃಷ್ಟಿಯಿಂದ ಮಾತ್ರವೇ ತಮ್ಮ ನಿರೂಪಣೆಗಳನ್ನು ನೀಡಿರುವ ರೀತಿ, ಬಹುಶಃ ಈ ತಲೆಮಾರಿನ ಲೇಖಕರಲ್ಲಿ, ಇದು, ತೀರ ಕೆಲವರಲ್ಲಿ ಮಾತ್ರವೇ ಕಂಡುಬಂದ ಸಂಗತಿಯಾಗಿದೆ ಎಂಬುದೂ ಗುರುತಿಸಬೇಕಾದ ಇನ್ನೊಂದು ಸಂಗತಿ.

'ಮಾತನಾಡುವ ಕಲ್ಲು' ಎಂಬ ಪುಸ್ತಕದ ಶೀರ್ಷಿಕೆಯೇ ಈ ಕೃತಿಯು, ಇಲ್ಲಿಯ 'ಜಗತ್ತಿನ' ಅನೇಕ ಆಶಯಗಳನ್ನೂ ಮಜಲುಗಳನ್ನೂ ಧ್ವನಿಸುತ್ತದೆ. ಈ ಕೃತಿಯಲ್ಲಿ ಮಂಡಿತವಾದ ಜಗತ್ತು ಮತ್ತು ವ್ಯಕ್ತಿಗಳು ಪ್ರಕೃತಿಗೆ ಹೊಂದಿಯೇ ಬದುಕುವಂಥವರು. ಮಣ್ಣಿನ ಮಕ್ಕಳು ಎಂದಾಗ, ಈ ಮಣ್ಣಿನ ಮಕ್ಕಳ ಒಳ್ಳೆಯದು ಮತ್ತು ಕೆಟ್ಟದ್ದು ಈ ಎರಡನ್ನೂ ತಿಳಿಸಲು, ಮಣ್ಣಿನ ಅಷ್ಟೇ ಅವಿಭಾಜ್ಯ ಅಂಗವಾದ ಕಲ್ಲು ತಾನೇ ಬರಬೇಕು? ಎಂದರೆ, ಕಲ್ಲಿನಂತಹ ಕಲ್ಲಿನ ಒಡಲಲ್ಲಿಯೇ, ಅದು ಹೇಳಬೇಕಾದ ಅಳಲು ಮತ್ತು ತಿರುಳನ್ನೂ ಭವಿಷ್ಯದುದ್ದಕ್ಕೂ ಬಿಡಬೇಕೆನ್ನುವ ಜಾನಪದ ಜಗತ್ತಿನ ಕಲ್ಪನೆಯೇ ತುಂಬ ಅದ್ಭುತವಾದದ್ದು. ಎಂತಲೇ, ಗತಿಸಿಹೋದ ಬದುಕುಗಳ, ಬಿಸಿ-ಯುಸಿರ ತಹತಹದ ತಳಮಳಗಳನ್ನೋ, ಕಾಮದೆದೆಯ ಕ್ರೌರ್ಯ ಕೊಳೆಗಳನ್ನೋ ಅಷ್ಟೇ ಸಹಜವಾಗಿ ಸಾರುತ್ತ ಹೋಗುವ ಈ ಕಲ್ಲುಗಳು ಬರಿ ಮಾತನಾಡುವ ಕಲ್ಲುಗಳಾಗಿರದೆ, ಮೌನವಾಗಿ ಉಸಿರಾಡುವ ಕಲ್ಲುಗಳೂ ಆಗುತ್ತವೆ. ಈ ಉಸಿರಿನ ಏರಿಳಿತಗಳ ಹಿಂದಿನ ಶ್ವಾಸೋಚ್ಛ್ವಾಸಗಳಿಗೆ ಬಾಯಿ ಕೊಟ್ಟ ಲೇಖಕರು, ಪರ್ಯಾಯವಾಗಿ, ಗತಿಸಿ ಹೋದ ಬದುಕುಗಳಿಗೂ ಬಾಯಿ ಕೊಟ್ಟು ಒಂದು ವಿಶಿಷ್ಟ ನಂಬಿಕೆಯ ವಿಶಾಲ ಜಗತ್ತನ್ನೇ ನಮ್ಮೆದುರು ನಿಲ್ಲಿಸುವಲ್ಲಿ ಯಶಸ್ವಿಯಾಗುತ್ತಾರೆ.

ಈಗ, ಮಾತನಾಡುವ ಕಲ್ಲು, ಎಂಬ ಕಥೆಯನ್ನೇ ನೋಡೋಣ.

ಹಿಂದೆ ನಡೆದ ಯಾವುದೋ ಒಂದು ಘಟನೆಗೆ, ಮುಂದೆ ಭವಿಷ್ಯದಲ್ಲಿ 'ನಿರೂಪಕ' ಮಾತ್ರವೇ ಆಗಬೇಕಾದ—ವೀರಗಲ್ಲು, ಮಾಸ್ತೀಕಲ್ಲು, ನಿಷಿಧಿ ಕಲ್ಲು ಇತ್ಯಾದಿ—ಕಲ್ಲುಗಳ ಮಧ್ಯ, ಕೆಲವು ಕಲ್ಲುಗಳು, ಆ ಘಟನೆಯ ವರ್ತಮಾನ ಗಳಿಗೆಗಳಲ್ಲಿಯೇ 'ಪಾತ್ರ'ಗಳೂ ಆಗಿಬಿಡುವುದು ಈ ಕಥೆಯಲ್ಲಿಯ ಒಂದು ಗಂಭೀರ ಚೋದ್ಯವಾಗಿದೆ. ಮನುಷ್ಯ ಮುಗ್ಧ ಪ್ರಾಮಾಣಿಕತೆಯಿಂದ, ವಿಶ್ವಾಸದಿಂದ ಪ್ರಕೃತಿಯನ್ನು ನಂಬಿದರೆ, ಪ್ರಕೃತಿ ಕೂಡ ತನ್ನನ್ನು ನಂಬಿದ ಮನುಷ್ಯನ ಕೈ ಬಿಡದೆ ಆತನ ಅತ್ಯಂತ ದುರ್ದಮ್ಯ ಗಳಿಗೆಗಳಲ್ಲಿ ಆತನನ್ನು ರಕ್ಷಿಸುತ್ತದೆ ಎಂಬ ಮುಗ್ಧ ವಿಶ್ವಾಸವೇ ಈ ಕಥೆಗೆ ಹಿನ್ನೆಲೆಯಾಗಿದೆ.

ನಂಬಿಕೆಯಂತೆ ಧರ್ಮ, ಧರ್ಮದಂತೆ ಜೀವನ ಜೀವನದಂತೆ ನಂಬಿಕೆ ಎಂಬ ಪರಸ್ಪರ ಪೂರಕವಾದ ಇಲ್ಲಿಯ ಜಗತ್ತಿನಲ್ಲಿ ನಂಬಿಕೆ ವಿಶ್ವಾಸಗಳಿಗೆ ಬೆಲೆ ಬಹಳ. ಎಂತಲೆ ಮನುಷ್ಯನ 'ಭಾಷೆ' 'ವಚನ' ಇತ್ಯಾದಿಗಳಿಗೆ ಬೆಲೆ ಇರುವ ಜಗತ್ತೂ ಹೌದು ಇದು. ಎಂತಲೇ ಇಂಥ 'ಭಾಷೆ' ಯೊಂದಕ್ಕೆ ಚ್ಯುತಿ ಬಂದಾಗ, ಇಲ್ಲಿಯ ಜೀವನದ ಇನ್ನೊಂದು ಪಾರ್ಶ್ವವೂ ಆದ ಪ್ರಕೃತಿಯೇ ಬಂಡೆಯ ಸ್ವರೂಪದಲ್ಲಿ ಉರುಳಿ ಬಂದು ನಿಂತು 'ಸಾಕ್ಷಿ' ಹೇಳುವ ಇಲ್ಲಿಯ ಕಲ್ಪನೆ, ಈ ಮುಗ್ಧ ಜಗತ್ತಿನ ವಿಶ್ವಾಸದಷ್ಟೇ ಗಟ್ಟಿಯಾದ ಪಾತ್ರವೂ ಆಗಿಬಿಡುತ್ತದೆ.

ಇದೇ ಸಂದರ್ಭದಲ್ಲಿ, ಸತ್ಯ, ಯಾವುದೊ ಒಂದು ವಿಶಿಷ್ಟ ಜಾತಿಯ ಸೊತ್ತು ಮಾತ್ರವಾಗಿರದೇ, ಅದು, ತನ್ನನ್ನು ನಂಬಿದವರಿಗೆ ನೀರುಣಿಸುವ ನಿರ್ಮಲ ಮೌಲ್ಯ ಮಾತ್ರವಾಗಿದೆ ಎಂಬ ಸಾರ್ವಕಾಲಿಕ ತತ್ವ ಪ್ರತಿಪಾದನೆಯೂ ಇಲ್ಲಿರುವದನ್ನು ಗಮನಿಸಬೇಕು.

ಸಾಮಾಜಿಕ ಮತ್ತು ಸಾಮೂಹಿಕ ಸಂಬಂಧಗಳು ಮತ್ತು ವೈಯಕ್ತಿಕ ನೋವುಗಳ ಮಾನವೀಯತೆ ಇವುಗಳ ಒಂದು ಅತ್ಯಂತ ಸೂಕ್ಷ್ಮವಾದ ತಾಕಲಾಟವನ್ನು ಮತ್ತು ಅದರ ಅಷ್ಟೇ ಸೂಕ್ಷ್ಮ ನಿರ್ಣಯಗಳನ್ನು 'ಜೋಗತಿಯ ಕಲ್ಲು' ಯಶಸ್ವಿಯಾಗಿ ನಿರೂಪಿಸುತ್ತದೆ.

ಚಂದಾ ಎಲ್ಲಮ್ಮನ 'ಜಗಾ' ಹೊತ್ತವಳು. ಸಾಮಾಜಿಕವಾಗಿ, ಇಲ್ಲಿಯ ಜಗತ್ತೇ ನಂಬಿದಂತೆ ಯಾರ ಸೊತ್ತೂ ಆಗಬಲ್ಲವಳು. ಹಾಗೆಯೇ ಮನಸಾ ಹೆಬ್ಬುಲಿ ನಾಯಕನನ್ನು ಮೆಚ್ಚಿಕೊಂಡವಳು, ಮೆಚ್ಚಿಸಿಕೊಂಡವಳು. ಆದರೆ ತನ್ನ ಮತ್ತು ಹೆಬ್ಬುಲಿ ನಾಯಕನ ಸಂಬಂಧ ನಾಯಕನ ಹೆಂಡತಿ ಚಂಗಲವ್ವನ ವೈಯಕ್ತಿಕ ದುರಂತವಾಗುತ್ತದೆಂದು ತಿಳಿದಾಗ, ಇಲ್ಲಿಯ ನಂಬಿಕೆಗಳಂತೆಯೇ, ತನ್ನದೇನೂ ತಪ್ಪಿಲ್ಲದಿದ್ದರೂ, ತನ್ನನ್ನೆ ತಾನು ಕೊಂದುಕೊಳ್ಳುವವಳು.

ಇಡಿಯ 'ಜಗ'ವನ್ನೇ ತನ್ನ ತಲೆಯ ಮೇಲೆ ಹೊತ್ತ ಎಲ್ಲಮ್ಮನ 'ಜಗಾ' ಹೊತ್ತ ತಾನು, ಅದೇ ಎಲ್ಲಮ್ಮನ ಇನ್ನೊಂದು ಕೂಸಾದ ಚಂಗಲವ್ವನ 'ಜಗ'ದ ಮೇಲೆ ಹೊರೆಯಾಗಿ ಕೂಡ ಬಾರದೆಂದು, ಆಕೆಯ 'ಜಗ' ಉಳಿಸಲು ಆಕೆಯ ನೋವನ್ನೂ, ತನ್ನ ಆಶೆ, ಅಳಲುಗಳನ್ನೂ ತನ್ನ 'ಜಗ'ದಲ್ಲಿಯೇ ಮುಚ್ಚಿಟ್ಟು ಹೊತ್ತುಕೊಂಡು ಈ 'ಜಗ'ದಿಂದ ಹೊರಟು ಹೋಗುವವಳು.

ಈ ಕಥೆಯಲ್ಲಿ ಪ್ರಕಟವಾಗಿರುವ, ಇಡಿಯ ಜಾನಪದ ನಂಬಿಕೆಯ ಜಗತ್ತನ್ನು ಮಿಕ್ಕಿ, ಇತರ ಎಲ್ಲ ಮೌಲ್ಯಗಳನ್ನು ಮಿಕ್ಕುವ ಮಾನವೀಯ ವಾತ್ಸಲ್ಯ, ಕರುಣೆ, ಮತ್ತು ಮುಖ್ಯವಾಗಿ ತ್ಯಾಗಗಳನ್ನು ಪ್ರತಿಪಾದಿಸುವ ರೀತಿ ತುಂಬ ಅಮೂಲ್ಯವಾದದ್ದು ಎಂದು ನಾನು ಭಾವಿಸುತ್ತೇನೆ.

'ಇಲ್ಲಿಯ ಕಥೆಗಳಲ್ಲಿ ಅನೇಕರು ಗೆಲ್ಲುತ್ತಾರೆ, ಅನೇಕರು ಸೋಲುತ್ತಾರೆ. ಸೋಲು ಗೆಲುವು ಯಾರದೇ ಇರಲಿ, ಮಾನವನ ಹೃದಯ ಯಾವುದಕ್ಕೆ ಸೋಲುವುದೋ ಅದೇ ಸತ್ಯ' ಎನ್ನುತ್ತಾರೆ ಬೇಂದ್ರೆ. ಇಂಥ ಸತ್ಯ, ಇಲ್ಲಿಯ ಎಲ್ಲ ಕಥೆಗಳಲ್ಲಿ, ಎಲ್ಲೆಲ್ಲೂ ಮಿಂಚಿದೆ.

ಬದುಕಿನಲ್ಲಿ ಸಂಬಂಧ ಮುಖ್ಯವಲ್ಲ, ನ್ಯಾಯ ಮುಖ್ಯ ಎಂದು ಪ್ರತಿಪಾದಿಸುವ 'ಸೀಮೆಯ ಕಲ್ಲು'; ಸಮೂಹ ಮತ್ತು ಪರಿಸರಗಳಿಗೆ ತಕ್ಕದಾಗಿ ಮತ್ತು ಗೌರವಪೂರ್ವಕವಾಗಿ ಸ್ಪಂದಿಸುವದೇ ಪಕ್ವ ವ್ಯಕ್ತಿತ್ವ ಎಂದು ಹೇಳುವ 'ಕಂಕಣದ ಕೈ,' ಮನುಷ್ಯನ ಎಲ್ಲ ಗುಣಗಳನ್ನು ಮಿಕ್ಕುವದು, ಯೋಗ್ಯ ಸಮಯದಲ್ಲಿಯ ಯೋಗ್ಯ ಮಾನವೀಯ ಸೇವೆ ಎಂದು ಪ್ರತಿಪಾದಿಸುವ 'ವೀರಮಾಸ್ತಿ' ಮತ್ತು 'ಬಡವಿಯ ಬಾವಿ' ಮುಂತಾದವುಗಳು, ಈ 'ಜಗತ್ತು' ಪ್ರತಿಪಾದಿಸುವ ಕೆಲವು ಅತ್ಯುತ್ತಮ ಮೌಲ್ಯಗಳನ್ನು ತಮ್ಮ ಒಡಲೊಳಗಿಟ್ಟುಕೊಂಡ ಕಥೆಗಳು. ಹಾಗೆಯೇ, ಮನುಷ್ಯನ ವಿಷಮ ಸಂಬಂಧಗಳ ಮಧ್ಯದಲ್ಲೂ, ಸೂಕ್ಷ್ಮವಾಗಿ ಆವಿಯಾಡುವ ಮಾನವೀಯತೆ ನಿಷ್ಕಲ್ಮಷ-ಪ್ರೇಮ, ಸತ್ಯನಿಷ್ಠತೆ, ಮುಗ್ಧ ನಂಬಿಕೆ ಇತ್ಯಾದಿಗಳಿಗೆ ಬೆಳಕು ಹಿಡಿಯುವ 'ಇಬ್ಬಣದ ದಿಬ್ಬಣ' ಮತ್ತು 'ದನಗಾಹಿ'ಗಳು, ಇತರೆರಡು ಒಳ್ಳೆಯ ಕಥೆಗಳು, ಕೊಡುಗೆಗಳು.

ಒಂದು ವಿಶಿಷ್ಟ ಜಗತ್ತು ನಂಬಿದ, ನಡೆಯು

ತ್ತಿರುವ ಕೆಲವು ಅಮೂಲ್ಯ ಮೌಲ್ಯಗಳ ಪ್ರತಿ ಪಾದನೆಗೈಯುತ್ತಿರುವ ಈ 'ಮಾತನಾಡುವ ಕಲ್ಲಿ'ನ ಸ್ವರ ಕೇಳುವ ಕಿವಿಗಳಲ್ಲಿ ಇಂದಿಗೂ ಸ್ಪಷ್ಟ ವಾಗಿ ನಿನದಿಸುತ್ತಲೇ ಇದೆ.

೮

## ಶ್ರೀನಿವಾಸ/ಸುಬ್ಬಣ್ಣ

ಈ ಇಡಿಯ ಕಾದಂಬರಿಯನ್ನು ಓದಿದಾಗ; ಬದುಕಿನಲ್ಲಿ – ಸಂಗೀತದ ಬದುಕಿನಲ್ಲಿ – ಯಾವ ಘನ ಅವಕಾಶವನ್ನೂ ಪಡೆಯದ, ಯಾವ ಕಚೇರಿ ಯನ್ನೂ ನಡೆಸದ, ಯಾವ ಆಸ್ಥಾನವನ್ನೂ ಅಲಂಕ ರಿಸದ, ಯಾವ ಬಿರುದು ಬಾವಲಿ ಖಿಲ್ಲತ್ತನ್ನೂ ಧರಿಸದ ಸುಬ್ಬಣ್ಣ; ವ್ಯಕ್ತಿಗತವಾಗಿ ತೀರ ತಾಪ- ದಾಯಕ ಬದುಕನ್ನು ಸಾಗಿಸಿದ ಸುಬ್ಬಣ್ಣ; ತನ್ನ ಬದುಕಿನ ಕೊನೆಯಲ್ಲಿ ಈ ಎರಡೂ ಮುಖಗಳಲ್ಲೂ ಒಂದು ಅನುಪಮ ಎತ್ತರ ಮತ್ತು ಅಸಾಧಾರಣ ಪಕ್ವತೆ ಇವನ್ನು ಪಡೆದುಕೊಂಡದ್ದಾದರೂ ಹೇಗೆ ಎನ್ನುವುದು ಮುಖ್ಯ ಪ್ರಶ್ನೆಯಾಗುತ್ತದೆ.

ಸುಬ್ಬಣ್ಣನ ಬದುಕಿನ ಒಂದು ವಿಶಿಷ್ಟ ಹಂತ ದಲ್ಲಿಯ ಕೆಲವು ಸಾವುಗಳೇ, ಆತನನ್ನು, ಕ್ರಮೇಣ ವಾಗಿ ಒಂದು ಭಿನ್ನವೇ ಆದ ಬದುಕಿಗೆ, ಒಂದು ಪಕ್ವವೇ ಎನ್ನಬಹುದಾದ ಎತ್ತರಕ್ಕೆ ತಂದು ನಿಲ್ಲಿ ಸುವದರಿಂದ, ಮನುಷ್ಯನ ಸಾವು–ಸಂಬಂಧಗಳನ್ನು ಕುರಿತ ವಿವೇಚನೆಯೊಂದಿಗೇ ಈ ಕಾದಂಬರಿ ಯನ್ನು ನೋಡಬಹುದು.

ತೀರ ಹತ್ತಿರದವರ ಸಾವು ತೀರ ಸಂಬಂಧಿಸಿದ ಪ್ರತಿಯೊಬ್ಬರನ್ನೂ ಪಕ್ವತೆಗೆ ಹತ್ತಿರ ತರಬಹು ದಾಗಿದ್ದಾದರೆ ಜಗತ್ತಿನಲ್ಲಿ ಯಾವಾಗಲೂ ಬಹು ಪಾಲು ಜನ ಪಕ್ವರೇ ಆಗಿರುತ್ತಿದ್ದರು. ಆದರೆ ವಸ್ತು ಸ್ಥಿತಿ ಹಾಗಿಲ್ಲ. ಕಾರಣವಿಷ್ಟೇ; ಇಂಥಲ್ಲಿ ಬದುಕಿದವನ ನೆಂಟಸ್ತನ ಸತ್ತವನೊಂದಿಗೆ ಏನಿತ್ತು ಎನ್ನುವುದು ಮುಖ್ಯವಾಗುವುದಿಲ್ಲ. ಆದರೆ, ಬದುಕಿದವನ ಈವರೆಗಿನ ಇಡಿಯ ವ್ಯಕ್ತಿತ್ವದ ಒಟ್ಟು ಕಟ್ಟಿಕೊಳ್ಳುವಿಕೆಯಲ್ಲಿ, ಅದರ ಪೂರ್ಣ ಒಳ-ಹೊರಗುಗಳಲ್ಲಿ, ಸತ್ತವನ ವ್ಯಕ್ತಿತ್ವದ ಬೇರುಗಳು ಎಷ್ಟು ಆಳಕ್ಕಿಳಿದಿದ್ದವು ಎನ್ನುವುದು ಮುಖ್ಯವಾಗುತ್ತದೆ; ಬದುಕಿದವನ ಭವಿಷ್ಯದ ಕನಸಿನ ನೇಯ್ಗೆಯಲ್ಲಿ ಸತ್ತವನ ಭವಿಷ್ಯ(?)ದ ಎಳೆಗಳು ಎಷ್ಟು ಗಾಢವಾಗಿ ಹೆಣೆದುಕೊಂಡಿದ್ದವು ತೊಡಗಿಕೊಂಡಿದ್ದವು ಎನ್ನುವುದು ಮುಖ್ಯವಾಗು ತ್ತದೆ. ಎಂತಲೇ ಇಂಥ ಸಂದರ್ಭಗಳಲ್ಲಿ ಸತ್ತವ ನೊಂದಿಗೆ ಬದುಕಿ ಇದ್ದವನ ವ್ಯಕ್ತಿತ್ವದ ಒಂದು ಭಾಗವೇ ಊನವಾಗಿ ಬಿಡುತ್ತದೆ. ವ್ಯಕ್ತಿತ್ವದ ಈ ಪಾರ್ಶ್ವವಾಯು, ಭಯಂಕರ ಸಂತಾಪಕ್ಕಂತೂ ಸರಿಯೇ, ಆಯಾ ವ್ಯಕ್ತಿತ್ವದ ಎತ್ತರಕ್ಕನುಣ ವಾಗಿ, ಸಮಗ್ರ ಸ್ವರೂಪದ ಗಂಭೀರ ಚಿಂತನೆ, ವಿವೇಚನೆಗಳವರೆಗೂ ಕೊಂಡೊಯ್ಯುತ್ತದೆ. ಈ ಬಗೆಯ ಚಿಂತನೆ, ವಿವೇಚನೆಗಳೇ ಬದುಕುಳಿದ ವನ ಈ ಕೊರೆಯನ್ನು ಇನ್ನೊಂದು ಬಗೆಯ ಅರ್ಥಪೂರ್ಣ ತಿಳುವಳಿಕೆಗಳಿಂದ, ತಿರುವುಗಳಿಂದ ತುಂಬಿಕೊಡುತ್ತವೆ.

ಸುಬ್ಬಣ್ಣನಿಗಾದದ್ದೂ ಇದೇ. ಮಗನ ಸಾವು, ಮಗಳ ಸಾವು, ಹೆಂಡತಿಯ ಸಾವು, ತಂದೆ- ತಾಯಿಗಳ ಸಾವು, ಹೀಗೆ ಒಂದೊಂದು ಏಟೂ ಆತನನ್ನು, ಅನುಭವ ವಿವೇಚನೆಗಳ ಹಿನ್ನೆಲೆ ಯಲ್ಲಿ, ಕ್ರಮೇಣವಾಗಿ, ಇನ್ನಷ್ಟು, ಸಂಸ್ಕಾರ ದೆಡೆಗೆ, ಇನ್ನಷ್ಟು ಸಂತತ್ವದೆಡೆಗೆ, ಇನ್ನಷ್ಟು ಪರಿಪಕ್ವದೆಡೆಗೆ ಕರೆದೊಯ್ಯುತ್ತವೆ.

ಇನ್ನೊಂದು ಮಹತ್ವದ ಸಂಗತಿಯನ್ನು ಇಲ್ಲಿ ಗಮನಿಸಬೇಕು. ಹುಟ್ಟಿಸಿದವರ, ಹುಟ್ಟಿದವರ, ಕಟ್ಟಿಕೊಂಡವಳ ಈ ಸಾವಿನಿಂದಲೂ, ಸಾವಿನ ವಾರ್ತೆಯಿಂದಲೂ ಆತನಿಗೆ ಆಗದಷ್ಟು ದುಃಖ, ಆತ ತನ್ನ ಪಿಟೀಲನ್ನು ತನ್ನದೇ ನಿರ್ಧಾರ ದೊಂದಿಗೆ ನದಿಗೆ ಒಗೆದಿದ್ದರೂ, ತ್ಯಜಿಸಿದಾಗ ಆಗುತ್ತದೆ ಎನ್ನುವುದು. ಸಾವು ಸಂಬಂಧಗಳನ್ನೂ ಕುರಿತ ಮೇಲಿನ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ನೋಡಿದರೆ, ಪಿಟೀಲು ಎಂದರೆ ಸಂಗೀತ ಎಷ್ಟು ಗಾಢವಾಗಿ ಆತನ ವ್ಯಕ್ತಿತ್ವವನ್ನು ಆವರಿಸಿ ಕೊಂಡಿತ್ತು ಎನ್ನುವದು ಸ್ಪಷ್ಟವಾಗುತ್ತದೆ. ಇನ್ನೂ ಒಂದು ಮಾತು ಇದನ್ನು ಸ್ಪಷ್ಟ ಪಡಿಸುತ್ತದೆ. ಒಮ್ಮೆ ತಂದೆ-ತಾಯಿಯರನ್ನು ಬಿಟ್ಟು ಮನೆ ಬಿಟ್ಟು ಬಂದ ಆತ, ಮುಂದೆ

ಹತ್ತಾರು ವರುಷಗಳ ನಂತರ, ಒಂದು ಸಂದರ್ಭ ಒದಗಿದಾಗಲೂ ತನ್ನ ತಂದೆ-ತಾಯಿಯರನ್ನು ಕಾಣಲು ಆತ ಒಪ್ಪದೆ ಹೊರಟೇ ಹೋಗಿ ಬಿಡುತ್ತಾನೆ. (ಮುಂದೆ ಅದೇ ತಂದೆ-ತಾಯಿ ಯರಿಗೆ ಅಶ್ರುಪೂರ್ಣ ತರ್ಪಣ ಸಹ.) ಆದರೆ, ಅದೇ ತಾನೇತಾನಾಗಿ, ಬೇಡವೇ ಬೇಡ ವೆಂದು ಎಸೆದುಬಿಟ್ಟ ಪಿಟೀಲು, ಮತ್ತೆ, ಮರುದಿನವೇ ಸಿಕ್ಕಾಗ, ಮತ್ತೊಮ್ಮೆ ಅದನ್ನು ಅತ್ಯಂತ ಆತ್ಮೀಯವಾಗಿ ಸ್ವೀಕರಿಸುತ್ತಾನೆ. ಹೊಳೆಯಲ್ಲಿ ಬಿದ್ದದ್ದು ಪಿಟಿಲೊಂದೇ ಅಲ್ಲ, ಸುಬ್ಬಣ್ಣ ಸಹಿತ. ಮುಂದಿನ ಸುಬ್ಬಣ್ಣನದು ಮರುಜನ್ಮ ಅಷ್ಟೇ. ಇಲ್ಲಿ, ಸುಬ್ಬಣ್ಣ ಬೇರೆಯಲ್ಲ ಸಂಗೀತ ಬೇರೆಯಲ್ಲ. ಎಂತಲೇ ನಿನ್ನೆ ಧಿಃಕರಿಸಿದ ವೆಂಕಟರಮಣನನ್ನು ಇಂದು ಸ್ವೀಕರಿಸುತ್ತಾನೆ ಆತ.

ಇಲ್ಲಿ ಇನ್ನೂ ಒಂದು ಪ್ರಶ್ನೆ: ಬದುಕಿನ ಕೊನೆ ಯಲ್ಲಿ, ಇಷ್ಟೆಲ್ಲ ಪಕ್ವತೆ ಪಡೆದು ಯಾರಿಂದಲೂ ಹಣ ಸ್ವೀಕರಿಸದ, ಯಾರಲ್ಲೂ ಊಟ ಮಾಡದ, ಯಾರ ಮನೆಯಲ್ಲೂ ಮಲಗದ, ಎಲ್ಲರ ಎಲ್ಲ ಗೌರ ವಾದಿಗಳಿಂದಲೂ ದೂರ ಓಡುತ್ತಿದ್ದ ಸುಬ್ಬಣ್ಣ, ಯಾರನ್ನೂ ಯಾವ ಬಗೆಯಲ್ಲೂ ಹಚ್ಚಿಕೊಳ್ಳಲು ಇಷ್ಟಪಡದಿದ್ದ ಸುಬ್ಬಣ್ಣ, ದೇವರ ಹೆಸರಿನಲ್ಲಿ ಮಕ್ಕಳಿಗೆ ಪಾಠ ಹೇಳಲು, ಆರಂಭಿಸಿದ್ದು, ಲಲಿತೆ ಗಾಗಿ ಅಷ್ಟೊಂದು ದೂರ ದೂರ ಓಡಿ ಓಡಿ ಬಂದದ್ದು ಏಕೆ ಎನ್ನುವುದೇ ಆ ಪ್ರಶ್ನೆ.

ಉತ್ತರವಿಷ್ಟೆ: ಸತ್ಸಂಗಕ್ಕಿಂತಲೂ ಉತ್ತಮ ಸ್ಥಿತಿ ನಿಸ್ಸಂಗತ್ವ, ಆದರೆ ನಿಸ್ಸಂಗದಷ್ಟೇ ಎತ್ತ ರದ ಮೌಲ್ಯ ನಿರ್ವ್ಯಾಜ ಪ್ರೇಮ ಇಂಥ ಭಾವ ಸಂಬಂಧ ಹೊರತು ಏನನ್ನೂ ಅಪೇಕ್ಷಿಸದ ಎಳೆಯ ರೊಂದಿಗೆ ಮಾತ್ರ ಈ ಮೌಲ್ಯಾತ್ಮಕ ಕೂಡು ಕೊಳ್ಳುವಿಕೆ ಸಾಧ್ಯ. ಈ ಎಳೆಯರೊಂದಿಗೆ ಸುಬ್ಬಣ್ಣನ ಸಂಬಂಧವಿದ್ದುದು ಈ ಹಿನ್ನೆಲೆಯು ಲ್ಲಿಯೇ. ಅಷ್ಟೇ ಏಕೆ, ಯಾರೊಂದಿಗೂ, ಯಾವ ಮಾತೂ ಆಡದ ಸ್ಥಿತಿಯಲ್ಲಿದ್ದ ಸುಬ್ಬಣ್ಣ, ತನ್ನ ಪಿಟೀಲನ್ನು ಬಾರಿಸಿದ ಎಳೆಯ ವೆಂಕಟರಮಣ ನಿಗೆ ಉತ್ತರ ರೂಪವಾಗಿ ಭೈರವಿಯನ್ನೆಳೆದದ್ದೂ ಈ ಹಿನ್ನೆಲೆಯಲ್ಲಿಯೇ. ಪಕ್ವಗೊಂಡ ಮುಪ್ಪಿರಿ ಜೀವಕ್ಕೆ ಮಕ್ಕಳಿಗಿಂತ ಆಪ್ಯಾಯಮಾನ ಮತ್ತಾರು? ಒಂದು ವಿಶಿಷ್ಟವಾದ ಸಂಸ್ಕಾರ ದೊಳಗಿಂದ ಪಕ್ವಗೊಂಡ ಯಾವುದೇ ಬದುಕಿನ ಜೀವನದ ಧರ್ಮವೇ ಹೌದು ಇದು.

ಮಹಾರಾಜರಿಂದ ಖಿಲ್ಲತ್ತು ಪಡೆಯಬೇಕು ಎಂದು ಸಂಗೀತ ಆರಂಭಿಸಿದ ಸುಬ್ಬಣ್ಣ, ಮಗನ ಊಟಕ್ಕೆ ಮುಖ್ಯವಾಗಿ ಮೊಸರು ಹಾಕಬೇಕು, ಹೆಂಡತಿಗೆ ಬೈಯ್ಗುಳು ತಪ್ಪಬೇಕು ಎಂದು ಮನೆ ಯನ್ನು ಬಿಟ್ಟ ಸುಬ್ಬಣ್ಣ, ಊಟಕ್ಕೆ ಮಿಠಾಯಿ ಕೊಟ್ಟರೆ ಸಾಕು, ಪಿಟೀಲು ಬಾರಿಸುತ್ತೇನೆ ಎಂದು ಬಾರಿಸಿಯೂ ಬಾರಿಸಿದ ಸುಬ್ಬಣ್ಣ, ಕೊನೆಗೆ ಅಂತರಂಗ-ಬಹಿರಂಗವೆರಡರಲ್ಲೂ ಪಕ್ವ ತೆಯ ಒಂದು ಘನತೆಗೇರಿದ್ದು ಚೋದ್ಯವಲ್ಲ; ತನ್ನನ್ನು, ತಾನು ನಂಬಿಕೊಂಡ ಪ್ರಾಮಾಣಿಕ ದಾರಿಯಲ್ಲಿ ನಡೆಯಿಸಿಕೊಂಡು ಹೋಗುವ ಯಾವನೂ ಮುಟ್ಟಲೇಬೇಕಾದ ಗುರಿ ಅದು.

ಎಂತಲೇ, ಸಂಸ್ಕೃತ ಕಲಿಯದೆ ಸಂಗೀತ ಕಲಿತ ದ್ದಕ್ಕಾಗಿ, ಎಂದೆಂದಿಗೂ 'ಸುಬ್ರಹ್ಮಣ್ಯ ಶಾಸ್ತ್ರಿ' ಯಾಗದೆ ಕೊನೆಯವರೆಗೂ, ಸಂಬೋಧಿಸು ವವರ ಬಾಯಿಯಲ್ಲಿ ಸುಬ್ಬಣ್ಣ ಮಾತ್ರನಾಗಿಯೇ ಉಳಿದುಬಿಟ್ಟ ಸುಬ್ಬಣ್ಣ, ತನ್ನ ಬದುಕಿನ ಕೊನೆಯಲ್ಲಿ, ತನ್ನ ವ್ಯಕ್ತಿತ್ವದ ಪರಿಪಕ್ವತೆಯಿಂ ದಾಗಿ, ಘನತೆಯಿಂದಾಗಿ, ಉದಾತ್ತ ನಿಸ್ಪೃಹತೆಯಿಂ ದಾಗಿ 'ಸುಬ್ರಹ್ಮಣ್ಯದೇವ'ನ ಮಟ್ಟಕ್ಕೇರಿದ್ದು. ಇದು, ಕೇವಲ, ಬದುಕಿನ ಪ್ರತಿ ಹಂತದಲ್ಲಿಯ ತಿಳುವಳಿಕೆಯಿಂದಾಗಿ; ಬದಲಾವಣೆ ಕೊಡುವ ಬದುಕನ್ನು ಸಮಷ್ಟಿ ಸಹಿತ ಸ್ವೀಕರಿಸಿದ್ದಕ್ಕಾಗಿ, ಗಮನಿಸಿ, ಇದೇ ವಿಕಾಸದಿಂದಾಗಿಯೇ, ಒಂದು ಕಾಲಕ್ಕೆ 'ಶನಿ' ಎಂದು ಶಪಿಸುತ್ತ, ಅನೇಕ ಸಲ ಹೆಂಡತಿಯ ಮೇಲೆ ಕೈಯನ್ನು ಎತ್ತುತ್ತಿದ್ದ ಸುಬ್ಬಣ್ಣ ಕೊನೆಗಾಲದಲ್ಲಿ ಆಕೆಯನ್ನು, ತಾಯಿ, ದೇವಿಯರ ಸ್ಥಾನಕ್ಕೇರಿಸಿದ್ದು ಮಾತ್ರವಲ್ಲ, ಆಕೆಯ ಪ್ರಶ್ನೆ ಬಂದಾಗಲೆಲ್ಲ 'ಅವರು' ಎನ್ನು ವಷ್ಟು ಗೌರವಪೂರ್ವಕವಾಗಿ ಸೂಚಿಸುವ ಮಟ್ಟಕ್ಕೇರಿದ್ದು.

ಹೊರ ನೋಟಕ್ಕೆ, ಈ ಕಾದಂಬರಿ, ಆರಂಭದ ಹಂತಗಳಲ್ಲಿ, ಎರಡು ತಲೆಮಾರುಗಳ 'ಮೌಲ್ಯ' ಗಳ ತಿಕ್ಕಾಟದಂತೆ ಕಂಡರೂ, ಅದು ಅಷ್ಟು ಮುಖ್ಯವಾದದ್ದಲ್ಲವೇ ಅಲ್ಲ. ತಂದೆ-ಮಗನ

ಭಿನ್ನಾಭಿಪ್ರಾಯ, ಭಿನ್ನ ಬದುಕುಗಳಿಗೆ ಕಾರಣ ಅವರು ನಂಬಿದ 'ಮೌಲ್ಯ'ಗಳದ್ದಲ್ಲವೇ ಅಲ್ಲ. ಕಾರಣ; ಕೇವಲ ಅಭಿರುಚಿ. ಸಂಸ್ಕೃತ ಮತ್ತು ಸಂಗೀತಗಳ ಅಭಿರುಚಿ ಮಾತ್ರ. ಬದುಕಿನ ಮೂಲಭೂತ ಮೌಲ್ಯ ತಳಪಾಯಗಳಿಂದ ಸುಬ್ಬಣ್ಣ ತಂದೆಗಿಂತ ಭಿನ್ನವಾಗಿರಲೇ ಇಲ್ಲವಾದ್ದರಿಂದ ಮೌಲ್ಯ ತಿಕ್ಕಾಟದ ಪ್ರಶ್ನೆ ಇಲ್ಲಿ ಉದ್ಭವಿಸುವುದೇ ಇಲ್ಲ.

ತಂದೆಯಿಂದ ದೂರವಾಗುವದಕ್ಕೂ, ಬದುಕಿನಲ್ಲಿ, ಸುಬ್ಬಣ್ಣ ಪಡೆಯುವ ಪಕ್ವತೆಗೂ ಅರ್ಥಾರ್ಥ ಸಂಬಂಧವೇ ಇಲ್ಲವಾದ್ದರಿಂದ, ಇದಕ್ಕೆ ಉತ್ತರವನ್ನು ನಾವು ಬೇರೆ ಗಡಿಗಳಲ್ಲಿಯೇ ಹುಡುಕಬೇಕಾಗಿದೆ.

ಉತ್ತರವಿಷ್ಟೆ, ತನ್ನ ಬದುಕಿನ ನಿಸ್ಪೃಹತೆಯಿಂದಾಗಿ, ನಿಷ್ಠೆಯಿಂದ, ಹೋರಾಟದಿಂದಾಗಿ, ನಂಬಿಕೆಗಂಟುವ ಹಠದಿಂದಾಗಿ, ದೃಢತೆಯಿಂದಾಗಿ, ಪ್ರಾಮಾಣಿಕತೆಯಿಂದಾಗಿ, ಎಲ್ಲಕ್ಕೂ ಮುಖ್ಯವಾಗಿ; ಭೌತಿಕ ಆಶಯಗಳ ತೀರ ಕೆಳಮಟ್ಟಗಳ ಆಶಯುಗಳಲ್ಲೂ (ಮಗನಿಗೆ ಮೊಸರು) ಇನ್ನೊಬ್ಬರಿಗಾಗಿಯೇ ದುಡಿದ ನಿರ್ವ್ಯಾಜತೆಯಿಂದಾಗಿಯೇ, ತನ್ನನ್ನು ಮತ್ತೆ ಮತ್ತೆ ಕಚ್ಚುತ್ತಿದ್ದ ಸಾಮಾನ್ಯಗಳ ಪಕ್ಕದಲ್ಲೇ, ಸುಬ್ಬಣ್ಣ, ಅಸಾಮಾನ್ಯತ್ವ ಪಡೆಯುತ್ತ ಹೋದ ಎನ್ನುವದೇ ಸರಳ ಉತ್ತರ.

ಇಂಥ ಒಂದು ಅಸಾಮಾನ್ಯ ಅಂತಃಸತ್ವವನ್ನು ಒಂದು ಸಾಮಾನ್ಯ ನಿರ್ವಹಣೆ ಎಂಬಂತೆ ಎಂಬಂತೆ ಚಿತ್ರಿಸಿದ ಸರಳ ಶ್ರೇಷ್ಠತೆಯೇ 'ಸುಬ್ಬಣ್ಣ'ದ ಘನ ಸಾಧನೆಯಾಗಿದೆ. ❁

## ಶೇಕ್ಸ್‌ಪಿಯರನ ಪ್ರೇಮಕಾವ್ಯ

ಗ್ಯಾರಿ ಟೇಲರ್ ಎಂಬ ೩೭ ವರ್ಷದ ಅಮೇರಿಕದ ವಿದ್ವಾಂಸನೊಬ್ಬ ಒಂದು ಪುಸ್ತಕಾಲಯದಲ್ಲಿ ಸಂಶೋಧನೆ ನಡೆಸುತ್ತಿರುವಾಗ ೯೦ ಪಂಕ್ತಿಗಳ "ಪ್ರೇಮಕಾವ್ಯ"ವೊಂದು ಸಿಕ್ಕಿದೆ. ಇದನ್ನು ಶೇಕ್ಸ್‌ಪಿಯರ್ ಬರೆದಿದ್ದಾನೆಂದು ಈತನ ತರ್ಕ. ಈತ ಶೇಕ್ಸ್‌ಪಿಯರನ ಕೃತಿಗಳ ಸಂಶೋಧಕ.

ಮೊದಲ ಪಂಕ್ತಿಯ ಪದಗಳು ಈ ಕೆಳಕಂಡಂತಿವೆ.

"Shall I die? shall I fly lovers baits and deceits.
Sorrow breeding shall I feud? shall I send
Shall I shew and not rue my proceeding?"

೨೩೦ ವರ್ಷಗಳಿಂದ ಇದು ಗುಪ್ತವಾಗಿ ಬಿದ್ದಿತ್ತೆಂದರೆ ಆಶ್ಚರ್ಯ ಎನ್ನುತ್ತಾನೆ ಈತ. ಈ ಕಾವ್ಯವನ್ನು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಬೋಡ್ ಲೈಯನ್ ಪುಸ್ತಕಾಲಯದಲ್ಲಿ ಇವನು ಕಂಡ. ಇದು ಲೈಬ್ರರಿಯಲ್ಲಿ ೧೭೫೬ ರಿಂದ ಇದೆ.

ಸ್ಟಾನ್ ಲೇವೆಲ್ಸ್ ಶೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಪರಿಣಿತ. ಈತನು ಈ ಕಾವ್ಯವನ್ನು ಶೇಕ್ಸ್‌ಪಿಯರನು ಬರೆದಂತಿದೆ ಎಂದು ಒಪ್ಪಿಕೊಂಡಿದ್ದಾನೆ. ನಾವು ಈ ಕಾವ್ಯವನ್ನು ಚೆನ್ನಾಗಿ ಒರೆ ಹಚ್ಚಿ ನಂತರ ಈ ನಿಶ್ಚಯಕ್ಕೆ ಬಂದಿದ್ದೇವೆ ಎನ್ನುತ್ತಾನೆ ಟೇಲರ್. ಈ ಕಾವ್ಯ ಸುಮಾರು ೧೫೯೩–೯೫ ಬರೆಯಲ್ಪಟ್ಟು, "ಮಿಡ್ ಸಮರ್ ನೈಟ್ ಡ್ರೀಂ" ಮತ್ತು "ರೋಮಿಯೋ ಜ್ಯೂಲಿಯಟ್" ಕಾಲಕ್ಕೆ ಸೇರಿದ್ದೆಂದು ನಿಶ್ಚಯಿಸಿದ್ದಾರೆ.

—ಟೇಕಲ್ ಗೋಪಾಲಕೃಷ್ಣ

# ಉಯ್ಯಾಲೆ

ಮೂಲ : ಎಸ್. ಎನ್. ಲಹಾ
ಅನುವಾದ : ಕರುಣಾಕರ ಕೋವರಕೊಲ್ಲಿ

ಉಯ್ಯಾಲೆಯಲ್ಲಿ ತೂಗಲು ಯಾರು ತಾನೆ ಸಂತೋಷಪಡಲಾರರು ? ಅದಲ್ಲದೆ ಮಕ್ಕಳಲ್ಲಿ, ಯೌವನದಲ್ಲಿ ಇದೊಂದು ಮರೆಯಲಾರದ ಆಟ. ನಮ್ಮ ಹಳ್ಳಿಯ ಕಡೆ ಹೋದರೆ ಹೆಣ್ಣು ಮಕ್ಕಳು ಪ್ರತಿಯೊಬ್ಬರು ಸಂತೋಷದಿಂದ ಕೇಕೆ ಹಾಕುತ್ತಾ ಆಡುವ ಆಟ ಉಯ್ಯಾಲೆ. ಕೆಲವೊಮ್ಮೆ ಉಯ್ಯಾಲೆಯಲ್ಲಿ ಕುಳಿತುಕೊಂಡು ತೂಗಲು ಪ್ರಾರಂಭಿಸಿದರೆ ರಭಸ ಇನ್ನೂ ಹೆಚ್ಚಾಗಿರಬೇಕೆನಿಸುತ್ತದೆ. ದೂರ ದೂರ ಗಾಳಿಯಲ್ಲಿ ತೇಲಿದಂತೆ ಮುಂದೆ ಮುಂದೆ ಹೋಗಲು ಬಯಸುತ್ತಾರೆ. ಕ್ರಮೇಣ ವೇಗ ಅಧಿಕವಾದಂತೆ ಕೆಲವರು ಹೆದರಿಕೊಳ್ಳುವರು.

ಉಯ್ಯಾಲೆ ಎಂದರೆ ನನಗೇಕೋ ನೆನೆಸಲಾರದ ಭೀತಿ. ಇದರ ನೆರಳು ಒಮ್ಮೊಮ್ಮೆ ನನ್ನ ಅಸ್ತಿತ್ವವನ್ನು ಹಿಂಬಾಲಿಸುವಂತೆ ಅನಿಸುತ್ತದೆ. ಕೆಲವೊಮ್ಮೆ ನಾನಿನ್ನೂ ಬದುಕಿದ್ದೇನೆಯೇ ಎಂಬುದು ಮರೆತುಬಿಡುವುದೂ ಇದೆ. ಮನೆಯ ಅಂಗಳದ ತುದಿಯಿಂದ ನಿಂತು ದೂರದ ಪಾರ್ಕಿನೆಡೆಗೆ ಕಣ್ಣು ಹಾಯಿಸಿದರೆ ಅಲ್ಲಿ ಒಂದು ಉಯ್ಯಾಲೆ ತೂಗಾಡುವುದು. ಅದನ್ನು ನೋಡದಿರದಂತೆ ಕಣ್ಣುಗಳನ್ನು ಎಷ್ಟು ನಿಯಂತ್ರಿಸಿ, ಮತ್ತೆ ಇನ್ನೊಂದೆಡೆಗೆ ದೃಷ್ಟಿ ಹಾಯಿಸುವೆ. ಪಾರ್ಕಿನೆಡೆಗೆ ನೋಡಿದರೂ ಆ ಉಯ್ಯಾಲೆಯನ್ನು ನೋಡಬಾರದೆಂದು ಮನಸ್ಸಿನಲ್ಲಿ ದೃಢಪಡಿಸಿದರೂ ಕಣ್ಣುಗಳು ಕೆಲವೊಮ್ಮೆ ಯಾಂತ್ರಿಕವಾಗಿ ಅತ್ತ ಚಲಿಸುವುವು.

*

ಇಪ್ಪತ್ತೊಂದು ವರ್ಷಗಳ ಹಿಂದೆ ಸಂಭವಿಸಿದ ಒಂದು ದುರಂತದ ಘಟನೆ ನನ್ನ ಬಾಳಿನಲ್ಲಿ ಬಹು ಮುಖ್ಯವಾದ ಬದಲಾವಣೆಯನ್ನು ತಂದಿತ್ತು. ನಾನು ಈ ಮನೆಗೆ ಹೊಸ ವಧುವಾಗಿ ಬಂದಿದ್ದಾಗ ನನ್ನನ್ನು ಮನೆಯಲ್ಲಿರುವವರೆಲ್ಲಾ ಬಹಳ ಆದರದಿಂದ ಸ್ವಾಗತಿಸಿದರು. ಆದರೆ ವಧುವಿನ ಸ್ವಾಗತ ಮಾತ್ರ ನನ್ನನ್ನು ಪುಳಕಿತವಾಗುವಂತೆ ಮಾಡಿತ್ತು.

ಆಕೆ ತಾರುಣ್ಯ ತುಂಬಿದ ಸುಂದರ ಸ್ತ್ರೀ. ಅತ್ತೆಯೊಡನೆ ಕೇಳಿದೆ,

"ಅತ್ತೆ, ಈ ಮಧು ಯಾರು?"

ಆಕೆಯ ಬಗ್ಗೆ ನಾನು ಏನನ್ನೂ ತಿಳಿದಿರಲಿಲ್ಲ. ನನ್ನ ಅತ್ತೆ ಎಂದರೆ ಬಹಳ ಗಡಸು ಮನಸ್ಸಿನ

ಹೆಣ್ಣಾಗಿದ್ದಳು. ಆದರೂ ಅವರು ಮುಗುಳ್ನ ಗುತ್ತಾ ಮಧುವಿನ ಬಗ್ಗೆ ಬಹಳ ತಾಳ್ಮೆಯಿಂದ ಹೇಳಿದರು,



"ಯಾಕಮ್ಮ? ಅವಳು ನಿನಗೆ ನಾದಿನಿ ಆಗ ಬೇಕು. ಅವಳು ನಿನ್ನ ಗಂಡನಿಗೆ ತಂಗಿಯಂತೆ."

ಕ್ರಮೇಣ ಮಧುವಿನ ಬಗ್ಗೆ ನಾನು ತುಂಬಾ ತಿಳಿದುಕೊಂಡೆ—ಆಕೆ ಒಂದು ತರಹದ ಸ್ತ್ರೀ ಎಂದು. ಆಕೆ ಪಕ್ಕದ ಮನೆಯ ಶರ್ಮಾಜಿಯ ಮಗಳು. ಆಕೆಯೂ ನನ್ನವರೂ ಬಹಳ ಸಣ್ಣ ಪ್ರಾಯದಿಂದಲೇ ಪರಸ್ಪರ ಆಡಿವಾಡಿ ಪ್ರೀತಿಯಿಂದ ಅಣ್ಣ ತಂಗಿಯರಂತೆ ಬೆಳೆದವರು ಎಂದು. ಆದರೆ ಅವರ ಪ್ರೀತಿಗೆ ವರ್ಷಗಳು ತುಂಬಿದ್ದವು.

ಮಧು ಬಹಳ ಮುದ್ದು ಮುದ್ದಾಗಿ ಚೆಲುವೆಯಾಗಿ ಬೆಳೆದಿದ್ದಳು. ಆದರೂ ಯಾಕೋ ನನಗೆ ಆಕೆ ಎಂದರೆ ಒಂದು ತೆರನಾದ ತಿರ ಸ್ಕಾರ, ಅಸೂಯೆ. ಈ 'ಸೋದರಿ ಭಾವನೆ' ಎಂಬುದೆಲ್ಲಾ ಹಳೆಯ ಗೊಡ್ಡು ಪುರಾಣ. ಅದಕ್ಕೆ ನಾನು ಹುಲ್ಲು ಹಾಕುತ್ತಿರಲಿಲ್ಲ.

ಸದಾ ನನ್ನ ಮನೆಯವರ ಮೇಲಿನ ನನ್ನ ದೃಷ್ಟಿ ಸ್ವಲ್ಪ ಭಿನ್ನವಾಗಿಯೇ ಇತ್ತು. ಏಕೋ ನನ್ನ ಮನಸ್ಸು ಈ ವಿಷಯದಲ್ಲಿ ಬೇರೆ ಮಾರ್ಗ ವನ್ನೇ ಹುಡುಕತೊಡಗಿತು. ಅದೂ ಅಲ್ಲದೆ ಇವ ರಿಬ್ಬರ ಭೂತಕಾಲದ ಕೆಲವು ವಿಚಾರಗಳನ್ನು ತಿಳಿದಂದಿನಿಂದ ಅದು ನನ್ನ ಮನಸ್ಸಿನಲ್ಲಿ ತೀಕ್ಷ್ಣ ವಾದ ಸಂಶಯದ ವಿಷ ಬೀಜವನ್ನು ಬಿತ್ತಿತು.

ಒಂದು ದಿನ ನಾನು ಅನಿವಾರ್ಯವಾಗಿ ಒಂದು ತೀರ್ಮಾನಕ್ಕೆ ಬರಬೇಕಾಯಿತು.

ಮಧುವಿಗೆ ಉಯ್ಯಾಲೆ ತೂಗುವುದೆಂದರೆ ಪ್ರಾಣ. ಒಮ್ಮೆ ಅದರಲ್ಲಿ ಕೂತು ಆಡಲು ಸುರು ಮಾಡಿದರೆ ಅವಳು ದಣಿಯುವ ವರೆಗೆ ಕೆಳಗೆ ಇಳಿಯುತ್ತಿರಲಿಲ್ಲ. ಬಹುಶಃ ನಮ್ಮ ಮನೆಯಲ್ಲಿದ್ದ ಉಯ್ಯಾಲೆಯನ್ನು ಅವಳಿಗಾಗಿ ಕಟ್ಟಿರಬೇಕು. ನನ್ನವರು ಮಧು-ವಿನೊಂದಿಗೆ ಅದರಲ್ಲಿ ತುಂಬಾ ಆಡಿರಬೇಕು. ಉಯ್ಯಾಲೆಯ ಎದುರಿಗಿದ್ದ ಮನೆಯ ಛಾವಣಿ ಯಲ್ಲಿ ಒಂದು ಹರಿತವಾದ ತಗಡು ಇತ್ತು. ಒಂದು ವೇಳೆ ಉಯ್ಯಾಲೆ ಎಲ್ಲಾದರೂ ಮುರಿ ದರೆ, ಅದರಲ್ಲಿದ್ದವರು ಆ ತಗಡಿಗೆ ಬಡಿದು ಬೀಳುವುದರಲ್ಲಿ ಸಂಶಯವಿಲ್ಲ.

ತಟ್ಟನೆ ಒಂದು ಉಪಾಯ ಹೊಳೆಯಿತು. ಒಂದು ವೇಳೆ ಮಧು ರಭಸವಾಗಿ ಆ ಉಯ್ಯಾಲೆಯಿಂದ ಹರಿತವಾದ ಆ ತಗಡಿನ ಮೇಲೆ ಬಿದ್ದರೆ...? ಅವಳ ಕಥೆ ಮುಗಿದಂತೆ! ಆಗ ಇದರಲ್ಲಿ ಯಾರಿಗೂ ಯಾರ ಮೇಲೆ ಸಂದೇಹ ಪಡುವ ಪ್ರಮೇಯವೇ ಬಾರದು. ಆಗಲಾದರೂ ನನ್ನ ಬಾಳಿನ ದೊಡ್ಡ ಶತ್ರು ನಾಶವಾಗುವುದರಲ್ಲಿ ಸಂದೇಹವಿಲ್ಲ.

ಅಂದು ಮಧು ತುಂಬಾ ಸಂಭ್ರಮದಿಂದ ಇದ್ದಂತೆ ಅನಿಸಿತು. ಬಹಳ ಮುದ್ದಾಗಿ ನಕ್ಕಳು. ಏನೇನೋ ತಮಾಷೆಯಾಗಿ ಮಾತನಾಡಿದಳು. ಮತ್ತೆ ಮತ್ತೆ ಕಿಲಕಿಲ ನಕ್ಕಳು. ಮುತ್ತಿನಂತೆ ಅವಳ ದಂತ ಪಂಕ್ತಿಗಳು. ನಗು ಇಂದಿಗೂ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತಿದೆ. ಅವಳು ಒಮ್ಮೆ ನನ್ನನ್ನು ಆನಂದದಿಂದ ನೋಡಿದಳು.

"ಬನ್ನಿ ಅತ್ತಿಗೆ. ನಾವಿಬ್ಬರೂ ತೂಗುವಾ ಉಯ್ಯಾಲೆಯಲ್ಲಿ." ನನಗೆ ದಂಗುಬಡಿದಂತಾಯಿತು. ಬಹುಶಃ ನನ್ನ ಉಪಾಯವೇನಾದರೂ ಆಕೆಗೆ ಗೊತ್ತಾಗಿರಬೇಕೆ? ಇಲ್ಲ. ಖಂಡಿತ ಇಲ್ಲ. ಇದು ಅವಳಿಗೆ ಯಾವ ರೀತಿಯಲ್ಲೂ ಸ್ಪಷ್ಟವಾಗ



ಲಾರದು. ನಾನು ಒಲ್ಲದ ಮನಸ್ಸಿನಿಂದ, "ಬೇಡ" ಎಂದು ಉಯ್ಯಾಲೆಯ ಸಮೀಪದಿಂದ ಕಾಲು ಕಿತ್ತೆ. ಅಷ್ಟರಲ್ಲಿ ಆಕೆ ಹೇಳಿದಳು.

"ಇಲ್ಲ ಅತ್ತಿಗೆ, ನಾನು ತಪ್ಪು ಮಾಡಿದೆ. ನಾನು ಈ ಪ್ರಶ್ನೆಯನ್ನ ನಿಮ್ಮ ಹತ್ತಿರ ಕೇಳ ಬಾರದಿತ್ತು. ತುಂಬು ಗರ್ಭಿಣಿ ಆಗಿರುವಾಗ ಯಾರಾದರೂ ಉಯ್ಯಾಲೆಯಲ್ಲಿ ತೂಗುತ್ತಾರೆಯೇ? ಪಾಪ! ಬೇಡಪ್ಪ ನಿಮಗೇನಾದರೂ ಆದರೆ ಆ ಪಾಪವನ್ನ ನಾನು ಅನುಭವಿಸ-ಬೇಕಾಗುತ್ತೆ..."

ಆಕೆಯ ಆ ಶಬ್ದಗಳನ್ನು ಆಲಿಸಿದ ನನ್ನ ನರಗಳಲ್ಲಿನ ರಕ್ತ ಸಂಚಾರ ನಿಂತಂತೆನಿಸಿತು. ಪಾಪ! ನಾನು ಮಧುವಿಗೆ ದೊಡ್ಡ ತಪ್ಪು ಮಾಡುತ್ತಿದ್ದೇನೆ. ಸಹಜವಾಗಿಯೂ ಮಧುವಿಗೆ ನನ್ನವರ ಮೇಲಿರುವದು ಭ್ರಾತೃಪ್ರೇಮ. ಮತ್ತೆ ಯಾವ ರೀತಿಯಲ್ಲೂ ಅಲ್ಲ. 'ಉಯ್ಯಾಲೆಯಲ್ಲಿ ತೂಗಬೇಡ' ಎಂದು ಹೇಳಬೇಕೆಂದೆನಿಸಿತು. ಆದರೆ ಸಮಯ ಮಿಂಚಿ ಹೋಗಿತ್ತು.




"ಯೋಚನೆ ಮಾಡುವದೇನು ಬಂತು? ನಿಮ್ಮಂತಹ ಅನೇಕರು ಮ್ಯಾಚಿಂಗಿಗಾಗಿ ಇದೇ ಅಂಗಡಿಗೆ ಬರೋದು."

ಮಧು ಉಯ್ಯಾಲೆಯಲ್ಲಿ ಅವ್ಯಾಹತವಾಗಿ ತೂಗತೊಡಗಿದಳು.

ಮೇಲೆ...

ಮೇಲೆ...

ಮತ್ತೂ ಮೇಲೆ...

ಬಹಳ ಎತ್ತರದವರೆಗೆ...

ಆ ವೇಗವನ್ನು ಗಮನಿಸಿದ ನಾನು ಅಲ್ಲಿ ನಿಲ್ಲಲಿಲ್ಲ. ದೂರ ಹೋದೆ. ಆ ದೃಶ್ಯವನ್ನು ನೋಡಬಾರದೆಂದು. ಕ್ಷಣ ಕಳೆದೊಡನೆ ಕೊಂಡಿ ತಪ್ಪಿತು.

ಹರಿತವಾದ ತಗಡು ಅವಳ ಕೆಳ ಹೊಟ್ಟೆಯನ್ನು ಸೀಳಿತು.

ಮಧುವಿನ ಕತೆ ಮುಗಿಯಿತು.

ವಿಷಯ ತಿಳಿದ ನನ್ನವರು ತತ್ತರಿಸಿದರು. ಮಧುವನ್ನು ಕೊಂದರೆ ನನ್ನವರಿಗೆ ನಾನು ಇನ್ನೂ ಆಪ್ತಳಾಗಬಹುದೆಂಬ ಹುಚ್ಚು ಕಲ್ಪನೆ ನನ್ನಲ್ಲಿತ್ತು. ಆದರೆ ಅದು ತಪ್ಪಾಗಿತ್ತು. ಮಧುವಿನ ಮರಣ ಅವರ ಮೇಲೆ ತುಂಬಾ ಪ್ರಭಾವವನ್ನು ಉಂಟು ಮಾಡಿತು. ಮತ್ತೆ ಅವರು ನನ್ನೊಡನೆ ಎಷ್ಟು ಬೇಕು ಅಷ್ಟೇ ಎಂಬಂತೆ ಇದ್ದರು. ಇದರಿಂದ ಏನೊಂದೂ ತೋಚದಂತಾಯಿತು ನನಗೆ. ಆದರೆ ದಿನ ಕಳೆದಂತೆ ನನ್ನವರ ಮನಸ್ಸಿನಲ್ಲಿ ಒಂದು ತೆರನಾದ ಸಂಶಯ ಬೇರು ಬಿಟ್ಟಿತು. ಮಧುವಿನ ಸಾವಿಗೆ ನನ್ನ ಒಳ ಸಂಚು ಏನೋ ಇದೆ ಎಂದು. ಆದರೂ ಅವರು ಇದರ ಬಗ್ಗೆ ಎಷ್ಟೋ ಬಾರಿ ಹೇಳುತ್ತಿದ್ದರು, 'ಸಮಯ ಬಂದಾಗ ಎಲ್ಲವನ್ನು ಅನುಭವಿಸಬೇಕಾಗುತ್ತದೆ' ಎಂದು.

ಒಂದು ವಾರ ಕಳೆದೊಡನೆ ಒಂದು ಮುದ್ದು ಹೆಣ್ಣು ಮಗುವಿನ ತಾಯಿ ಆದೆ. ಎಲ್ಲವೂ ಕ್ಷೇಮವಾಗಿ ಸಾಗಬಹುದೆಂದು ಅಂದುಕೊಂಡೆ. ಆದರೆ ಮನಸ್ಸು ಏಕೊ ಸ್ಥಿಮಿತದಲ್ಲಿರಲಿಲ್ಲ. ನಾನು ಮಾಡಿದ ಮಹಾ ದೊಡ್ಡ ಅಪರಾಧ ದಿಂದಾಗಿ. ಸಮಯ ಬರುವಾಗ ಅದರ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾಗುವುದು ಅನಿವಾರ್ಯವಾಗಿತ್ತು.

ಮಾಡಿದ ಅಪರಾಧವನ್ನು ಮರೆತು ಬಿಡಬೇಕಾಗಿದ್ದರೆ, ಅದು ನನ್ನ ಮುದ್ದು ಮೋನಾಳ ನಡೆ

ಸುಡಿಯಿಂದ ಮಾತ್ರ ಸಾಧ್ಯ ಎಂದುಕೊಂಡೆ.

ದಿನಗಳು ಬಲಿತಂತೆ ಮೋನ ಮುದ್ದು ಮುದ್ದಾಗಿ ಬೆಳೆದಳು.

ಅವಳಿಗೆ ಆ ಸಣ್ಣ ಪ್ರಾಯದಲ್ಲೇ ಉಯ್ಯಾಲೆ ಎಂದರೆ ಪಂಚಪ್ರಾಣವಾಗಿತ್ತು. ದಿನ ಕಳೆದಂತೆ ತುಂಬಾ ರಭಸವಾಗಿ ತೂಗತೊಡಗಿದಳು ನನ್ನ ಕಣ್ಣಿನ ಎದುರಿಗೆ. ಇದರ ಬಗ್ಗೆ ಎಷ್ಟು ಅವಳಿಗೆ ಗದರಿಸಿದರೂ, ಬಡಿದರೂ ಇದರ ವ್ಯಾಮೋಹ ವನ್ನು ಬಿಡಲಿಲ್ಲ. ಅವಳ ನಗು ನನ್ನಲ್ಲಿ ಮಧುವಿನ ನಗುವನ್ನು ನೆನಪು ಮೂಡಿಸುವಂತಿತ್ತು. ಒಂದಿಷ್ಟೂ ಸಂಶಯವಿರಲಿಲ್ಲ.

ಅವಳು ಪ್ರತಿಯೊಂದರಲ್ಲೂ ಮಧುವಿನಂತೆ ಆಗತೊಡಗಿದಳು. ಒಂದು ರಾತ್ರಿ ರಭಸವಾಗಿ ಮಳೆ ಬೀಳುತ್ತಿತ್ತು. ಮೋನ ಮತ್ತು ನಾನು ಮಲಗಿದ್ದೆವು. ಮಳೆ ಒಮ್ಮೆಲೆ ನಿಂತಂತೆ ಅನಿಸಿತು ನನಗೆ. ಯಾರೋ ಹೊರಗಡೆಯಿಂದ ಕರೆದಂತೆ ಭಾಸವಾಯಿತು. ಬಾಗಿಲು ತೆರೆದು ಹೊರಗಡೆ ಹೋದೆ. ಹೊರಗೆ ಯಾರೂ ಇರ ಲಿಲ್ಲ. ಒಂದು ವಿಚಿತ್ರ! ಉಯ್ಯಾಲೆ ಮಾತ್ರ ರಭಸವಾಗಿ ತೂಗುತ್ತಿತ್ತು. ಯಾರೂ ಇರಲಿಲ್ಲ ಉಯ್ಯಾಲೆಯಲ್ಲಿ, ಆದರೆ ಯಾರೋ ಕುಳಿತು ತೂಗುತ್ತಿದ್ದಂತೆ ಅತ್ತಿಂದಿತ್ತ ಇತ್ತಿಂದತ್ತ ಚಲಿಸು ತ್ತಿತ್ತು.

ನಾನು ಮನೆಯ ಕಡೆ ಮುಖ ತಿರುಗಿಸಿದೆ. ಕ್ಷಣದಲ್ಲಿ ನಕ್ಕಂತೆ ಆಯಿತು. ಅದೇ ನಗು ಮಧುವಿನದು, ಅದೇ ಕಿಲಕಿಲ ನಗು. ಅದರೊಡನೆ ಹೃದಯ ಸ್ಪಂದಿಸುವ ಧ್ವನಿ ನನ್ನನ್ನು ಕೇಳಿತು.

"ಹೇಗಿದ್ದೀರಿ ಅತ್ತಿಗೆ?"

ನನ್ನ ಶರೀರ ಶೀತಲವಾಗತೊಡಗಿತು.

ಮತ್ತೆ—

"ನೀವು ಸತ್ಯವನ್ನು ಎದುರಿಸಬೇಕು... ನೀವು ಹಲವು ವಿಷಯಗಳಿಗೆ ಸಾಕ್ಷಿಯಾಗಬೇಕಾ ಗುತ್ತೆ..." ಎಂದು ಮುಂದುವರಿಸಿದಳು. ನಾನು 'ಮಧು' ಎಂದು ಕೂಗಿದೆ. ಅವಳಲ್ಲಿ ಕ್ಷಮೆ ಕೇಳಿದೆ.

ಅಷ್ಟರಲ್ಲಿ ನನ್ನ ಮೋನಾಳ ದನಿ ಕೇಳಿತು.

"ಮಳೆಯಲ್ಲಿ ಏನಮ್ಮಾ ಮಾಡ್ತಿಯಾ?"

ಮತ್ತೆ ನನಗೆ ನೆನಪಾದದ್ದು ನಾನು ಮಳೆ ಯಲ್ಲಿ ನಿಂತಿದ್ದೇನೆಂದು. ಉಯ್ಯಾಲೆ ಮೊದಲಿ ನಂತೆ ತೂಗುತ್ತಿತ್ತು.

ಇದು ಹೀಗೆ ಪ್ರತಿದಿನ ಸಂಭವಿಸತೊಡಗಿತು. ಮಧು ಬಂದು ಪೀಡಿಸುತ್ತಿರುವುದು. ಇದರಿಂದ ನನಗೆ ಖಂಡಿತಾ ಮುಕ್ತಿಯಿಲ್ಲ. ಮಧು ಸತ್ತಂತೆ ನಾನು ಸಾಯುವುದೊಂದೇ ಲೇಸು. ಅವಳಿಗೆ ಮಾಡಿದಂತೆ ಉಯ್ಯಾಲೆಯ ಕೊಂಡಿಯನ್ನು ಸಡಿಸಿಲಿಸಿ ಮುತ್ತೈದೆಯಾಗಿ ಸಾಯಬೇಕು. ಈ ತೀರ್ಮಾನಕ್ಕೆ ಅಡಿ ಇಟ್ಟಿದ್ದೆ.

ಚೆನ್ನಾಗಿ ಉಡುಪುಧರಿಸಿಕೊಂಡೆ. ಬಾಳಿನ ಅಂತಿಮ ದಿನ ಎಂದು ಭಾವಿಸಿ ಹಜಾರದಿಂದ ಕಾಲು ತೆಗೆದು ಅಂಗಳಕ್ಕೆ ಅಡಿ ಇಟ್ಟೆ.

ಉಯ್ಯಾಲೆಯ ಬಳಿಗೆ ದೃಷ್ಟಿಸಿದೆ.

ಒಂದು ಭೀಕರವಾದ ಘಟನೆ. ಕಣ್ಣುಗಳನ್ನು ನಂಬಲಾಗದಂತಹ ಒಂದು ವಿಷನಿಮಿಷದ ವಾತಾವರಣ.

ಉಯ್ಯಾಲೆಯು ಮುರಿದು ಬಿದ್ದಿತ್ತು. ಒಂದ ಮುದ್ದು ಮಗುವಿನ ಉಸಿರಿಲ್ಲದ ಶರೀರ ನೆತ್ತರಿ ನಲ್ಲಿ ತೊಯ್ದು ಅಸ್ತವ್ಯಸ್ತಗೊಂಡು ನನ್ನ ಕಣ್ಣೆದುರಿಗೆ ಮಲಗಿತ್ತು. ಎಳೆಯ ಶರೀರ ಹರಿತವಾದ ತಗಡಿಗೆ ತಾಗಿ, ತೀವ್ರವಾಗಿ ಸೀಳಿ ಗಾಯವಾಗಿತ್ತು ನೆರೆಹೊರೆಯವರೆಲ್ಲ ನನ್ನ ಚೀರಾಟಕ್ಕೆ ಸುತ್ತುಗಟ್ಟಿದರು.

"ಪಾಪದ ಮೋನ ಮಧು ಸತ್ತಂತೆ ಸತ್ತಳು."

ಅಕ್ಕ-ಪಕ್ಕದವರು ಆಡಿಕೊಂಡರು. ✡



ಬಿಳಿ ಇಲಿಗಳ ಮೇಲೆ ಸಾಕಷ್ಟು ಪ್ರಯೋಗ ಮಾಡಿದ ಯಶಸ್ವಿ ವಿಜ್ಞಾನಿಯೊಬ್ಬ ಆಗಾಗ ಆಶ್ಚರ್ಯ ಪಡುತ್ತಿರುತ್ತಾನೆ—"ಹೀಗೆಯೇ ನಮ್ಮನ್ನು ಕೂಡ ನಮಗಿಂತ ಜಾಣರಾದವರು ಪ್ರಯೋಗಕ್ಕೆ ಬಳಸುತ್ತಿರಬಹುದೆ?" ಎಂದು. —ಬಿಲ್ ವಾನ್

# ಹಂದಿಗೂ ಕಾಲ ಬಂತು

**ಅನಂತ ನಾಡಿಗ**

ನಿಂದಕರಿರಬೇಕಿರಬೇಕು ಹಂದಿ ಇದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ ಅಂದಂದು ಮಾಡಿದ ಪಾಪವೆಂಬ ಮಲ ತಿಂದು ಹೋಗುವರಯ್ಯ ನಿಂದಕರು," ಎಂದು ದಾಸವರೇಣ್ಯ ಪುರಂದರ ದಾಸರ ಪುಣ್ಯನಾಮಕ್ಕೆ ಅಂದು ಸಿಲುಕಿದ ಈ ಹಂದಿಗಳ ಸಂತತಿ ಈ ಆಧುನಿಕ ಯುಗದಲ್ಲಿ ಒಂದು ಲಾಭದಾಯಕ ಉದ್ಯಮವಾಗಿ ಪರಿಣಮಿಸುತ್ತಿದೆ. ಪಶು ಸಂಪತ್ತು ಮಾನವನಿಗೆ ನಿಸರ್ಗ ನೀಡಿರುವ ಕೊಡುಗೆ. ಮಾನವನ ಸರ್ವಾಂಗೀಣ ಅಭಿವೃದ್ಧಿಗೆ ಪಶುಸಂಪತ್ತು ಒಂದು ರೀತಿಯ ಪ್ರೇರಕ ಶಕ್ತಿ.

ಪ್ರಸ್ತುತ, ಪಶುಸಂಪತ್ತಿನಲ್ಲಿ ಹಂದಿಗಳ ಸಾಕಾಣಿಕೆಯು, ದನ ಸಾಕಾಣಿಕೆ, ಕುರಿಕೋಣಗಳ ಸಾಕಾಣಿಕೆಯಂತೆ ಇಂದು ಜನಪ್ರಿಯವಾಗುತ್ತಿರುವ ಒಂದು ಪ್ರಮುಖ ಉದ್ಯಮ. ಮನುಷ್ಯ ಸಾಕಬಹುದಾದ ಎಮ್ಮೆ, ದನ, ಕುದುರೆ, ಕುರಿ, ಕೋಳಿಗಳಂತೆ ಹಂದಿಗಳೂ ಸಾಕುಪ್ರಾಣಿಗಳು. ಸಂಘಜೀವಿಯಾದ ಹಂದಿಗಳು ನಿರುಪದ್ರವಿ ಪ್ರಾಣಿಗಳು.

ನಿರ್ದಿಷ್ಟವಾದ ಲಕ್ಷಣಗಳುಳ್ಳ ಯಾವ ತಳಿಯೂ ನಮ್ಮ ದೇಶದಲ್ಲಿಲ್ಲ. ನಮ್ಮ ಹಳ್ಳಿಗಳಲ್ಲಿ ಕಾಣುವ ಕಪ್ಪು ಬಿಳಿ ಮಿಶ್ರಿತ ಹಂದಿಗಳು ಮೂಲತಃ ಕಾಡು ಹಂದಿಯ ತಳಿಯದಿರಬೇಕು. ಆದರೆ ನಾಡಹಂದಿಗಳು ಚೂಪಾದ ಮುಖ, ಬಾಗಿ ನಿಂತ ಬೆನ್ನು, ಒರಟಾದ ದಪ್ಪನೆ ಚರ್ಮ, ಉದ್ದವಾದ ಕೂದಲು, ಅಗಲವಾದ ಕಿವಿಗಳ ಲಕ್ಷಣಗಳನ್ನು ಹೊಂದಿರುತ್ತದೆ. ಈ ನಾಡ ಹಂದಿಗಳಲ್ಲಿ ಹೆಣ್ಣು ಹಂದಿಗಳಿಗಿಂತ ಗಂಡು ಬಲಿಷ್ಠವಾಗಿ ಎತ್ತರವಾಗಿ ದಷ್ಟಪುಷ್ಟವಾಗಿ ಬೆಳೆಯುತ್ತದೆ.

ಸಾಧಾರಣವಾಗಿ ಒಂಭತ್ತು ತಿಂಗಳವರೆಗೆ ಗರ್ಭ ಧರಿಸುವ ಹೆಣ್ಣು ಹಂದಿಗಳು ಒಂದೇ ಬಾರಿಗೆ ಹನ್ನೆರಡರಿಂದ ಹದಿನೈದು ಮರಿಗಳನ್ನು ಹಾಕುತ್ತವೆ. ಹುಟ್ಟಿದ ನಾಲ್ಕೇ ವಾರಗಳ ನಂತರ ವೃದ್ಧಿಯಾಗಿ ಬೆಳೆದು ಇಡೀ ಶರೀರದ ಸಮ

ತೋಲನವನ್ನು ಕಾಪಾಡಿಕೊಳ್ಳುವ ಹಂದಿಗಳಲ್ಲಿ ಮಾಂಸಖಂಡಗಳಲ್ಲಿ ಕೊಬ್ಬು ಅತ್ಯದ್ಭುತವಾಗಿ ಬೆಳೆಯುತ್ತಾ ಹೋಗುತ್ತದೆ. ಕೊಬ್ಬು ಕ್ರಮೇಣ ಕಡಿಮೆಯಾಗಿ ಸುತ್ತಲ ವಾತಾವರಣಕ್ಕೆ ಹೊಂದಿಕೊಳ್ಳಲು ಶರೀರದ ಚರ್ಮ ದಪ್ಪವಾಗುತ್ತ ಬೆಳೆಯುತ್ತದೆ. ಹುಟ್ಟುವಾಗ ಹಂದಿಗಳು ಎಷ್ಟು ಮೂಳೆ ಮತ್ತು ತೂಕವನ್ನು ಹೊಂದಿರುತ್ತವೆಯೋ ಹದಿನಾರು ವಾರಗಳ ನಂತರ ಅದರ ಮುವ್ವತ್ತೆರಡರಷ್ಟು ಇಮ್ಮಡಿಯಾಗುತ್ತ, ಮಾಂಸ ಖಂಡಗಳು ಶೇಕಡಾ ೮೨ರಷ್ಟು ಮತ್ತು ಅದಕ್ಕೆ ಹೊಂದಿಕೊಂಡಂತೆ ಕೊಬ್ಬು ಶೇಕಡಾ ೬೨ರಷ್ಟು ಬೆಳೆಯುತ್ತದೆ. ೨೪ ವಾರಗಳ ನಂತರ ಒಂದು ನಿರ್ದಿಷ್ಟ ಹಂತವನ್ನು ತಲಪುವ ನಾಡ ಹಂದಿಗಳು ೮೦ ರಿಂದ ೧೦೦ ಕೇಜಿಯುವರೆಗೆ ಮಾಂಸವನ್ನು ತೂಗುತ್ತವೆ. ನೂರರಿಂದ ನೂರೈವತ್ತು ಕೇಜಿ ಮಾಂಸ ತೂಗುವ ನಾಡಹಂದಿಗಳೂ ಇವೆ.

ಬಿಸಿಲಿಕೆ ಇರಲಿ, ಮಳೆಯೇ ಇರಲಿ, ಚಳಿಗಾಲದಲ್ಲೇ ಆಗಲಿ ವರ್ಷದ ಎಲ್ಲ ಕಾಲಗಳಲ್ಲೂ ಮೈ ಒಗ್ಗಿಸಿಕೊಂಡು ಬೆಳೆಯುವ ನಾಡ ಹಂದಿಗಳಿಗೆ ವಾಸಿಸಲು ಹತ್ತು ಅಡಿ ಉದ್ದ ಎಂಟು ಅಡಿ ಅಗಲ ಇರುವ ರೊಪ್ಪ, ಮುಂದೆ ಮೂರೂವರೆ ಅಡಿ ಎತ್ತರದ ಗೋಡೆಯಿರುವ ಆವರಣವೊಂದು ಇರಬೇಕು. ಏಳು ಅಡಿ ಉದ್ದ ಮತ್ತು ಆರು ಅಡಿ ಅಗಲವಿರುವ ಒಂದು ಸಾಮಾನ್ಯವಾದ ರೊಪ್ಪ ಗಂಡು ಹಂದಿಗಳಿಗೆ ಸಾಕು. ಆದರೆ ಗಂಡು ಹಂದಿಗಳನ್ನು ಅತ್ಯಗತ್ಯವಾಗಿ ಬೇರೆಯಾಗಿಯೇ ಇಡಬೇಕು.

ಶಾಸ್ತ್ರೀಯವಾಗಿ ತಳಿ ಅಭಿವೃದ್ಧಿ ಕ್ರಮಬದ್ಧವಾದ ಆರೈಕೆ ಸಮತೋಲನವಾದ ಸಾಕಷ್ಟು ಆಹಾರ ಕ್ರಮ, ರೋಗರುಜಿನಗಳ ನಿರ್ಮೂಲನ ಇವುಗಳು ಹಂದಿಗಳ ಸಂಗೋಪನೆಯಲ್ಲಿ ಅನುಸರಿಸಬೇಕಾದ ಮೂಲ ಸಾಧನಗಳು. ಆಹಾರದ ವ್ಯವಸ್ಥೆ ಅವುಗಳ ಬೆಳವಣಿಗೆ ಮತ್ತು ಆರೋಗ್ಯಕ್ಕೆ ಪ್ರತಿಕೂಲವಾಗದಂತೆ ಎಚ್ಚರವಹಿಸಿ ಅತ್ಯಂತ ಕಡಿಮೆ ವೆಚ್ಚದಲ್ಲಿ ಅತಿ ಪೌಷ್ಟಿಕವಾದ ಆಹಾರವನ್ನು ನೀಡುವಂತಿರಬೇಕು. ಕುರಿ ಮೇಕೆಯಂಥ ಪ್ರಾಣಿಗಳಿಗೆ ಇರುವುದು ನಾಲ್ಕು ಹೊಟ್ಟೆಗಳಾದರೆ, ಹಂದಿಗಳಿರುವುದು ಒಂದೇ ಜಠರ. ಅತಿ ಗಡುಸಾದ ಆಹಾರ ಇವುಗಳಿಗೆ ಒಗ್ಗುವದಿಲ್ಲ.

ಹಂದಿಗಳು ಗಿಡಗಳ ಬೇರು ಹುಲ್ಲು ಗಡ್ಡೆ ಇವುಗಳನ್ನು ಭೂಮಿಯಿಂದ ಬಗೆದು ತಿನ್ನುತ್ತವೆ. ಪೂರ್ಣ ಪ್ರಮಾಣದಲ್ಲಿ ಬೆಳೆದ ಹಂದಿಯೊಂದು ದಿನವೊಂದಕ್ಕೆ ೧೫ ರಿಂದ ೨೦ ಪೌಂಡು ಹುಲ್ಲು ತಿನ್ನುತ್ತದೆ. ಆದರೆ ಹಂದಿಗಳಿಗೆ ಪುಷ್ಟಿದಾಯಕವಾದ ಆಹಾರವೆಂದರೆ ಅಕ್ಕಿಯ ತೌಡು, ಕಡಲೆಕಾಯಿ ಹಿಂಡಿ, ಮುಸುಕಿನ ಜೋಳ, ಮೂಳೆಯ ಮತ್ತು ಮೀನಿನ ಪುಡಿಗಳಿಂದ ಕೂಡಿದ ಆಹಾರ ಮಿಶ್ರಣವಾಗಿರಬೇಕು. ಹೋಟೆಲ್ ಮತ್ತು ಬ್ರೆಡ್ ಅಂಗಡಿಗಳಿಂದ ಅನುಪಯುಕ್ತವಾಗಿ ಬಿಸಾಕಿದ ಆಹಾರ ಹಂದಿಗಳ ಬೆಳವಣಿಗೆಗೆ ಶ್ರೇಷ್ಠ. ತರಕಾರಿ ಮಾರುಕಟ್ಟೆಗಳಲ್ಲಿ ಬಿಸಾಕಿದ ಎಲೆ, ಗಡ್ಡೆ ಗೆಣಸುಗಳೂ ಉತ್ತಮವೆ. ಹಂದಿಗಳನ್ನು ಸಾಕುವುದರಲ್ಲಿ ಹೆಚ್ಚಿನ ಖರ್ಚೆಂದರೆ ಶೇಕಡಾ ೮೦ ರಷ್ಟು ಭಾಗ ಆಹಾರದ್ದೇ ಆಗಿರುತ್ತದೆ.

ಹಂದಿಗಳಿಗೆ ತಗಲಬಹುದಾದ ಅತಿ ಮುಖ್ಯ ರೋಗಗಳೆಂದರೆ ಕಾಲು ಮತ್ತು ಬಾಯಿ ರೋಗ, ಗಂಟಲು ಬೇನೆ ಮತ್ತು ನರಡಿ ರೋಗಗಳು. ಆದರೆ ಮೈಮೇಲಿನ ಮತ್ತು ಹಂದಿಗಳ ದೇಹದೊಳಗಿನ ಪರೋಪಜೀವಿಗಳು ಹಂದಿಗಳ ಬೆಳವಣಿಗೆಯಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಾಕಷ್ಟು ನಷ್ಟವುಂಟುಮಾಡುತ್ತವೆ. ಶರೀರದ ಮೇಲಿನ ಪರೋಪಜೀವಿಗಳನ್ನು ಕ್ರಿಮಿ ನಾಶಕ ಔಷಧಗಳನ್ನು ಸಿಂಪಡಿಸಿ ನಾಶಪಡಿಸಬಹುದು. ಆದರೆ ದೇಹದೊಳಗಿನ ಪರೋಕ್ಷ ಜೀವಿಗಳಿಗೆ ಯೋಗ್ಯ ಕಾಲದಲ್ಲಿ ಅಗತ್ಯ ಚಿಕಿತ್ಸೆಗಳನ್ನು ಕೈಗೊಳ್ಳಬೇಕಲ್ಲದೆ ರೋಗ ಪ್ರತಿರೋಧಕ ಚುಚ್ಚುಮದ್ದುಗಳನ್ನು ಕಾಲಕಾಲಕ್ಕೆ ಹಂದಿಗಳಿಗೆ ಹಾಕಿಸಬೇಕು.

ಹಂದಿಗಳು ಎಂದಾಕ್ಷಣ ಮುಖ ಕಿವಿಚಿಕೊಂಡು ಅಸಹ್ಯಪಡುವವರೇ ಹೆಚ್ಚು. ಆದರೆ

ಹಂದಿಗಳನ್ನು ಸಾಕುವದು ಅದರಿಂದ ಅನೇಕ ಉದ್ಯಮಗಳನ್ನು ಕೈಗೊಳ್ಳುವುದು ನೂರಾರು ಮನೆತನದ ಕುಲ ಕಸುಬಾಗಿದೆ. ಒಂದು ಅಂದಾಜಿನ ಪ್ರಕಾರ ನಮ್ಮ ರಾಜ್ಯದಲ್ಲೇ ಸುಮಾರು ಎಂಟು ಲಕ್ಷ ಜನ ಹಂದಿ ಸಾಕಾಣಿಕೆಯ ಉದ್ಯಮದಲ್ಲಿದ್ದಾರೆ.

ಗಂಟು ಕಾಯಿಲೆ, ವಾಯು–ಮೂರ್ಛೆ ರೋಗ ಬಿಳಿ ಕಾಮಾಲೆಯ ರೋಗಗಳಿಗೆ ಹಂದಿಯ ರಕ್ತ ದಿವ್ಯೌಷಧ. ತೋಟ, ಹೊಲ, ಗದ್ದೆಗಳಿಗೆ ಹಂದಿಗಳ ಗೊಬ್ಬರ ಸರ್ವಶ್ರೇಷ್ಠವಾದುದು. ಅಡಿಕೆ ತೆಂಗು ತೋಟಗಳಿಗಂತೂ ಇದರ ಗೊಬ್ಬರ ಅತಿಶ್ರೇಷ್ಠ. ಹಂದಿಯ ಕೂದಲು ಹೆಚ್ಚು ಒರಟಾದುದರಿಂದ, ಪೇಯಿಂಟಿಂಗ್ ಬ್ರಷ್, ಪಾಲಿಶಿಂಗ ಬ್ರಷ್ ನಾನಾ ಬಗೆಯ ಪಾದರಕ್ಷೆಗಳು ಮತ್ತು ಅದರ ಚರ್ಮದಿಂದ ಬಗೆಬಗೆಯ ಚೀಲಗಳನ್ನು ಅತ್ಯಾಧುನಿಕವಾಗಿ ತಯಾರಿಸುತ್ತಾರೆ.

ಸರಕಾರವೂ ಹಂದಿಗಳನ್ನು ಶಾಸ್ತ್ರೀಯವಾಗಿ ಯೋಗ್ಯ ರೀತಿಯಲ್ಲಿ ಸಾಕಲು ತರಬೇತಿ ಶಾಲೆಗಳನ್ನು ತೆರೆದಿದೆ. ವಿದೇಶಗಳಿಂದ ಉತ್ತಮ ತಳಿಯ ಗಂಡು ಹಂದಿಗಳನ್ನು ಕೂಡ ತರಿಸಲಾಗಿದೆ. ಹಂದಿಗಳನ್ನು ಸಾಕಲು ಬ್ಯಾಂಕುಗಳು ಕೂಡ ಆರ್ಥಿಕ ನೆರವು ನೀಡುತ್ತಿದೆ.

ಕೆಲವು ವರ್ಷಗಳ ಹಿಂದೆ ಹಸು ಮಕ್ಕಳ ಪಾಲಿಗೆ ಮಾರಿಯಂತೆ ಕಾಣಿಸಿಕೊಂಡ ಮಿದುಳ ಜ್ವರಕ್ಕೆ ಮೂಲ ಕಾರಣ ಹಂದಿಗಳೆಂದು ಹರಡಿದ ಕಲ್ಪನೆಯ ಸುದ್ದಿಯಿಂದಾಗಿ ಸಾವಿರಾರು ಹಂದಿಗಳು ವಿನಾ ಕಾರಣ ತಮ್ಮ ಪ್ರಾಣವನ್ನು ಕಳೆದುಕೊಳ್ಳಬೇಕಾಯಿತು. ಆದರೆ ಇಲ್ಲೊಂದು ವಿಪರ್ಯಾಸವೆಂದರೆ ದಿನದ ಇಪ್ಪತ್ನಾಲ್ಕು ಗಂಟೆಯಲ್ಲೂ ಹಂದಿಗಳ ಜೊತೆಗೇ ಕಾಲ ಕಳೆದು ಅವುಗಳು ವಾಸಿಸುವ ಗುಡಿಸಲಬಳಿಯೇ ತಾವು ಕೂಡ ವಾಸಿಸುವ ಹಂದಿಗಳನ್ನು ಸಾಕಿಸಲುಹುವ ಜನರ ಮಕ್ಕಳಿಗೆ ಒಬ್ಬರಿಗಾದರೂ ಈ ಕಾಯಿಲೆ ಹರಡಿದ ದೂರು ಇಲ್ಲ. ಅಲ್ಲದೆ ಕಾಲ ಕಳೆದಂತೆ ತಜ್ಞ ವೈದ್ಯ ಸಮೂಹ ನಡೆಸಿದ ಸಂಶೋಧನೆಗಳ ಫಲವಾಗಿ ಮಿದುಳು ಜ್ವರಕ್ಕೆ ಹಂದಿಗಳು ಕಾರಣವಲ್ಲವೆಂಬ ಅಂಶ ಇದೀಗ ಬೆಳಕು ಕಾಣುತ್ತಿದೆ. ✡



"ಟ್ರಿನ್" ಗುಟ್ಟುವ, ಟೆಲಿಫೋನಿಗೆ ಉತ್ತರಿಸುವ ರೀತಿಯಿಂದಲೇ, ಆ ವ್ಯಕ್ತಿ ಯಾವ ದೇಶದವನೆಂದು ಪತ್ತೆ ಹಚ್ಚಬಹುದು.

ಉದಾಹರಣೆಗೆ ಅಮೇರಿಕದವರು ಫೋನಿಗೆ ಉತ್ತರಿಸುವಾಗ "ಹಲೋ" ಎಂದಷ್ಟೇ ಹೇಳುತ್ತಾರೆ. ಜರ್ಮನಿಯವರು, ಕ್ರಮಬದ್ಧವಾಗಿ ತಮ್ಮ ಹೆಸರನ್ನು ಹೇಳುತ್ತಾರೆ. ರಶಿಯಾದವರು, "ಕೇಳುತ್ತಿದ್ದೇನೆ," ಎಂದು ತಮ್ಮ ಆಸಕ್ತಿಯನ್ನು ತೋರಿಸಿದರೆ, ಕುತೂಹಲಿಗಳಾದ ಫ್ರೆಂಚರೊ, "ಹಲೋ, ಯಾರು ಮಾತನಾಡುತ್ತಿರುವುದು?" ಎಂದು ಪ್ರಶ್ನಿಸುತ್ತಾರೆ. ಇಟಲಿಯವರು, ಚುಟುಕಾಗಿ "ರೆಡಿ"ಯೆಂದು ಹೇಳಿ, ಇನ್ನೊಂದೆಡೆ ಇರುವವರನ್ನು ಮಾತನಾಡಲು ಪ್ರಚೋದಿಸುತ್ತಾರೆ. ಗಂಭೀರರಾದ ಇಂಗ್ಲೀಷರು, ತಮ್ಮ ಫೋನ್ ನಂಬರನ್ನು ಮಾತ್ರ ಹೇಳುತ್ತಾರೆ. ಚೀನಿಯರಾದರೋ "ಏಯ್. ಏಯ್, ಯಾರು ನೀವು?" ಎಂದರಚುತ್ತಾರೆ.

-ಟಿ. ವಿ. ಶ್ರೀಲಕ್ಷ್ಮಿ



# ಅಪರೂಪದ ಕವಿ ವಿಜ್ಞಾನಿ ಡಾ. ವೈ. ಎಸ್. ಲೂಯಿಸ್

ಪಿ. ಆರ್. ತಿಪ್ಪೇಸ್ವಾಮಿ

ಬಹು ಜನರಿಗೆ ಪರಿಚಯ ಇಲ್ಲದ ತೆರೆಮರೆ ಯಲ್ಲುಳಿದ ಲೇಖಕ ಹಾಗೂ ಕವಿ ಡಾ. ವೈ. ಎಸ್. ಲೂಯಿಸ್ ಮೈಸೂರು ನಗರದಲ್ಲಿ-ದ್ದಾರೆ.

ಅವರು ೧೯೪೪ರಲ್ಲಿ ರಚಿಸಿದ ಕವನ ಸಂಕಲನ 'ಗಾನಲಹರಿ...'ಬಗ್ಗೆ "ಅವರ ಎಲ್ಲ ಕವನ ಗಳಲ್ಲಿಯೂ ವ್ಯಕ್ತವಾಗಿರುವ ಸಭ್ಯವೂ ಸರಳವೂ ಸುಸಂಸ್ಕೃತವೂ ಆದ ಕವಿ ಮನೋಧರ್ಮ ಪ್ರೇಮ ಜೀವನವೋ, ರಾಷ್ಟ್ರ ಜೀವನವೋ, ಆಂತರಿಕ ಜೀವನವೋ, ಕವಿತೆಯ ವಸ್ತು ಯಾವು ದಿದ್ದರೂ ಆ ವಸ್ತುವಿನ ಸೂಕ್ತ ಪರಿವೇಷದಂತೆ ಹಬ್ಬಿ ಬೆಳಗುತ್ತಿರುವ ಸತ್ವ ಗುಣಪೂರ್ಣವಾದ ಈ ಶುಭ್ರ ಮನೋಧರ್ಮ ಇತರ ಸಹೃದಯ-ರಿಗೂ ಮೆಚ್ಚುಗೆಯಾದೀತೆಂದು ನಾನು ಆಶಿಸು ತ್ತೇನೆ" ಎಂದಿದ್ದಾರೆ ಪರಮೇಶ್ವರ ಭಟ್ಟರು.

"ಇಂದೋ ನಾಳೆಯೋ ಬುವಿಯ ದೇಗುಲಕ್ಕೆ ಗೋಪುರದ ರೀತಿಯಲ್ಲಿ ಭಾರತವು ನಿಂತು ನಿತ್ಯ ದಿಕ್ಕು—ದಿಕ್ಕಿಗೆ ತನ್ನೀ ಕಾಂತಿಯಂ ಪಸರಿಸುತ ಚಿರಕಾಲ ಬೆಳಗುವುದು ಅದುವೆ ಸತ್ಯ," ಎನ್ನುವ ಮಾತಿನಲ್ಲಿ ಕವಿ ನಮ್ಮ ದೇಶದ ಉಜ್ವಲವಾದ ಭವಿಷ್ಯದ ಚಿತ್ರವನ್ನು ರೂಪಿಸಿದ್ದಾರೆ.

ನಮ್ಮ ದೇಶದ ನಾನಾ ತೀರ್ಥ ಕ್ಷೇತ್ರಗಳನ್ನು ಕವಿ ಲೂಯಿಸ್ ಸಂದರ್ಶಿಸಿದಾಗ ತಮ್ಮ ಮನಸ್ಸಿ ನಲ್ಲಿ ಒಡಮೂಡಿದ ಭಾವನೆಗಳನ್ನು ಹೊರಸೂಸಿ ಬರೆದ ಕೃತಿಗಳಲ್ಲಿ ಭಗವಂತನ ಮಹಿಮೆಯನ್ನು ಕೊಂಡಾಡಿದ್ದಾರೆ. ಮಾನವನ ದೇವತ್ವದಾಶೆ ಗಳು ಆಗಸದ ಕಡೆಗೆದ್ದು ನಿಂತಂತೆ ಎಂದು ಹಿಮಾಚಲದ ಧವಳ ಶಿಖರಗಳನ್ನು ಭಾವಿಸು ವಾಗಲೂ, "ಸೌಂದರ್ಯವೆಲ್ಲಿಹುದೋ ಅಲ್ಲಿ ದೇವನ ವಾಸ, ದೇವನಿದ್ದೆಡೆ ನಮ್ಮೀ ಜೀವನ

ವಿಕಾಸ" ಎಂದು ಸಾರುವ ಸಾಲುಗಳ ನಿರ್ಮಾಣಕ್ಕೆ ಕಾರಣರಾದ ಉತ್ತಮ ಕವಿ ಮನೋಧರ್ಮವನ್ನು ಭಟ್ಟರು ಬಣ್ಣಿಸಿದ್ದಾರೆ.

ಈ "ಗಾನಲಹರಿ" ಕವನ ಸಂಕಲನ ಬಗ್ಗೆ ದಿ. ಜಿ. ಪಿ. ರಾಜರತ್ನಂ ಅವರು ಹೀಗೆ ನುಡಿದಿದ್ದಾರೆ. "ಯಾವುದನ್ನು ಈ ಹೊತ್ತಿನ ದಿವಸ ನಾವು ಸೆಕ್ಯೂಲರ್ ಎನ್ನುತ್ತೇವೆಯೋ ಆ ದೃಷ್ಟಿ ಶ್ರೀ ಲೂಯಿಸ್ ಅವರದ್ದು. ಹೆಸರೇ ಹೇಳುವಂತೆ, ಅವರು ಯೇಸುಸ್ವಾಮಿಯ ಶರಣರು. ಇವರು ಈ ಸಂಕಲನದಲ್ಲಿ 'ನ್ಯಾಯ ತೀರ್ಪು' ಮತ್ತು 'ಗೆತ್ಸೇಮನೆಯಲ್ಲಿ ತೋಟದಲ್ಲಿ' ಎಂಬ ಎರಡು ಕ್ರೈಸ್ತ ಕಥಾನಾಯಕಗಳನ್ನು ಚಿತ್ರಿಸಿರುವಂತೆಯೇ, ಅದೇ ಲೀನತೆಯಿಂದ ಕೃಷ್ಣನ ಕೊಳಲನ್ನೂ ಹೃಷಿಕೇಶವನ್ನೂ ದಕ್ಷಿಣೇಶ್ವರವನ್ನೂ ಹರಿದ್ವಾರವನ್ನೂ ಕಾಸಿಯನ್ನೂ ಕುರಿತು ಹಾಡಿರುವುದು ನಿಜವಾಗಿಯೂ ಆಪ್ಯಾಯಮಾನವಾಗಿದೆ."

ವಿಜ್ಞಾನ ಉಪಾಧ್ಯಾಯರಾಗಿದ್ದುಕೊಂಡು ಕನ್ನಡದಲ್ಲಿ ಬರವಣಿಗೆಗೆ ತೊಡಗಿದ ಲೂಯಿಸ್ ಅವರ ಬರಹ, ಹೃದಯಶ್ರೀಮಂತಿಕೆ ಬಗ್ಗೆ ಕನ್ನಡ ಸಾಹಿತ್ಯದ ಈ ಎರಡು ದಿಗ್ಗಜಗಳ ನುಡಿಗಳು ಹೆಮ್ಮೆಪಡುವಂತಹವು.

ಎರಡು ವರ್ಷ ವಿದೇಶದಲ್ಲಿದ್ದಾಗ (೧೯೫೦–೫೧) ಮಿತ್ರರೊಬ್ಬರಿಗೆ ಬರೆದ ಪತ್ರಗಳ ಸಂಕಲನ 'ಕೊಲಂಬಿಯ ಯಾತ್ರೆ'ಯ ಹೆಸರಿನಲ್ಲಿ ಪ್ರಕಟವಾಗಿವೆ. ವಿದೇಶದಲ್ಲಿ ಲೂಯಿಸ್ ಕಂಡು ಅನುಭವಿಸಿದ ವಿವರ ಓದಿದಾಗ ನಮ್ಮನ್ನೂ ಅವರು ಜೊತೆಗೆ ಕರೆದುಕೊಂಡು ಓಡಿಯಾಡಿಸಿದ ಅನುಭವವಾಗುತ್ತದೆ.

ಲೂಯಿಸ್ ಅವರ ಬಾಳಿನಲ್ಲಿ ಎಂದೆಂದೂ ಮರೆಯಲಾಗದ ಕಹಿ ಪ್ರಸಂಗಗಳು ಎಂಥವರ ಹೃದಯವನ್ನೂ ಕಲಕುವಂತಹವು.

ಅವರು ೧೯೪೨ರಲ್ಲಿ ತುಮಕೂರಿನ ಇಂಟರ್ ಮಿಡಿಯೇಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಸಂದರ್ಭ. ಆಗ ಲೂಯಿಸ್ ತಂದೆ ಬೆಂಗಳೂರಿನಿಂದ ಅವರನ್ನು ನೋಡಲು ಬಂದಿದ್ದರು. ಅದೂ ಮೋಟಾರ್ ಸೈಕಲ್‌ನಲ್ಲಿ. ತುಮಕೂರಿನಿಂದ ಅವರು ಹಿಂದಿರುಗುವಾಗ ಅಪಘಾತಕ್ಕೆ ತುತ್ತಾದರು. ಗಾಯಗಳು ಮಾಯದೆ ತೀರಿಕೊಂಡರು. "ತಂದೆ ನನ್ನನ್ನು ನೋಡಲು ಬಂದು ಇಂಥ ಸಾವಿಗಿಡಾದರಲ್ಲಾ" ಎಂಬ ಕೊರಗು ಲೂಯಿಸ್ ಅವರನ್ನು ಇಂದಿಗೂ ಬಾಧಿಸುತ್ತಿದೆ.

ಲೂಯಿಸ್ ಅವರನ್ನು ಸಂಕಟಕ್ಕೆ ಈಡು ಮಾಡಿದ ಘಟನೆ ಇದು. ೧೯೪೮ರ ಸಮಯ ಅವರು ಉನ್ನತ ಅಧ್ಯಯನಕ್ಕೆಂದು ಅಮೇರಿಕಕ್ಕೆ ಹೊರಡುವ ಸಂಭ್ರಮದಲ್ಲಿದರು. ಲೂಯಿಸ್ ಅವರ ಪ್ರೀತಿಯ ಮಾತೆ ಲಕ್ವ ಹೊಡೆದು ಹಾಸಿಗೆ ಹಿಡಿದವರು ಮೇಲೇಳಲೇ ಇಲ್ಲ. ಅವರ ಮಾತು ನಿಂತಿದ್ದರೂ ಬರವಣಿಗೆಯಲ್ಲೇ ಅವರು ಲೂಯಿಸ್ ಅವರಿಗೆ ಧೈರ್ಯ ಹೇಳಿ "ದುಃಖಿಸಬೇಡ ಮಗನೇ ನೀನು ವಿದೇಶಕ್ಕೆ ಹೋಗಿ ಬಾ. ದೇವರು ಒಳ್ಳೆಯದನ್ನು ಮಾಡುತ್ತಾನೆ," ಎಂದು ಹೇಳಿದ್ದು ಈಗಲೂ ಅವರಿಗೆ ಕಣ್ಣಿಗೆ ಕಟ್ಟಿದಂತಿದೆ. ಹಾಗೆ ತಾಯಿಯ ಸಮಾಧಾನದ ಧೈರ್ಯದ ಮಾತುಗಳು ಲೂಯಿಸ್ ಅವರಿಗೆ ಇಂದಿಗೂ ದುಃಖ ತರಿಸುತ್ತಿವೆ. ಪಾರ್ಶ್ವಘಾತವಾದ ಕೇವಲ ಐದು ದಿನಗಳಲ್ಲೇ ತಾಯಿ ತೀರಿಕೊಂಡರು. ಆದರೆ ಆ

## ಅನರ್ಥಕೋಶ

ಹರತಾಳ = ಪರಮಾತ್ಮನ ಕಂಟಿನ ಜತೆವಾದ್ಯ

ಕಿರುಕುಳ = ಚಿಕ್ಕ ಆಸಾಮಿ

ಸರಪಣಿ = ಹಾವಿನ ಹಾರ

ಕುರುಕ್ಷೇತ್ರ = ಕೀವು ಗುಳ್ಳೆಯ ಪ್ರದೇಶ

ಕರಗತ = ಕೈಯನ್ನು ಕಳೆದುಕೊಂಡವ

ಶೇಷಶಾಯಿ = ಉಳಿದುಕೊಂಡ ಮಸಿ

ಕಂಬಿ ಕೀಳು = ಸಲಾಕೆಯನ್ನು ಕಿತ್ತೆಸೆ

ಪರಂಗಿ = ಮತ್ತೊಬ್ಬರ ಅಂಗಿ

ಕುಚೇಲ = ಕೆಟ್ಟ ಸೇವಕ

ವಿಜಯೇಂದ್ರ ಕುಲಕರ್ಣಿ

ಮಾತೆಯ ಆಶೀರ್ವಾದ ಲೂಯಿಸ್‌ವರನ್ನು ಸದಾ ಕಾಪಾಡುತ್ತಿದೆ.

ಲೂಯಿಸ್ ಅವರ ಮತ್ತೊಂದು ಮಹತ್ವದ ಕಾದಂಬರಿ 'ಹರಿಯೂಪಿಯಾ' ಸಿಂಧೂ ಕಣಿವೆಯ ನಾಗರಿಕತೆಯ ಬಗ್ಗೆ ಆ ಕಾಲದಲ್ಲಿದ್ದ ಆರ್ಯರು ಸಿಂಧೂ ಸಂಸ್ಕೃತಿಯನ್ನು ಧ್ವಂಸ ಮಾಡಿದರು ಎಂಬ ಅಪವಾದದ ತಪ್ಪು ಕಲ್ಪನೆಯನ್ನು ಬಿಡಿಸಿ ಅವರಲ್ಲಿ ಪರಸ್ಪರ ಮೈತ್ರಿಯಿದ್ದಿತು ಎಂಬುದನ್ನು ಸಮರ್ಥಿಸಿದೆ. 'ಸುಧಾ' ವಾರಪತ್ರಿಕೆಯಲ್ಲಿ ಇದು ಧಾರಾವಾಹಿಯಾಗಿ ಪ್ರಕಟವಾಗಿ ಜನಮೆಚ್ಚಿಗೆ ಗಳಿಸಿತ್ತು.

ಅವರು ಹುಟ್ಟಿದ್ದು ಕೋಲಾರ, ಬೆಳೆದದ್ದು ಬೆಂಗಳೂರು, ಬಾಳಿ ಬೆಳಕು ಕಂಡದ್ದು ಮೈಸೂರು. ಅವರಿಗೀಗ ೬೪ ವರ್ಷ, ಉತ್ಸಾಹ ಕುಂದಿಲ್ಲ. ಇವರ ತಂದೆ ಎಸ್. ಯೋಹಾನ್ ಬೆಂಗಳೂರು ಪ್ರೆಸ್ಸಿನಲ್ಲಿ ಮೋನೋ ಟೈಪ್ ಮೆಕ್ಯಾನಿಕ್ ಆಗಿದ್ದರು. ತಾಯಿ ಎಸ್ತೇರ ಪ್ರಾಥಮಿಕ ಶಾಲಾ ಶಿಕ್ಷಕಿ. ಲೂಯಿಸರ ಓರ್ವ ಮಗ ವಿಕ್ರಾಂತದಲ್ಲಿ ಎಂಜಿನೀಯರ್ ಟ್ರೈನೀ, ಓರ್ವ ಪುತ್ರಿ ಎಂ.ಎಸ್‌ಸಿ. ಪದವೀಧರೆ. ಆಹಾರ ವಿಜ್ಞಾನ ಸಂಸ್ಥೆಯಲ್ಲಿ ಫೆಲೋ ಆಗಿದ್ದಾರೆ. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಕನ್ನಡ ಭಾಷೆಯ ಬಗೆಗೆ ವಿಶೇಷ ಅಭಿಮಾನ ಲೂಯಿಸ್ ಅವರಿಗೆ. ಆ ವೇಳೆಗೆ ಕುವೆಂಪು ಅವರ ಕವನಗಳ ಬಗ್ಗೆ ಆಸಕ್ತಿ ಮೂಡಿತು. ತಾವೂ ಬರೆಯಬೇಕೆಂಬ ಉತ್ಸಾಹ. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯುತ್ತಿದ್ದ 'ವಸಂತ ಸಾಹಿತ್ಯೋತ್ಸವ'ದಲ್ಲಿ ತಾವು ಬರೆದ ಕವನಗಳನ್ನು ಓದಿದಾಗ ಬೇಂದ್ರೆ ಹಾಗೂ ಮಾಸ್ತಿ ಅವರಿಂದ ಮೆಚ್ಚಿಗೆ ನುಡಿಗಳ ಸ್ಫೂರ್ತಿ. ತುಮಕೂರಿನ ಇಂಟರ್‌ಮಿಡಿಯೇಟ್ ಕಾಲೇಜಿನಲ್ಲಿ (೧೯೪೦) ಉಪನ್ಯಾಸಕರಾಗಿದ್ದ ವೇಳೆ ಅಲ್ಲಿ ಕವಿ ಪರಮೇಶ್ವರ ಭಟ್ಟರ ಸಂಪರ್ಕ. ಇವರ ಕವನಗಳಿಂದ ಪ್ರೇರಣೆ ಹೆಚ್ಚಿ ಕವನಗಳ ಸೃಷ್ಟಿಗೆ ಕಾರಣ. ಭಟ್ಟರ ಉತ್ತೇಜನದಿಂದಾಗಿ ಲೂಯಿಸರು ಕವಿಯಾಗಿ ಬೆಳಕು ಕಾಣುವಂತಾಯಿತು! ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎಸ್ಸಿ. ಪದವಿ (೧೯೪೦), ಬನಾರಸ ಹಿಂದೂ ವಿಶ್ವವಿದ್ಯಾನಿಲಯದಿಂದ ಎಂ.ಎಸ್‌ಸಿ. (ಕೆಮಿಸ್ಟ್ರಿ) (೧೯೪೫) ಹಾಗೂ, ಅಮೇರಿಕದ ಇಲಿನಾಯ ವಿಶ್ವವಿದ್ಯಾನಿಲಯದ ಮೂಲಕ ಬ್ಯಾಕ್ಟೀರಿಯಾಲಜಿಯಲ್ಲಿ ಎಂ. ಎಸ್. ಪದವಿ ಗಳಿಸಿದ್ದಾರೆ. ೧೯೬೦ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್. ಡಿ. ಪದವಿ ಗಳಿಸಿದರು.

೧೯೪೮ ರಿಂದ ೧೯೫೦ ರ ವರೆಗೆ ಅವರು ಅಮೇರಿಕದಲ್ಲಿ ಕೈಗಾರಿಕಾ ಜೀವಾಣು ಶಾಸ್ತ್ರದ ಬಗ್ಗೆ ಅಧ್ಯಯನ ಮತ್ತು ತರಬೇತಿ ಪಡೆದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ ಸೇರಿ ನಂತರ ಮೈಸೂರಿನ ಮೆಡಿಕಲ್ ಕಾಲೇಜಿನಲ್ಲಿ ಬಯೋಕೆಮಿಸ್ಟ್ರಿಯ ಉಪ ಪ್ರಾಧ್ಯಾಪಕರಾಗಿ ನಂತರ ಮೈಸೂರಿನ ಸಿ.ಎಫ್. ಟಿ.ಆರ್.ಐ.ನಲ್ಲಿ ಸಂಶೋಧಕರಾಗಿ ಸೇರಿ ಪ್ರಾಮಾಣಿಕವಾಗಿ ದುಡಿದು ನಿವೃತ್ತರಾದರೂ ಅಲ್ಲಿ ಈಗ ಸಂಪಾದಕತ್ವ ನಿರ್ವಹಿಸುತ್ತಿದ್ದಾರೆ. ಇವರ ಸಂಶೋಧನೆಗೆ ಅನೇಕ ಬಹುಮಾನಗಳು ಬಂದಿವೆ. ಲೂಯಿಸ್ ಅವರು ಮೂರು ಸಲ (೧೯೭೯, ೧೯೮೧ ಮತ್ತು ೧೯೮೪) ವಿಶ್ವಸಂಸ್ಥೆಯ ಕರೆಯ ಮೇರೆಗೆ ಶ್ರೀಲಂಕಾ ಮತ್ತು ಬ್ರೆಜಿಲ್ ದೇಶಗಳಿಗೆ ಹೋಗಿ ಅಲ್ಲಿ ಸಂಬಾರ ಜಿನಸಿಗಳ ತಂತ್ರಜ್ಞಾನದ ಬಗ್ಗೆ ಆ ದೇಶಗಳಿಗೆ ನೆರವು ನೀಡಿದ್ದಾರೆ.

ಇಂಡಿಯನ್ ಮರ್ಚಂಟ್ಸ್ ಚೇಂಬರ್ಸ್ ಬಹುಮಾನ, ರಫಿ ಅಹಮದ ಕಿದ್ವಾಯಿ ಬಹುಮಾನ, ಎನ್. ಆರ್. ಡಿ. ಸಿ. ಸಂಶೋಧನ ಬಹುಮಾನಗಳನ್ನು ಗಳಿಸಿದ್ದಾರೆ. ಅಲ್ಲದೆ ಇಂಗ್ಲೀಷ್ ಹಾಗೂ ಕನ್ನಡ ಭಾಷೆಯಲ್ಲಿ ನೂರಾರು ಸಂಶೋಧನ ಪ್ರಬಂಧಗಳನ್ನು ರಚಿಸಿದ್ದಾರೆ. ಗಾನಲಹರಿ, ಹರಿಯೂಪಿಯಾ ಸುಗಂಧ ದ್ರವ್ಯಗಳು, ಹಣ್ಣುಗಳು, ಸಂಬಾರು ದಿನಸಿಗಳು ಎಂಬ ಅವರು ಬರೆದ ಪುಸ್ತಕಗಳು ಲೂಯಿಸ್ ಅವರ ಸಾಹಿತ್ಯ ಪ್ರೇಮಕ್ಕೆ ಸಾಕ್ಷಿಯಾಗಿವೆ.

ದೈವ ಭಕ್ತರಾದ ಲೂಯಿಸ್ ಕಷ್ಟದಲ್ಲಿ ದೇವರನ್ನು ಪ್ರಾರ್ಥಿಸುತ್ತಾರೆ. ನಿವೃತ್ತರಾದ ಮೇಲೂ ಆಹಾರ ವಿಜ್ಞಾನಿಗಳ ಸಂಘದ ಸಂಪಾದಕನ ಉದ್ಯೋಗ ಕೈಕೊಂಡಿದ್ದಾರೆ.

ಸಂಬಾರ ಜಿನಸಿಗಳು, ಹಣ್ಣುಗಳು, ಕೈಗಾ

ರಿಕಾ ಜೀವಾಣುಶಾಸ್ತ್ರ—ಇವುಗಳ ಬಗ್ಗೆ ನಡೆದ ಸಂಶೋಧನೆಗಳನ್ನು ಕುರಿತು ಅವರು ಬರೆದ ಒಂದು ನೂರಕ್ಕೂ ಮೀರಿ ಪ್ರೌಢ ಲೇಖನಗಳು, ಅನೇಕ ವೈಜ್ಞಾನಿಕ ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ.

ಡಾ. ವೈ. ಎಸ್. ಲೂಯಿಸ್ ಅವರ ಸಂಶೋಧನೆಗಳ ಫಲವಾಗಿ ಹುಣಿಸೇಹಣ್ಣಿನ ಮತ್ತು ತೋಟಾಂಪುಳಿ, ತೋಕಂ ಹಣ್ಣುಗಳ ಸಾರ ಪದಾರ್ಥಗಳನ್ನು ತಯಾರಿಸುವ ಕಾರ್ಖಾನೆಗಳು ಈಗ ಭಾರತದಲ್ಲಿ ಸ್ಥಾಪಿತವಾಗಿದೆ. ಅಲ್ಲದೇ ಸಂಬಾರ ಜಿನಸಿಗಳ ತೈಲ ಮತ್ತು ೧೮ ಪದಾರ್ಥಗಳನ್ನೂ, ಒಣ ಹಸಿರು ಮೆಣಸನ್ನೂ ತಯಾರಿಸುವ ಕೈಗಾರಿಕೆಗಳು ಕೇರಳ ಮತ್ತು, ಕರ್ನಾಟಕಗಳಲ್ಲಿ ಸ್ಥಾಪಿತವಾಗಿವೆ. ಯೀಸ್ಟ್ ಅಣು ಜೀವಿಯನ್ನು ಬೇಕರಿಗಳಲ್ಲಿ ಉಪಯೋಗಿಸಲಾಗುತ್ತದೆ. ಇದನ್ನು ತಯಾರಿಸುವ ಕೆಲ ಕಾರ್ಖಾನೆಗಳೂ ಡಾ. ವೈ. ಎಸ್. ಅವರ ಸಂಶೋಧನೆಗಳ ಫಲವಾಗಿ ಸ್ಥಾಪಿತವಾಗಿವೆ.

ತೋಟಾಂಪುಳಿ ಎಂಬ ಹಣ್ಣಿನಲ್ಲಿ ಇದುವರೆಗೂ ಕಂಡು ಹಿಡಿಯಲಾಗದಿದ್ದ 'ಹೈಡ್ರಾಕ್ಸಿಟ್ರಿಕ್ ಆಮ್ಲ' ಎಂಬ ಪದಾರ್ಥವನ್ನು ಇವರು ಗುರುತಿಸಿದ್ದು ಇದರಿಂದ ಜೀವರಸಾಯನ ಶಾಸ್ತ್ರದಲ್ಲಿ ಅನೇಕ ಹೊಸ ಸಂಶೋಧನೆಗಳು ನಡೆಯುತ್ತಿವೆ.

೧೯೮೧ರಲ್ಲಿ ಸಿ. ಎಫ್. ಟಿ. ಆರ್. ಐ. ನಿಂದ ನಿವೃತ್ತರಾದ ಎರಡು ತಿಂಗಳಲ್ಲೇ ಅಲ್ಲಿಯೇ ಇರುವ ಆಹಾರ ವಿಜ್ಞಾನಗಳ ಖಾಸಗಿ ಸಂಸ್ಥೆಯೊಂದು ಅವರನ್ನು ಸಂಪಾದಕನನ್ನಾಗಿ ನೇಮಿಸಿಕೊಂಡಿತು. ಮಧ್ಯದಲ್ಲಿ ೧೯೮೧ರಲ್ಲಿ ಲೂಯಿಸ್ ಅವರು ಮೂರು ತಿಂಗಳ ಕಾಲ ಸಿಂಹಳಕ್ಕೆ ವಿಶ್ವ ಸಂಸ್ಥೆಯ ವಿಶೇಷತಜ್ಞರಾಗಿ ಸಂಬಾರ ಜಿನಿಸುಗಳ ಬಗ್ಗೆ ಸಲಹೆಗಳನ್ನು ಕೊಡಲು ಹೋಗಿದ್ದರು. ೧೯೮೪ರಲ್ಲಿ ಮೂರು ತಿಂಗಳ ಕಾಲ ಮೆಣಸಿನ ತಜ್ಞರಾಗಿ 'IICA' ಸಂಸ್ಥೆಯ ಪರವಾಗಿ ಬ್ರೆಜಿಲ್ ದೇಶಕ್ಕೂ ಹೋಗಿದ್ದರು.

ಅವರು ಮೊದಲಿನಿಂದಲೂ ಆಸಕ್ತಿ ಹೊಂದಿ




"ನಾನೇ ಪುಸ್ತಕಗಳನ್ನು ಹೊತ್ಕೊಂಡು ಹೋಗೋದಾದ್ರೆ ಶಾಲೆಗೇ ಹೋಗಲ್ಲ ಅಂತ ಹಠ ಹಿಡಿದು ಕೂತೆ. ಅಪ್ಪ ಈ ವ್ಯವಸ್ಥೆ ಮಾಡಿಕೊಟ್ಟರು..."

ರುವ ವಿವಿಧ ಧರ್ಮಗಳ ಬಗ್ಗೆ ವಿರಾಮದ ವೇಳೆಯಲ್ಲಿ ಅಧ್ಯಯನ ಮಾಡುತ್ತಾರೆ. ಕರ್ನಾಟಕ ಸಂಗೀತವನ್ನು ಕೇಳುವುದು ಅವರಿಗೆ ಬಹಳ ಇಷ್ಟ. ರಾಮನವಮಿಯ ಸಮಯದಲ್ಲಿ ಕಚೇರಿಗಳಲ್ಲಿ ಸಂಗೀತ ಕೇಳದಿದ್ದರೆ ಅವರ ಮನಸ್ಸಿಗೆ ಸಮಾಧಾನವೇ ಇರುವುದಿಲ್ಲ.

ವಿಜ್ಞಾನದ ಬಗ್ಗೆ ನೂರಕ್ಕೂ ಹೆಚ್ಚು ಲೇಖನಗಳನ್ನು ಪತ್ರಿಕೆಗಳಿಗಾಗಿ ಬರೆದಿದ್ದಾರೆ. "ಆದರೆ ಈಗ ನಮ್ಮ ವಾರಪತ್ರಿಕೆಗಳಿಗೆ ಅಂತಹ ಲೇಖನಗಳು ಬೇಕಿಲ್ಲವೆನಿಸುತ್ತದೆ. ಕಥೆ, ಕಾದಂಬರಿ, ಹಾಸ್ಯ ಲೇಖನಗಳಿಗೆ ಹೆಚ್ಚು ಉತ್ತೇಜನ. ಕವನಗಳಿಗಂತೂ ಸ್ಥಾನ ಕಡಿಮೆ. ಆದುದರಿಂದ ಈಗೇನೂ ಹೆಚ್ಚಾಗಿ ಬರೆಯುತ್ತಿಲ್ಲ" ಎಂದವರು ನನ್ನೊಡನೆ ಮಾತನಾಡುವಾಗ ಬೇಸರದಿಂದ ಹೇಳಿದರು. ಕೆಲವು ಕವಿ ಸಮ್ಮೇಳನಗಳಲ್ಲಿ ಕವನ ರಚಿಸಿ ಓದಿದ್ದಾರೆ. ಕಳೆದ ಸಲದ ಮೈಸೂರು ದಸರಾ ಕವಿ ಸಮ್ಮೇಳನ ಸಂದರ್ಭದಲ್ಲಿ ಒಂದು ಕವನವನ್ನು ಓದಿದ್ದರು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ಕೆ. ಎಸ್. ನರಸಿಂಹಸ್ವಾಮಿಗಳು ವಹಿಸಿದ್ದರು. ವಿಜ್ಞಾನಿಯೊಬ್ಬನನ್ನು ಕವಿ ಸಮ್ಮೇಳನದಲ್ಲಿ ಆಹ್ವಾನಿಸಿದ್ದು ಒಂದು ವಿಶೇಷವೇ ಎನ್ನಬೇಕು.

ನಮ್ಮ ಸಾಹಿತ್ಯದ ಬಗೆಗೆ ಅವರಿಗೆ ಖಚಿತವಾದ ಅಭಿಪ್ರಾಯವಿದೆ. ಅವರ ಮಾತುಗಳಲ್ಲಿ "ಈಗ ಕನ್ನಡದಲ್ಲಿ ಅನೇಕ ಲೇಖನಗಳೂ ಪುಸ್ತಕಗಳೂ ಪ್ರಕಟವಾಗುತ್ತಿವೆ. ಎಲ್ಲವನ್ನೂ ಓದುವುದು ಸಾಧ್ಯವಿಲ್ಲದ ಮಾತು. ಆದರೆ ಅವುಗಳ ವೈವಿಧ್ಯ ಬಹಳ ಉತ್ತೇಜನಕರವಾಗಿದೆ. ಪತ್ರಿಕೆಗಳಲ್ಲಿ ಬರುವ ಧಾರಾವಾಹಿಗಳು, ಅವು ಮತ್ತೆ ಪುಸ್ತಕಗಳಾಗಿ ಪ್ರಕಟವಾಗುವುದು ಸಾಮಾನ್ಯ. ಹೆಚ್ಚಿನವು ಸ್ತ್ರೀಯರು ಬರೆದವು. ಆದರೆ ಅವುಗಳಲ್ಲಿ ಉತ್ತಮ ಮಟ್ಟದವು, ಆಳವಾದ ಜೀವನದ ಅಧ್ಯಯನವಿರುವವು ಬಹು ಕಡಿಮೆ. ಕೇವಲ ಮನರಂಜನೆಗಾಗಿರುವವೇ ಹೆಚ್ಚು. ಆದರೂ ಈ ಜೊಳ್ಳಿನ ಮಧ್ಯೆ ಹಲವಾರು ಉತ್ತಮ ಕಾದಂಬರಿ, ವಿಮರ್ಶೆ, ವೈಜ್ಞಾನಿಕ ವಿಷಯ, ಕಾವ್ಯ ಇತ್ಯಾದಿ ಪ್ರಕಟವಾಗುತ್ತಿರುವುದು ಸಂತೋಷ. ಆಧುನಿಕ ಕವಿಗಳು ಬೇರೆ ಬೇರೆ ಶೈಲಿಯನ್ನು ಉಪಯೋಗಿಸುತ್ತಾರೆ. ಛಂದಸ್ಸು, ಪ್ರಾಸಗಳನ್ನು ಬಳಸುವುದಿಲ್ಲ. ಇದರಿಂದ ಬಾಧಕವಿಲ್ಲ. ಆದರೆ ಹೇಳಲು ಹೊರಟಿರುವುದು ಸಾಮಾನ್ಯರಿಗೆ ಅರ್ಥವಾಗುವುದು ಬಹಳ ಕಷ್ಟ. ಹೆಚ್ಚಿನ ಕವಿಗಳು ಬಡತನ. ಸಮಾಜದ ದೋಷಗಳನ್ನೇ ಕುರಿತು ಬರೆಯುತ್ತಾರೆ. ಬೇರೆ ಸೌಂದರ್ಯ, ಪ್ರೇಮ, ದೇಶಭಕ್ತಿ ಮುಂತಾದವುಗಳನ್ನು ಕುರಿತೂ ಬರೆಯಬೇಕು. –ವೈವಿಧ್ಯ ಇರಬೇಕು. ಆದರೆ ಕನ್ನಡಿಗರಲ್ಲಿ ಸಾಹಿತ್ಯದ ಅಭಿರುಚಿ ಬಹಳ ಕಡಿಮೆ. ಬರಹಗಾರರಿಗೆ ಉತ್ತೇಜನವೇ ಇಲ್ಲ. ಉತ್ತಮ ಕೃತಿಗಳನ್ನು ಕೊಳ್ಳುವವರು ವಿರಳ.

"ನೆರೆಯವರಾದ ತಮಿಳರು, ಆಂಧ್ರರು, ಕೇರಳೀಯರನ್ನು ನೋಡಿದರೆ ಅವರಲ್ಲಿ ಇರುವ ಸಾಹಿತ್ಯಾಭಿರುಚಿ ನಮಗೆ ಹೊಟ್ಟೆಕಿಚ್ಚು ಬರಿಸುತ್ತದೆ.

"ಪುಣ್ಯಕ್ಕೆ ನಮ್ಮ ಮಧ್ಯ ಇರುವ ಕುವೆಂಪು, ಮಾಸ್ತಿ, ಕಾರಂತ ಇವರಲ್ಲಿ ನನಗೆ ಅತ್ಯಂತ ಭಕ್ತಿ. ಇವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ,' 'ಸಣ್ಣ ಕತೆಗಳು,' 'ಮರಳಿ ಮಣ್ಣಿಗೆ' ಇವು ಕನ್ನಡದಲ್ಲಿ ಶಾಶ್ವತವಾಗಿ ನಿಲ್ಲುವಂಥ ಕೃತಿಗಳು. ಕುವೆಂಪು ಅವರ ಪ್ರೇಮ ಕಾಶ್ಮೀರ, ನವಿಲು ಮುಂತಾದ ಕವನ ಸಂಕಲನಗಳು, ಬೇಂದ್ರೆಯವರ ಸುಂದರ ಕವನಗಳು ಎಂದೆಂದಿಗೂ ಉಳಿಯುವಂಥವು. ದಿ. ತ. ರಾ. ಸು. ಕಟ್ಟೀಮನಿ, ಚದುರಂಗ, ಅಡಿಗ, ನಿರಂಜನ ಮುಂತಾದ ಬರಹಗಾರರಲ್ಲಿಯೂ ನನಗೆ ಹೆಚ್ಚಿನ ವಿಶ್ವಾಸವಿದೆ."

ಚಿಕ್ಕ ಹಾಗೂ ಚೊಕ್ಕ ಸಂಸಾರ ಲೂಯಿಸ್ ಅವರದು. ಪ್ರಚಾರಪ್ರಿಯರಲ್ಲ. ಸದ್ದುಗದ್ದಲವಿಲ್ಲದ ಪ್ರಶಾಂತತೆ ಇವರ ಮನೆ ಹಾಗೂ ಮನ ಮಂದಿರದಲ್ಲೂ ರಾರಾಜಿಸುತ್ತದೆ. ಬಹು ಹಿಂದೆಯೇ ಕನ್ನಡ ನಾಡು ನುಡಿಗೆ ಇವರು ಸಲ್ಲಿಸಿದ ಸೇವೆ ಸ್ಮರಿಸುವಂತಹದು; ಗುರುತಿಸುವಂತಹದು. ✡

# ಮೊಸರಿಗೀಗ ಹೆಸರು

ಕೆ. ವೆಂಕಣ್ಣಾಚಾರ್

ಭಾರತೀಯರ ಆಹಾರದ ಪ್ರಮುಖ ವಸ್ತುವಾದ ಮೊಸರಿಗೆ ಈಗೀಗ ಪ್ರಪಂಚದಾದ್ಯಂತ ಮನ್ನಣೆ ದೊರಕಹತ್ತಿದೆ. ಮಧುರ ರುಚಿ ಹಾಗೂ ಆರೋಗ್ಯದಾಯಕ ಗುಣಗಳಿಂದಾಗಿ ಅದರ ಆಕರ್ಷಣೆ ದಿನೇ ದಿನೇ ಹೆಚ್ಚುತ್ತಿದೆ. ಗಟ್ಟಿ ಹಾಲನ್ನು ಕೆನೆಗಟ್ಟುವಂತೆ ಕಾಯಿಸಿ, ತಣಿಸಿ ಸ್ವಲ್ಪ ಸಿಹಿ ಮೊಸರು ಬೆರೆಸಿ ಕೆಲ ಗಂಟೆಗಳ ಕಾಲ ಇರಿಸಿದರೆ ಕೆನೆ ಮೊಸರು ಸಿದ್ಧವಾಗುತ್ತದೆ. ಮನೆಯಲ್ಲಿ ಹಾಲು - ಹೈನ ಸಮೃದ್ಧವಾಗಿರುವವರು ಮಾತ್ರ ಬಲ್ಲರು ಇಂಥ ಸವಿಯನ್ನು. ದಿ. ರಾ.ಶಿ. ಅವರು ಕೊಯಮತ್ತೂರು ಸಣ್ಣಕ್ಕಿಯ ಬಿಸಿ ಬಿಸಿ ಅನ್ನಕ್ಕೆ ಚಾಕುವಿನಿಂದ ಕೊಯ್ಯಬೇಕಾದಂಥ ಗಟ್ಟಿ ಮೊಸರನ್ನು ಕೊಂಚ ಉಪ್ಪಿನೊಂದಿಗೆ ಕಲಸಿ, ತಟ್ಟೆಯ ಕೊನೆಗೆ ಮಲೆನಾಡಿನ ಹವ್ಯಕರು ತಯಾರಿಸುವ ಮಾವಿನ ಮಿಡಿಯನ್ನೂ ಬೇಳೆಯ ಚರಟವನ್ನೂ ಇರಿಸಿ ಉಣ್ಣಲು ಕೂರಿಸಿದರೆ, ಎಂದು ವರ್ಣಿಸುತ್ತಾ ತಮ್ಮ ಓದುಗರ ಬಾಯಿ ನಿರೂರುವಂತೆ ಮಾಡಿದ್ದನ್ನು ಮರೆವುದು ಕಠಿಣ.

ಪ್ರಾಚೀನ ಕಾಲದಿಂದಲೂ ಭಾರತೀಯರಿಗೆ ಮೊಸರು ಪ್ರಿಯ ವಸ್ತುವಾಗಿತ್ತು. ಋಷಿ ಮುನಿಗಳ ಆಹಾರದಲ್ಲಿ ಅದು ಪ್ರಮುಖ ಭಾಗವಾಗಿರುತ್ತಿತ್ತು. ಅನೇಕ ಋಷಿಗಳು ಸೋಮರಸದೊಂದಿಗೆ ಮೊಸರನ್ನೂ ಸೇವಿಸುತ್ತಿದ್ದರಂತೆ. ಅಥರ್ವವೇದದ ಪರೀಕ್ಷಿತಿಗಾಥಾದಲ್ಲಿ ಬರುವ ಪರಿಕ್ಷಿತ ಪ್ರಸಂಗದಲ್ಲಿ ಆದೇ ತಾನೆ ಮನೆಗೆ ಬಂದ ಪತಿಗೆ ಸತಿಯು ಪ್ರಥಮೋಪಚಾರಗಳನ್ನು ಮಾಡಿ ಈಗ ಭುಂಜಿಸಲು ಮೊಸರು ತರಲೇ ಎಂದು ಕೇಳುತ್ತಾಳೆ. ಆ ಕಾಲದ ಸದಭಿರುಚಿಯ ಜನ ಮೊಸರು ಎಂಬ ಮಾತು ಕೇಳಿದರೇ ಹರ್ಷಪಡುತ್ತಿದ್ದರು ಎಂಬ ಸಂಗತಿ ಪ್ರಾಚಿನ ಸಾಹಿತ್ಯದಲ್ಲಿ ದೊರಕುತ್ತದೆ. ಆಯುರ್ವೇದದ ಆಧ್ವೈರ್ಯುಗಳು ಮೊಸರನ್ನು ಶಕ್ತಿದಾಯಕವೆಂದೂ ಪುಷ್ಟಿದಾಯಕವೆಂದೂ ವರ್ಣಿಸಿ ಅದು ಹಸಿವೆಯನ್ನು ಹೆಚ್ಚಿಸಿ ದೇಹವನ್ನು ಬೆಳೆಸುತ್ತದೆ ಎಂದಿದ್ದಾರೆ. ಕೆಲವು ವೈದ್ಯರು ರಾತ್ರಿ ಮೊಸರು ಸೇವಿಸುವುದನ್ನು ನಿಷೇಧಿಸಿದರೂ ಮತ್ತೆ ಕೆಲವರು ಅದಕ್ಕೆ ಕೊಂಚ ಸಕ್ಕರೆ ಬೆರೆಸಿ ಸೇವಿಸಬಹುದು ಎಂದಿದ್ದಾರೆ.

ಕ್ರಿಸ್ತಪೂರ್ವ ೭ನೇ ಶತಮಾನ ವಿದ್ವಾಂಸ ಪಾಣಿನಿಯು ಮೊಸರನ್ನು ಹಾಗೆಯೇ ಸೇವಿಸಿದರೂ, ಇತರ ವಸ್ತುಗಳ ಜೊತೆ ಬೆರೆಸಿ ಉಂಡರೂ ತರಕಾರಿಗಳ ಜೊತೆ ಸೇರಿಸಿ ತಿಂದರೂ, ವ್ಯಂಜನಗಳನ್ನಾಗಿ ಮಾಡಿ ಭುಂಜಿಸಿದರೂ ಪಾನೀಯಗಳ ರೂಪದಲ್ಲಿ ಕುಡಿದರೂ

ಪರಮ ಹಿತಕರವಾಗುತ್ತದೆ ಎಂದಿದ್ದಾನೆ. ಮನೋಹರವಾದ ಬಣ್ಣ, ವಾಸನೆ ಹಾಗೂ ರುಚಿ ಇರುವ ಮೊಸರನ್ನು ಮಂಗಳಕರವೆಂದು ಪರಿಗಣಿಸಿವುದರಿಂದ ಪಂಚಾಮೃತ ಅಭಿಷೇಕ ಹಾಗೂ ದೇವರ ನೈವೇದ್ಯಗಳಲ್ಲಿ ಅದನ್ನು ಬಳಸುತ್ತಾರೆ. ಪುತ್ರ ಸಂತಾನ ಪಡೆಯಲು ಗೋವುಗಳಿಗೆ ಬುತ್ತಿಯನ್ನು ತಿನ್ನಿಸುತ್ತಿದ್ದ ನಾರಿಯೊಬ್ಬಳ ಪ್ರಸಂಗ ಮಹಾ ಭಾಷ್ಯದಲ್ಲಿದೆ. ಭಾರತದ ಅನೇಕ ಭಾಗಗಳಲ್ಲಿ ಹರಿವಾಣದಲ್ಲಿ ಬಿಳಿ ಅನ್ನವನ್ನಿರಿಸಿ ಅದರ ಮೇಲೆ ಮೊಸರಿನ ಕರಣೆಗಳನ್ನೂ ಹೂಗಳನ್ನೂ ದೀಪಗಳನ್ನೂ ಇಟ್ಟು ಅವರತ ಮಂಗಲಂ ಎಂಬ ಆರತಿಯೆತ್ತುವ ಸಂಪ್ರದಾಯುವಿದೆ.

ಬಾಲಕೃಷ್ಣನಿಗೆ ಪ್ರಿಯವಾದ ವಸ್ತುಗಳಲ್ಲಿ ಕೆನೆಮೊಸರು ಒಂದು ಎಂಬ ವಿಚಾರ ಭಾಗವತದಲ್ಲಿದೆ. ಪ್ರಸಿದ್ಧ ನಾಟಕಕಾರ ಶೂದ್ರಕನ 'ಮೃಚ್ಛಕಟಿಕಾ' ನಾಟಕದಲ್ಲಿ ಉಜ್ಜಯಿನಿಯ ಸುಂದರ ಗಣಿಕೆ ವಸಂತಸೇನೆಯು ತನ್ನ ಮಹಲಿನ ಅತ್ಯುನ್ನತ ಭಾಗದಲ್ಲಿ ವಾಯಸಗಳಿಗಾಗಿ ಮೊಸರು ಕರಣೆಗಳ ಸಹಿತ ಅನ್ನವನ್ನಿರಿಸಿದಾಗ ಅವು ಅದನ್ನು ಸುಣ್ಣವೆಂದು ಬಗೆದು ಹಾರಿ ಹೋದ ಪ್ರಸಂಗದ ಬಣ್ಣನೆಯಿದೆ. ಮಹಾಕವಿ ಕಾಳಿದಾಸನ ಕಾವ್ಯದಲ್ಲಿ ಮೊಸರಿನೊಂದಿಗೆ ಏಲಕ್ಕಿ, ಲವಂಗ, ಕೇಸರಿ, ಸಕ್ಕರೆ, ಹಾಲು ಮೊದಲಾದುವನ್ನು ಬೆರೆಸಿ ತಯಾರಿಸುತ್ತಿದ್ದ ಸಿಹಾರಿಣಿ ಅಥವಾ ಸಿಖಾರಿಣಿ ಎಂಬ ಖಾದ್ಯ ವಸ್ತುವಿನ ಪ್ರಸ್ತಾಪವಿದೆ.

ಭಾರತದ ಕೋಗಿಲೆ ಸರೋಜಿನಿ ನಾಯಿಡು ಅವರ ಕವನವೊಂದರಲ್ಲಿ ಗೋಕುಲದ ರಾಧೆ ಕುಕ್ಕೆಯಲ್ಲಿ ಶ್ರಾವಣಮಾಸದ ಮೇಘಗಳಂತಹ ಬೆಳ್ಳನೆಯ ಮೊಸರುಳ್ಳ ಕುಡಿಕೆಗಳನ್ನು ಇರಿಸಿಕೊಂಡು ಮಥುರೆಗೆ ಮಾರಲು ಹೊರಟಿರುವುದೂ ಅಲ್ಲಿ ಆಕೆ ಕೃಷ್ಣನ ಧ್ಯಾನದಲ್ಲಿ ತಲ್ಲೀನಳಾಗಿ ಮೊಸರು ಎಂದು ಕೂಗುವ ಬದಲು ಗೋವಿಂದಾ ಎಂದು ಕೂಗುವುದೂ ಆಕೆಯ ಸಖಿಯರೆಲ್ಲಾ ನಗೆಯಾಡುವುದೂ ಮೊದಲಾದುವನ್ನು ಸುಂದರವಾಗಿ ವರ್ಣಿಸಲಾಗಿದೆ.

ಕೆಲವು ದಶಕಗಳ ಹಿಂದೆ ಮೊಸರನ್ನು ಉಪಯೋಗಿಸುತ್ತಲೇ ಇರದಿದ್ದ ಅಮೇರಿಕನ್



ಹಾಗೂ ಯುರೋಪಿಯನ್ ಜನರು ಈಗೀಗ ಅದರ ಬಗ್ಗೆ ತುಂಬಾ ಒಲವು ಬೆಳೆಸಿಕೊಂಡಿದ್ದಾರೆ. ಪ್ರಸ್ತುತ ಅಮೇರಿಕವೊಂದೇ ಪ್ರತಿ ವರ್ಷ ಸುಮಾರು ೨೫ ಕೋಟಿ ಕಿಲೋಗ್ರಾಮ್ ಮೊಸರನ್ನು ಸೇವಿಸುತ್ತದೆ ಎಂದು ವರದಿಯೊಂದು ತಿಳಿಸುತ್ತದೆ.

ಸುಪ್ರಸಿದ್ಧ ಅಮೇರಿಕನ್ ಆಹಾರ ವಿಜ್ಞಾನಿ ಜಾನ್ ಆಲ್ಫ್ರೆಡ್ ಮತ್ತು ರಾಬರ್ಟ್ ಹಾರ್ಗ್ರೋವ್ಸ್ ನಡೆಸಿದ ಸಂಶೋಧನೆಗಳು ಮೊಸರುಂಡ ಇಲಿಗಳ ಬೆಳವಣಿಗೆಯು ಹಾಲುಂಡ ಇಲಿಗಳ ಬೆಳವಣಿಗೆಗಿಂತ ಶೇ. ೧೫ರಿಂದ ಶೇ. ೨೦ರಷ್ಟು ಅಧಿಕವಾಗಿತ್ತು ಎಂದು ಸಾರಿವೆ. ಇದೇ ವಿಜ್ಞಾನಿಗಳು ನಡೆಸಿದ ಮತ್ತೊಂದು ಸಮೀಕ್ಷೆಯು ಆಫ್ರಿಕದ ಮಸಾಯಿ ಜನರ ದೃಢಕಾಯ ಹಾಗೂ ದೀರ್ಘಾಯುಷಿಗಳಿಗೆ ಅವರು ಹೆಚ್ಚಾಗಿ ಮೊಸರು ಸೇವಿಸುವುದೇ ಪ್ರಮುಖ ಕಾರಣ ಎನ್ನುತ್ತದೆ. ಮೊಸರಿನ ಬಳಕೆಯಿಂದ ಸಣ್ಣ ಕರಳು ಸ್ವಚ್ಛವಾಗುವುದೆಂದೂ ರಕ್ತದಲ್ಲಿನ ಕೊಲೆಸ್ಟರಾಲ್‌ನ ಪ್ರಮಾಣತಗ್ಗುವುದೆಂದೂ ಅದು ಹೇಳುತ್ತದೆ. ಅಮೇರಿಕದ ಲಿಂಕನ್ ವಿಶ್ವವಿದ್ಯಾನಿಲಯದ ಸಂಶೋಧನಾ ವರದಿಯು ಮೊಸರಿನಲ್ಲಿ ಕ್ಯಾಲೊರಿಗಳು ಕಡಿಮೆಯಿದ್ದು ಕ್ಯಾಲ್ಸಿಯಂ, ಪ್ರೋಟೀನ್, ವಿಟಮಿನ್ ಬಿ೧೨ ಮೊದಲಾದುವು ವಿಪುಲವಾಗಿರುವುದರಿಂದ ಪಥ್ಯ ಮಾಡುವವರಿಗೆ ಅನುಕೂಲಕರವಂತೆ. ಅದನ್ನು ಉಣ್ಣುವವರಿಗೆ ಕ್ಯಾನ್ಸರ್ ಭಯ ಶೇ. ೨೮ರಷ್ಟು ಕಡಿಮೆಯಾಗುತ್ತದೆ ಎನ್ನುತ್ತದೆ ಆ ವರದಿ. ಪ್ರಸಿದ್ಧ ರಶಿಯನ್ ಆಹಾರ ವಿಜ್ಞಾನಿ ಮೆಕಿನೋವ್ ಪ್ರಕಾರ ಯುಗೋಸ್ಲಾವಿಯನ್ನರ ಆರೋಗ್ಯ, ಘನ ದೇಹ ಹಾಗೂ ದೀರ್ಘಾಯುಷ್ಯಕ್ಕೆ ಅವರು ಮೊಸರನ್ನು ಧಾರಾಳವಾಗಿ ಬಳಸುವುದು ಪ್ರಮುಖ ಕಾರಣ ಎಂಬುದು ದೃಢಪಟ್ಟಿದೆ ಎಂದಿದ್ದಾರೆ. ಬಹುತೇಕ ಎಲ್ಲಾ ಡಾಕ್ಟರುಗಳೂ ಮಧುಮೇಹ ಇರುವವರಿಗೆ ಕೊಬ್ಬಿನ ಅಂಶ ತಗೆದ ಮೊಸರನ್ನು ಯಥೇಚ್ಛವಾಗಿ ಬಳಸಬಹುದೆಂದು ಶಿಫಾರಸು ಮಾಡುತ್ತಾರೆ.

ಸಾಮಾನ್ಯವಾಗಿ ಭಾರತೀಯರಿಗೆ ಮೊಸರು ಅಥವಾ ಮಜ್ಜಿಗೆ ಅನ್ನ ಉಣ್ಣದೆ ಊಟವೇ ಪೂರೈಸದು. ಕೆಲವೊಂದು ವ್ರತ ಹಾಗೂ ಸಂಪ್ರದಾಯುಗಳನ್ನು ಅನುಸರಿಸುವವರಿಗೆ ಮೊಸರು ಅವಲಕ್ಕಿಗಳೇ ಜೀವನಾಧಾರ. ಭಾರತೀಯರ ಪ್ರಮುಖ ತಿನುಸುಗಳಾದ ಜಿಲೇಬಿ, ಶ್ರೀಖಂಡ, ಪೈರೊಡೆ ಮೊದಲಾದುವುಗಳ ಸವಿಯಲ್ಲಿ ಮೊಸರಿನ ಪಾತ್ರ ಇರುವುದಷ್ಟೆ. ದೋಸೆ, ಇಡ್ಲಿ, ಉಪ್ಪಿಟ್ಟು, ಕೊಟ್ಟೆಕಡಬು, ಚಪಾತಿ ರೊಟ್ಟಿ, ಮುದ್ದೆ ಮೊದಲಾದುವುಗಳ ರುಚಿಯನ್ನು ಮೊಸರು ಸಾಕಷ್ಟು ಹೆಚ್ಚಿಸಬಲ್ಲದು. ಉದಯರಾಗವೊಂದರಲ್ಲಿ ತಾಯಿ ದೇವಕಿಯು ಬಾಲಕೃಷ್ಣನಿಗೆ 'ಬಿಸಿಯ ದೋಸೆಯ ಹೊಯ್ವೆ! ಮೊಸರ ಗಡ್ಡೆಯ ತೆಗೆವೆ! ಪಸುಳೆ ನಿನಗಾರೋಗಣೆ ಎನುವೆ!' ಎನ್ನುವಾಗ ಮಾತೃವಾತ್ಸಲ್ಯದ ಜೊತೆಗೆ ಮೊಸರಿನ ಮಾಧುರ್ಯವೂ ಹೊರಹೊಮ್ಮುತ್ತದೆ. ಅಲ್ಲವೆ? ✡

✡ ಈ ಲೋಕದಲ್ಲಿ ಹುಟ್ಟುವುದಕ್ಕೆ ಒಂದೇ ಮಾರ್ಗ. ಸಾಯುವದಕ್ಕೆ ಸಾವಿರ. ಅನೇಕ ಮಾರ್ಗಗಳಿಂದ ಅದು ಬರಬಹುದು! ಎಲ್ಲಿಂದಲೂ ಅದು ಬರಬಹುದು.

✡ ಬಲೆಯನ್ನೇ ಎತ್ತಿಕೊಂಡು ಹಾರಿಹೋಗುವ ಹಕ್ಕಿಗಳಂತೆ ಗಂಡಸರು ಲೀಲಾಜಾಲವಾಗಿ ಹೊರಟು ಹೋಗುತ್ತಾರೆ. ಹೆಂಗಸರು ಮಾತ್ರ ಅದೃಶ್ಯವಾದ ಪ್ರೀತಿಪಾಶದಲ್ಲಿ ತಮ್ಮ ಹೃದಯುಗಳನ್ನು ತೊಡಕಿಸಿಕೊಂಡು ಅಳುತ್ತಾ ಕುಳಿತಿರುತ್ತಾರೆ.

✡ ದೂರದಿಂದ ಭಯಂಕರವಾಗಿ ಕಂಡದ್ದು ನಿಜವಾಗಿಯೂ ಅಷ್ಟು ಭಯಂಕರವಾಗಿರುವುದಿಲ್ಲ, ಮರಣವಾದರೂ ಹಾಗೆಯೇ!

ವಿ. ಸ. ಖಾಂಡೇಕರ 'ಯಯಾತಿ'ಯಿಂದ ಸಂಗ್ರಹ : ವಿಜಯಾ ಶ್ರೀಧರ

# ಅಜ್ಞಾತ ವಿಜ್ಞಾನಿಯ ದುರಂತ ಕಥೆ

ವಿ ಕೃಷ್ಣಪ್ಪ

ಅದೊಂದು ಕಾಲವಿತ್ತು. ಆಸ್ಪತ್ರೆಯಲ್ಲಿ ಹೆರುವುದೆಂದರೆ ಸ್ತ್ರೀಯರಿಗೆ ಯಮದರ್ಶನ ವಾದಂತೆ. ಕಾರಣ ಆಗ ಹೆರುವುದಕ್ಕೆಂದು ಆಸ್ಪತ್ರೆಗೆ ಹೋದ ಒಂದು ಮೂರಾಂಶದಷ್ಟು ಮಹಿಳೆಯರು ಜೀವಂತವಾಗಿ ಹೊರಬರುತ್ತಿರ ಲಿಲ್ಲ. ನೂರಕ್ಕೆ ಮೂವತ್ತರಿಂದ ನಲವತ್ತರಷ್ಟು ಜನ ಬಾಣಂತಿ ಸೋಂಕುಜ್ವರ(ಟಾಕ್ಸೀಮಿಯಾ ಆಫ್ ದಿ ಪ್ರೆಗ್ನೆನ್ಸಿ)ದಿಂದ ಸಾವನ್ನಪ್ಪುತ್ತಿದ್ದರು. ಒಮ್ಮೆ ಈ ಜ್ವರ ಬಂದಿತೆಂದರೆ ನುರಿತ ವೈದ್ಯರೂ ಈ ಅಜ್ಞಾತ ರೋಗದ ಇದಿರು ಅಸಹಾಯಕರಾಗಿ ತಮ್ಮ ಕಣ್ಣ ಮುಂದೆಯೆ ಬಾಣಂತಿ ನರಳಿ ಸಾಯುವವದನ್ನು ನೋಡುತ್ತಿರಬೇಕಾಗಿತ್ತು. ಒಮ್ಮೊಮ್ಮೆ ಸೋಂಕು ಹರಡಿದ ಮಕ್ಕಳೂ ಮರಣಕ್ಕೀಡಾಗುತ್ತಿದ್ದರು.

ಇಂದು ಮಹಿಳೆ ಮಗುವನ್ನು ಹೆತ್ತು ನಗು ನಗುತ್ತಾ ಆಸ್ಪತ್ರೆಯಿಂದ ಹೊರಬರಬೇಕಾದರೆ, ಶಸ್ತ್ರಚಿಕಿತ್ಸೆ ನಡೆಸಿಕೊಂಡವರು ರೋಗಮುಕ್ತ ರಾಗಿ ಬದುಕಿರುತ್ತಿದ್ದರೆ ಅದಕ್ಕೆ ಕಾರಣ ಜೊಸೆಫ್ ಲಿಸ್ಟರನ ಎಸೆಪ್ಟಿಕ್ ಫ್ರಿಕಾಶನ್ (ನಿರ್ಜೀವಾಣುಕರಣ) ಅಲ್ಲ. ಅದಕ್ಕೂ ಹಿಂದೆ ಅಜ್ಞಾತನಾಗಿ ಬದುಕಿ ಜೀವಮಾನ ಪೂರ್ತಿ ಸಂಶೋಧನೆಯಲ್ಲಿ ಕಳೆದು ವೈದ್ಯಕೀಯ ರಂಗಕ್ಕೆ ಹೊಸ ಬೆಳಕು ತೋರಿಸಿ ಸದ್ದಿಲ್ಲದೆ ಮರೆಯಾದ ಡಾ. ಇಗ್ನಾಚ್ ಫಿಲಿಪ್ ಸ್ಯಾಮುವೆಲ್ ರೈಸ್, ಒಂದು ಸಮಾಜ, ಸಂಪ್ರದಾಯ ಹಾಗೂ ಪೊಳ್ಳು ಪ್ರತಿಷ್ಠೆಗಳಿಗಾಗಿ ಹೇಗೆ ಪ್ರತಿಭಾವಂತ ವಿಜ್ಞಾನಿಗಳನ್ನು ನಿರ್ದಯವಾಗಿ ಬಲಿ ತೆಗೆದು ಕೊಳ್ಳಬಹುದೆಂಬುವದಕ್ಕೆ ಡಾ. ಇಗ್ನಾಜ್ ಬಾಳೇ ನಿದರ್ಶನ.

## ದೃಢ ಸಂಕಲ್ಪ

೧೯ನೇ ಶತಮಾನದ ಆದಿಭಾಗದಲ್ಲಿ ವೈದ್ಯಕೀಯ ಪದ್ಧತಿ ಶೈಶವಾವಸ್ಥೆಯಲ್ಲಿದ್ದು ಅತ್ತ ಹಳೆಯ ಸಂಪ್ರದಾಯವನ್ನು ಬಿಡಲಾಗದೆ ಇತ್ತ ನವ್ಯ ಪಥವನ್ನೂ ಸೇರಲಾಗದೆ ಅಪ್ರಬುದ್ಧ ಅವಸ್ಥೆಯಲ್ಲಿ ನರಳುತ್ತಿದ್ದ ಕಾಲವಾಗಿತ್ತು. ಈ ಸಂದರ್ಭದಲ್ಲಿ ಹಂಗೇರಿ ದೇಶದ ರಾಜಧಾನಿ ಬುಡಾಪೆಸ್ಟ್‌ನಲ್ಲಿ ಜೋಸೆಫ್ ಮತ್ತು ಥೆರಿಸಾ ದಂಪತಿ ಮೂರನೆಯ ಮಗನಾಗಿ ಇಗ್ನಾಜ್ ಜನಿಸಿದ. ಈತನ ತಾಯಿಯೇ ಬಾಣಂತಿತನದಲ್ಲಿ ಸೋಂಕು ಜ್ವರಕ್ಕೆ ತುತ್ತಾಗಿ ಬದುಕಿದ್ದಳು. ವಕೀಲಿ ವ್ಯಾಸಂಗ ಮಾಡುತ್ತಿದ್ದ ಇಗ್ನಾಜ್ ವೈದ್ಯಕೀಯ ಸೇರಿದ್ದೂ ಒಂದು ಆಕಸ್ಮಿಕ. ಆಸ್ಟ್ರಿಯದ ಆಗಿನ ಪ್ರಸಿದ್ಧ ವಿಯೆನ್ನಾ ಮೆಡಿಕಲ್ ಕಾಲೇಜಿನ ಡಾ. ಬೋಯರ್ ಎಂಬ ಪ್ರಾಧ್ಯಾಪಕರ ಪ್ರವಚನವನ್ನು ಕೇಳಿ ಪ್ರಭಾವಿತನಾದ ಈತನಿಗೆ ವೈದ್ಯಕೀಯ ವಿಜ್ಞಾನ ಸೂಜಿಗಲ್ಲಿನಂತೆ ಆಕರ್ಷಣೆಯ ವಸ್ತುವಾಯಿತು. ನಂತರ ಇಗ್ನಾಜ್ ತನ್ನ ವಕೀಲಿ ವ್ಯಾಸಂಗ ತ್ಯಜಿಸಿ ವೈದ್ಯಕೀಯ ಕಾಲೇಜಿಗೆ ಸೇರಿದ.

ವೈದ್ಯವಿಜ್ಞಾನಕ್ಕೂ ತನಗೂ ಪೂರ್ವಜನ್ಮದ ನಂಟೋ ಎಂಬಂತೆ ಹಗಲಿರುಳು ಅತ್ಯಾಸಕ್ತಿ

ಯಿಂದ ಅಭ್ಯಾಸದಲ್ಲಿ ನಿರತನಾದ ಕಾಲೇಜಿನ ಪ್ರಾಚಾರ್ಯರುಗಳಿಂದ ಅತ್ಯಂತ ಮೇಧಾವಿ ವಿದ್ಯಾರ್ಥಿ ಎನಿಸಿಕೊಂಡ. ಒಂದು ಹಂತದ ವ್ಯಾಸಂಗ ಮುಗಿದ ಬಳಿಕ ತನಗೆ ಇಷ್ಟವಾದ ಪ್ರಸೂತಿ ಶಾಸ್ತ್ರವನ್ನು ಐಚ್ಛಿಕ ವಿಷಯು-ವನ್ನಾಗಿಸಿ ಓದು ಮುಂದುವರಿಸಿದ. ಅಂದಿನ ಪ್ರತಿಯೊಬ್ಬ ಗರ್ಭಿಣಿಯ ಮುಖದಲ್ಲಿ ಅಚ್ಚೊತ್ತಿದಂತಿದ್ದ ಮರಣ ಛಾಯೆಯನ್ನು ಕಂಡು ಮರುಗಿದ. ವೈದ್ಯನ ಎದುರೇ ಸೋಂಕು ತಗುಲಿದ ರೋಗಿ ಅನ್ನಾಹಾರಗಳಿಲ್ಲದೆ ಎರಡು ಮೂರು ದಿನ ನರಳಿ ಹೃದಯವಿದ್ರಾವಕ ರೀತಿಯಲ್ಲಿ ಸಾವನ್ನಪ್ಪುವ ರೀತಿಯನ್ನು ಕಂಡು ಇದನ್ನು ಹೇಗಾದರೂ ಕೊನೆಗಾಣಿಸಬೇಕೆಂದು ದೃಢ ಸಂಕಲ್ಪ ಮಾಡಿದ. ಆಗಿನ ಕಾಲದ ವಿದ್ಯಾಭ್ಯಾಸ ಕ್ರಮದಂತೆ, ಯಾವುದೇ ರೋಗಾಧ್ಯಯನಕ್ಕೆ ಅದೇ ರೋಗಪೀಡಿತನಾಗಿ ಮೃತಪಟ್ಟವನ ಶವ ವಿಚ್ಛೇದಿಸಿ ರೋಗಾತ್ತ ಅಂಗ ಪ್ರತ್ಯಂಗಗಳನ್ನು ಸ್ವತಃ ನೋಡಿಯಷ್ಟೆ ತಿಳಿಯಬೇಕಾಗಿತ್ತು. ಅದಕ್ಕಾಗಿ ಡಾ. ಇಗ್ನಾಜ್ ಫಿಲಿಪ್ ಬಾಣಂತಿ ಜ್ವರ ಪೀಡಿತ ನೂರಾರು ಶವಗಳನ್ನು ಅಭ್ಯಸಿಸಿದ.

## ಸತ್ಯ ಬಯಲು

ಮುಂದೆ ಅದೇ ವಿಯೆನ್ನಾ ಮೆಡಿಕಲ್ ಕಾಲೇಜಿನಲ್ಲಿ ಅಧ್ಯಾಪಕನಾಗಿ ಸೇರಿದಾಗಲೂ ಬಾಣಂತಿ ಜ್ವರ ಹೇಗೆ ಬರುತ್ತದೆಯೆಂಬುದು ಒಗಟಾಗಿಯೇ ಉಳಿದಿತ್ತು. ಆತ ಲಭ್ಯವಿದ್ದ ಪುಸ್ತಕಗಳನ್ನೆಲ್ಲಾ ಓದಿದ. ಸಹ ಅಧ್ಯಾಪಕರೊಡನೆ ಹಾಗೂ ಹಿರಿಯ ವೈದ್ಯರೊಡನೆ ಚರ್ಚಿಸಿದ. ಒಬ್ಬೊಬ್ಬರಿಂದ ಬಂದಿದ್ದು ಒಂದೊಂದು ಊಹಾತ್ಮಕ ಕಾರಣ. ಎಲ್ಲರ ಉತ್ತರವೂ ಅಸಮರ್ಪಕ. ಕೆಲವರಂತೂ ಅದೊಂದು ಕಾರಣವಿಲ್ಲದ ಅದ್ಭುತ ರೋಗ ಎಂದು ಬಣ್ಣಿಸಿದರು. ಆ ಕುರಿತೇ ಚಿಂತಿಸುತ್ತಿದ್ದ ಡಾ. ಇಗ್ನಾಜನ ಗಮನವನ್ನು ಆಕಸ್ಮಿಕವಾಗಿ ಒಂದು ವಿಷಯ ಸೆಳೆಯಿತು. ಅಲ್ಲಿಯ ಆಸ್ಪತ್ರೆಯು A ಹಾಗೂ B ಎಂಬ ಎರಡು ಪ್ರತ್ಯೇಕ ಹೆರಿಗೆ ವಿಭಾಗಗಳನ್ನು ಒಂದರಲ್ಲಿ ಮಾತ್ರ ಸಾವಿನ ಪ್ರಮಾಣ ಶೇಕಡಾ ನಲ್ವತ್ತರಿಂದ ಅರ್ವತ್ತರಷ್ಟಿದ್ದರೆ ಇನ್ನೊಂದರಲ್ಲಿ ಬರೇ ಶೇಕಡಾ ಹತ್ತರೊಳಗೆ. ಈ ಒಗಟಿನ ಕಾರಣವನ್ನು ಅನ್ವೇಷಿಸುತ್ತಾ ಹೋದ ಇಗ್ನಾಜ್ ಒಂದು ಭೀಕರ ಸತ್ಯವನ್ನು ಕಂಡ. ಅದು ಯಾವುದೆಂದರೆ ಜೀವರಕ್ಷಕ ವೈದ್ಯರೇ ಜೀವಭಕ್ಷಕ ಕಾರ್ಯ ಮಾಡುತ್ತಿದ್ದುದು. ಮರಣ ಪ್ರಮಾಣ ಅಧಿಕವಿದ್ದ ವಿಭಾಗಕ್ಕೆ ವಿದ್ಯಾರ್ಥಿಗಳು ಅಧ್ಯಯನಕ್ಕಾಗಿ ಸ್ವತಃ ಗರ್ಭಿಣಿಯ ಪರೀಕ್ಷೆ ಮಾಡುತ್ತಿದ್ದರು. ತಮ್ಮ ಯಾವ ಕೈಯಿಂದ ಸೋಂಕು ಜ್ವರಪೀಡಿತ ಶವಪರೀಕ್ಷೆ ಮಾಡುತ್ತಿದ್ದರೋ ಅದೇ ಕೈಯನ್ನು ಸ್ವಚ್ಛಗೊಳಿಸದೆ ನೇರವಾಗಿ ಗರ್ಭಿಣಿ ಪರೀಕ್ಷೆ ಮಾಡುತ್ತಿದ್ದರು. ಮುಂದೆ ಆ ಗರ್ಭಿಣಿ ಜ್ವರದಿಂದ ಸಾಯುತ್ತಿದ್ದಳು. ಈ ರೀತಿ ವೈದ್ಯರೇ ರೋಗವನ್ನು ಆರೋಗ್ಯವಂತರಿಗೆ ರವಾನಿಸಿ ಯಮಕಿಂಕರರಂತೆ ವರ್ತಿಸುತ್ತಿದ್ದರು. ಸಾವಿನ ಪ್ರಮಾಣ ಕಡಿಮೆ ಇದ್ದ ವಿಭಾಗದಲ್ಲಿ ವಿದ್ಯಾರ್ಥಿಗಳು ಪ್ರವೇಶಿಸದೆ ಬರೇ ದಾದಿಯರು ನೋಡಿಕೊಳ್ಳುತ್ತಿದ್ದರು. ಅವರು ಶವವಿಚ್ಛೇದನ ಮಾಡಬೇಕಿರಲಿಲ್ಲ.

## ವ್ಯರ್ಥ ಪ್ರಯತ್ನ

ಇದರ ಅರಿವಾದೊಡನೆ ಇಗ್ನಾಜ್ ಹೌಹಾರಿದ. ಮರುದಿನದಿಂದಲೇ ವಾರ್ಡಿನಲ್ಲಿ ಸ್ವಚ್ಛತೆಯ ನಿಯಮವನ್ನು ಕಟ್ಟುನಿಟ್ಟಾಗಿ ಅಳವಡಿಸಿದ. ಶವವಿಚ್ಛೇದನಾ ಬಳಿಕ ಕ್ಲೋರಿನ್ ದ್ರಾವಣದಲ್ಲಿ ಕೈ ಸ್ವಚ್ಛಗೊಳಿಸಿ ಗರ್ಭಿಣಿ ಪರೀಕ್ಷೆ ಮಾಡುವಂತೆ ವಿದ್ಯಾರ್ಥಿಗಳಿಗೆ ಹೇಳಿದ. ಸಹಾಧ್ಯಾಪಕರನ್ನು ಹಾಗೆ ವಿನಂತಿಸಿದ. ವಾರ್ಡಿನಲ್ಲಿ ಕ್ಲೋರಿನ್ ಹೊಗೆ ಹಾಕಿದ. ಇದನ್ನೆಲ್ಲ ಕಂಡ ಸಹವರ್ತಿಗಳು ಇದನ್ನು ಹುಚ್ಚುತನದ ಪರಮಾವಧಿ ಎಂದು ಅಣಕವಾಡಿದರೂ,

ಯಾವುದಕ್ಕೂ ಕಿವಿಗೊಡದೆ ಇಗ್ನಾಜ್ ಹಠ ಸಾಧಿಸಿ ಆ ವರ್ಷ ಸಾವಿನ ಪ್ರಮಾಣವನ್ನು ಶೇಕಡಾ ನಲ್ವತ್ತರಿಂದ ಶೇಕಡಾ ಒಂದಕ್ಕೆ ಇಳಿಸಿದ! ಇಗ್ನಾಜನಿಗೆ ಸಂತೋಷದಿಂದ ಹೃದಯ ತುಂಬಿ ಬಂದರೂ ಅದು ಕ್ಷಣಿಕವಾಗಿತ್ತು. ಕಾರಣ ಸಂಪ್ರದಾಯವಾದಿ ಹಿರಿಯ ವೈದ್ಯರು ಪ್ರತ್ಯಕ್ಷವನ್ನು ಕಂಡರೂ ನಂಬದೆ ಹಿಂದಿನ ಪ್ರವೃತ್ತಿ ಮುಂದುವರಿಸಿದರು. ಸ್ವಪ್ರತಿಷ್ಠೆಯ ಶ್ರೀಮಂತ ವಿದ್ಯಾರ್ಥಿಗಳೂ ಈತನ ನಿಯಮ ಉಲ್ಲಂಘಿಸತೊಡಗಿದರು. ಸಾವಿನ ಪ್ರಮಾಣ ಪುನಃ ಏರಿತು. ಹೆಂಗಳೆಯರ ಆರ್ತನಾದ ಮುಗಿಲು ಮುಟ್ಟಿತು. ಅಸಹಾಯಕನಾದ ಇಗ್ನಾಜ್ ಬಾರಿ ಬಾರಿ ವಿನಂತಿಸಿದ ಆದರೆ ಬೋರ್ಗಲ್ಲ ಮೇಲೆ ಮಳೆ ಸುರಿದಂತೆ ವ್ಯರ್ಥ ಪ್ರಯತ್ನವಾಯಿತು.

ಹತಾಶನಾದ ಡಾ. ಇಗ್ನಾಜ್ ವಿಯೆನ್ನಾ ಕಾಲೇಜಿಗೆ ರಾಜೀನಾಮೆ ನೀಡಿ ಸ್ವದೇಶವಾದ ಹಂಗೇರಿಗೆ ವಾಪಸಾದ. ಹುಟ್ಟೂರಲ್ಲಿ ಸ್ವತಃ ಒಂದು ಖಾಸಗಿ ರುಗ್ಣಾಲಯ ತೆಗೆದ. ೨೦೦ ಹಾಸಿಗೆ ಉಳ್ಳ ಹೆರಿಗೆ ವಿಭಾಗ ಆರಂಭಿಸಿ ತಾನು ಕಂಡ ಸತ್ಯವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದ. ಎಲ್ಲರೂ ಬೆರಳು ಕಚ್ಚುವಂತೆ ಸಾವಿನ ಪ್ರಮಾಣ ಶೇಕಡಾ ೦ ಕ್ಕೆ ಇಳಿಯಿತು. ಈ ಅದ್ಭುತ ಸಾಧನೆಯ ಜೊತೆಗೆ ಬಾಣಂತಿಯರಲ್ಲಿ ಹೊಸ ಬಾಳಿನ ಭರವಸೆ ಮೂಡಿಸಿದ. ತಾನು ನಡೆಸಿದ ಸಂಶೋಧನೆಯ ಪ್ರತಿಯೊಂದು ವಿವರವನ್ನು ಬರೆದು ಪುಸ್ತಕ ಪ್ರಕಟಿಸಿದ. ಬಹಳಷ್ಟು ನಿರೀಕ್ಷಣೆಯಿಂದ ಇದ್ದ ಇಗ್ನಾಜನಿಗೆ ಭಾರೀ ನಿರಾಸೆ ಕಾದಿತ್ತು. ಹೆಚ್ಚಿನ ವೈದ್ಯರು ಸೋಂಕು ಜ್ವರಕ್ಕೆ ಅವನು ಕೊಟ್ಟಿದ್ದು ಕಾರಣವಲ್ಲವೆಂದು ಜರೆದು ಅಣಕವಾಡಿದ್ದರು. ಪ್ರಯತ್ನ ಬಿಡದ ಆತ ಮತ್ತೊಮ್ಮೆ ಪ್ರಸಿದ್ಧ ಪತ್ರಿಕೆ ಒಂದರಲ್ಲಿ ಲೇಖನವನ್ನು ಪ್ರಕಟಿಸಿದ. ಆದರೆ ಪ್ರಕಟಿಸಿದ ಪತ್ರಿಕಾ ಸಂಪಾದಕನೇ (ಆತನೂ ವೈದ್ಯ) ತನ್ನ ಸಂಪಾದಕೀಯದಲ್ಲಿ ಇದೊಂದು ಹುಚ್ಚು ತರ್ಕವೆಂದು ತೆಗಳಿ ಹುರುಳಿಲ್ಲದ ವಾದವನ್ನು ನಂಬಿ ಮೋಸ ಹೋಗಬಾರದೆಂದು ವಿನಂತಿಸಿಕೊಂಡಿದ್ದ!

## ದುರಂತದ ದಾರಿಯಲ್ಲಿ

ಯಾವ ರೀತಿಯಲ್ಲೂ ಜನರನ್ನು ನಂಬಿಸಲಾಗದೆ ಇಗ್ನಾಜ್ ಗಾಸಿಗೊಂಡ. ವೈದ್ಯರ ಸಮಾಜ ತನಗೆ ಮಾಡುವ ಮೋಸವನ್ನು ತಿರಸ್ಕಾರವನ್ನು ನೋಡುತ್ತಾ ಹೋದಂತೆ ಆತನ ಮನೋಸ್ವಾಸ್ಥ್ಯ ಹಾಳಾಗತೊಡಗಿತು. ತನಗೆ ಹುಚ್ಚು ಹಿಡಿಯುತ್ತಿದೆ ಎಂಬ ಸುಳಿವು ಸಿಕ್ಕೊಡನೆ ತನ್ನನ್ನು ಕೊನೆಗಾಣಿಸುವ ನಿರ್ಧಾರ ಕೈಗೊಂಡ. ಅದಕ್ಕಾಗಿ ಆತ ಬಯಸಿದ ದಾರಿಯೂ ಅಷ್ಟೇ ದಾರುಣ. ತಾನೇ ಸ್ವತಃ ಕೈ ಬೆರಳಿಗೆ ಗಾಯ ಮಾಡಿಕೊಂಡು ಅದನ್ನು ಬಾಣಂತಿ ಸೋಂಕು ಜ್ವರ ಪೀಡಿತ ಶವದೊಳಗೆ ಅದ್ದಿ ತೆಗೆದ. ಅವನನ್ನೂ ಸೋಂಕು ಬಿಡಲಿಲ್ಲ. ಮೂರು ದಿನ ಯಮಯಾತನೆ ಪಟ್ಟು ೧೮೬೫ ಆಗಸ್ಟ್ ೧೩ರಂದು ಮರಣವನ್ನಪ್ಪಿದ. ಇದು ಇಡೀ ಜಗತ್ತು ತಲೆ ತಗ್ಗಿಸುವಂತೆ ಮಾಡಿದ ಘೋರ ಕೃತ್ಯ ಎನಿಸಿತು.

ಮುಂದೆ ಕೆಲವೇ ವರ್ಷದೊಳಗೆ ಹಂಗೇರಿ ದೇಶಕ್ಕೆ ತನ್ನ ಸುಪುತ್ರನ ಹಿರಿಮೆಯ ಅರಿವಾಯಿತು. ಆದರೆ ಅದಾಗಲೇ ಆಸ್ಟ್ರಿಯಾ ಹಾಗೂ ಜರ್ಮನಿ ದೇಶಗಳೂ ಡಾ. ಇಗ್ನಾಜ್ ಫಿಲಿಪ್ ಸ್ಯಾಮುವೆಲ್ ರೈಸ್ ತಮ್ಮವನೆಂದು ಕಚ್ಚಾಡಿಕೊಳ್ಳುತ್ತಿದ್ದವು. ಹಂಗೇರಿ ಆತನ ಗೌರವಾರ್ಥ ೧೯೦೬ ರಲ್ಲಿ ಒಂದು ಪ್ರತಿಮೆ ನಿರ್ಮಿಸಿ ಸ್ಥಾಪಿಸಿತು. ಆದರೇನು ಕಾಣಬೇಕಾದುದನ್ನು ಪಾಪ ಆತ ಕಾಣಲೇ ಇಲ್ಲ. ✡



# ಝೀಬ್ರಾ ಮತ್ತು ಕತ್ತೆಯ ಕೂಡು ಸಂತಾನ

# ಝೀತ್ತೆ

ಭಿನ್ನ ಜಾತಿಯ ಪ್ರಾಣಿಗಳ 'ಮಿಲನ'ದಿಂದ ಹೊಸದೊಂದು ಪ್ರಾಣಿಯನ್ನು ಹುಟ್ಟಿಸುವ ಪ್ರಯೋಗಗಳು ಅನೇಕ ಕಡೆ ನಡೆದುದುಂಟು.

ಸಿಂಹ ಮತ್ತು ಹುಲಿಗಳ ಸಂಯೋಗದಿಂದ 'ಸಿಂಹುಲಿ' ಎಂಬ ಹೊಸ ಪ್ರಾಣಿಯು ಹುಟ್ಟಿತು. ಅದಂತೆಯೇ ಝೀಬ್ರಾ ಮತ್ತು ಕತ್ತೆಯ ಕೂಡು ಸಂತಾನ 'ಝೀತ್ತೆ' ಎಂಬ ಪ್ರಾಣಿ. ಇಂಗ್ಲೀಷಿನಲ್ಲಿ Zonkey ಎಂದು ಕರೆಯಲ್ಪಡುವ ಈ ಹೊಸ ಪ್ರಾಣಿಯು ದೇಹ ರಚನೆ ಝೀಬ್ರಾ ಮತ್ತು ಕತ್ತೆಯ ದೇಹ ರಚನೆಯನ್ನೇ ಹೋಲುತ್ತದೆ. ಕತ್ತೆಗಿಂತ ಸ್ವಲ್ಪ ಎತ್ತರದ ಈ ಪ್ರಾಣಿಯ ಕಾಲುಗಳ ಮೇಲೆ, ಝೀಬ್ರಾಕ್ಕಿರುವಂತೆ, ಪಟ್ಟೆಗಳಿವೆ.

ಚಿತ್ರದಲ್ಲಿರುವ ಝೀತ್ತೆ ಜಗತ್ತಿನಲ್ಲಿರುವ ಐದೇ ಐದರಲ್ಲಿ ಒಂದು; ಜೆರುಸಲೇಂ ಬಿಬ್ಲಿಕಲ್ ಝೂದಲ್ಲಿದೆ. ಇದು ಗಂಡು.

ಈ ಝೀತ್ತೆಯ ಹುಟ್ಟು ಪ್ರಯೋಗಾತ್ಮಕವಾಗಿ ನಡೆದುದಲ್ಲ; ಅನಿವಾರ್ಯವಾಗಿ ಆದಂಥದು. ಈ ಪ್ರಾಣಿ ಸಂಗ್ರಹಾಲಯದಲ್ಲಿರುವ ಹೆಣ್ಣು ಝೀಬ್ರಾಕ್ಕೊಂದು ಗಂಡು ಹುಡುಹುಡುಕಿ ಬೇಸತ್ತರು ಅಲ್ಲಿಯ ಕ್ಯುರೇಟರ್. ಆದರೆ ಜತೆಗಾರನಿಲ್ಲದೆ ಆ ಹೆಣ್ಣು ಪಟ್ಟ ಸಂಕಟವನ್ನು ಅವರಿಗೆ ಕಣ್ಣಾರೆ ನೋಡಲಾಗಲಿಲ್ಲ. ಅವರು ಅದಕ್ಕಾಗಿ ಕಂಡುಕೊಂಡ ಪರಿಹಾರವೆಂದರೆ ಕತ್ತೆಯೊಂದಿಗೆ ಆ ಹೆಣ್ಣು ಸಂಸಾರ ನಡೆಸುವಂತೆ ಮಾಡಿದರು.

ಆ ಹೆಣ್ಣು ಗರ್ಭ ಧರಿಸಿತು.

ಈ ಝೀತ್ತೆ ಈಗ ತನ್ನ ತಾಯಿಗೆ ಸಂಗಾತಿ; ಅದೂ ಆಕೆಗೆ ಯೋಗ್ಯ ಜತೆಗಾರ ಸಿಕ್ಕುವ ವರೆಗೆ ಮಾತ್ರ. ಪರೀಕ್ಷೆಗಳಿಂದಕಂಡು ಬಂದ ಒಂದಂಶವೆಂದರೆ ಕತ್ತೆ-ಕುದುರೆಗಳ ಕೂಡು ಸಂತಾನವಾದ ಹೇಸರಗತ್ತೆಯಂತೆಯೆ ಇದು ಕೂಡ ನಪುಂಸಕ.

(ಕೃಪೆ: ನ್ಯೂಸ್ ಫ್ರಾಮ್ ಇಸ್ರೇಲ್)

# ಈಗಿನ ಯುವಜನರ ಒರಟು ವರ್ತನೆಗೆ ಕಾರಣ?

ದೊಡ್ಡರಂಗೇಗೌಡ

ಈ ಪ್ರಶ್ನೆಗೆ ಉತ್ತರ ಅಷ್ಟು ಸುಲಭವೇನಲ್ಲ. ಇದನ್ನು ಪತ್ತೆಹಚ್ಚಬೇಕಾದವರು ಸಮಾಜ ವಿಜ್ಞಾನಿಗಳು. ಹಾಗೆಂದು ಬುದ್ಧಿಜೀವಿಗಳು ಕೈ ಕಟ್ಟಿ ಕೂಡಬೇಕಾಗಿಲ್ಲ ಅಥವಾ ತಮ್ಮ ಪಾಲಿನ ಚಿಂತನ ಮಂಥನಗಳ ಜವಾಬ್ದಾರಿಯುತ ಹೊಣೆಗಾರಿಕೆಯನ್ನು ತಪ್ಪಿಸಿ ಕೊಂಡು ಆರಾಮಾಗಿರಬೇಕಾಗಿಲ್ಲ. ಪೋಷಕರಿಗೆ ಈ ಪ್ರಶ್ನೆ ತಲೆ ತಿನ್ನುತ್ತಿದೆ, ಶಿಕ್ಷಣ ತಜ್ಞರಿಗೆ ಸವಾಲಾಗುತ್ತಿದೆ. ಅಧ್ಯಾಪಕ ವರ್ಗಕ್ಕಂತೂ ನಿತ್ಯ ನಿತ್ಯವೂ ಕ್ಷಣ ಕ್ಷಣವೂ ಎದುರು ಅಲೆಗಳ ವಿರುದ್ಧ ಈಜಿದ ಅನುಭವವಾಗುತ್ತಿದೆ. (ಪ್ರವಾಹದ ವಿರುದ್ಧ ಸೆಣಸುವವರ ಪಾಡು... ನಾಯಿ ಪಾಡು!)

ಈ ಸಮಸ್ಯೆಯನ್ನು ಬಿಡಿಸಲು ಒಳ ಹೊಕ್ಕರೆ ಕಣ್ಣಿಗೆ ರಾಚುವಷ್ಟು ಮಾಹಿತಿಗಳು ಸಿಗುತ್ತವೆ. ಪ್ರಥಃಕರಿಸುವವರು ಬೇಕಷ್ಟೆ. ವಿಶ್ಲೇಷಿಸಿ ಪರಿಹಾರ ಕಂಡುಹಿಡಿಯುವ ಸಮಾಜ ಸುಧಾರಕರು ಬೇಕಷ್ಟೇ ಅಂಥ ನಿಸ್ವಾರ್ಥ ಸಮಾಜ ಸುಧಾರಕರು ಈಗಿದ್ದಾ-ರೆಯೇ? ದೇಶದ ಮೂಲೆ ಮೂಲೆಯಲ್ಲಿ ತರುಣರ ತಪ್ಪು ವರ್ತನೆಗಳು ಬೆಳಗಾದರೆ ಅಲ್ಲಿ ಇಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲೇ ಇರುತ್ತವೆ; ಯಾಕೆ ಹೀಗೆ ಹಿರಿಯರು ಇದನ್ನು ಕಂಡು ಕಟುವಾಗಿ ಟೀಕಿಸುವುದುಂಟು; ಹಾಗಾದರೆ ಅವರ ಕಾರ್ಯ ಅಷ್ಟೇನೆ? ಮೊದಲನೆಯದು, ಹಿಂದೆಂದಿಗಿಂತಲೂ ಹೆಚ್ಚಾಗಿರುವ ಜನಸಂಖ್ಯಾ ಸ್ಫೋಟ; ಎರಡನೆ-ಯದು, ಶಾಲೆ ಕಾಲೇಜುಗಳಲ್ಲಿ ದೊರೆಯುವ ಅರ್ಥಶೂನ್ಯ ಶಿಕ್ಷಣ; ಮೂರನೆಯದು, ಪದವಿ ಪತ್ರಗಳಿಗೆ ಯಾವುದೇ ಬೆಲೆ ಇಲ್ಲದೆ ಇರುವುದು; ನಾಲ್ಕನೆಯದು, ಯಂತ್ರ ನಾಗರಿಕತೆಯತ್ತ ನಡೆದಿರುವ ಸಮಾಜ; ಐದನೆಯದು ವೈಯಕ್ತಿಕ ಪ್ರತಿಭೆಗಳನ್ನು ಗುರುತಿಸದೆ ಕಡೆಗಣಿಸಿರುವುದು; ಆರನೆಯದು, ಮನೆ ಯಲ್ಲಿನ ವಾತಾವರಣ; ಏಳನೆಯದು ರಾಜಕಾರಣಿಗಳ ಹಸ್ತಕ್ಷೇಪ.

ಈ ಎಲ್ಲವೂ ಒಂದಲ್ಲ ಒಂದು ರೀತಿ ಪೂರಕವೇ ಆಗಿವೆ. ಇವುಗಳ ಜೊತೆಗೆ ಪಟ್ಟಿ ಮಾಡಲಾಗದ ವೈಯಕ್ತಿಕ ಕಾರಣಗಳೂ ತಳುಕು ಹಾಕಿಕೊಂಡು ಪರಿಸರದ ಕಲುಷಿತ ಗುಣಕ್ಕೆ ನೆರವಾಗಿವೆ.

ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಅರೆಗಳಿಗೆ ಯಾವುದಾದರೂ ವಠಾರದಲ್ಲೋ ಬೀದಿಯಲ್ಲೋ ರಸ್ತೆಯಲ್ಲೋ ಆಟದ ಬಯಲಲ್ಲೋ ಶಾಲೆಗಳ ಅಥವಾ ಚಿತ್ರಮಂದಿರಗಳ ಮುಂದೆಯೇ ನಿಂತರೆ ನಮಗೆ ಗೊತ್ತಾಗುತ್ತದೆ. ಎಲ್ಲೆಲ್ಲೋ ಯುವ ಪೀಳಿಗೆಯ ತಲೆಗಳು, ತಲೆಗಳು, ತಲೆಗಳ ಪ್ರವಾಹ. ಅಗಣಿತ ಜನಸಂಖ್ಯಾ ಸ್ಫೋಟ, ಇದರಿಂದ ಯುವಜನರಲ್ಲಿ ಅನಾಥ ಪ್ರಜ್ಞೆ ಹೆಚ್ಚಲು ಕಾರಣವಾಗಿದೆ. 'ಅಸಂಖ್ಯ ಜನರ ನಡುವೆ ತಾವೆಲ್ಲ ಸೊನ್ನೆ' ಎಂಬ ಭಾವನೆ.

ಈಗಿನ ಯುವಜನರಿಗೆ ಎಲ್ಲೋ ಒಂದು ಕಡೆ ಪ್ರಬಲವಾಗಿ ಕೆಲವು ಅಭಿಪ್ರಾಯಗಳು ಬೇರೂರಿದ ಹಾಗೆ ಕಾಣುತ್ತದೆ. ಇಂದಿನ ಶಿಕ್ಷಣದ ಬಗೆಗೆ ಅವರ ಆಸಕ್ತಿ ಇಲ್ಲ. ಅವರು ಕಾಳಜಿ ವಹಿಸುವಂತೆ ನಮ್ಮ ಪಠ್ಯಕ್ರಮಗಳಲ್ಲಿ ಬದಲಾವಣೆಗಳೂ ಇಲ್ಲ. ಪಠ್ಯಪುಸ್ತಕಗಳ ನೇಮಕದಲ್ಲೂ ಭ್ರಷ್ಟತೆ ತಾಂಡವವಾಡುತ್ತಿದೆ. ಇವೆಲ್ಲದರ ಮಾರಕ ಪರಿಣಾಮ ವಿದ್ಯಾರ್ಥಿ ತರುಣ ಸಮೂಹದ ಮೇಲೆ. ಇನ್ನು ಪದವಿ ಪತ್ರಗಳನ್ನು ನೋಡಿ ಕೆಲಸವನ್ನು ಯಾರೂ ಕೊಡುತ್ತಿಲ್ಲ. ನೌಕರಿಯ ನೇಮಕಾತಿಗಳಲ್ಲಿ ನಡೆಯುವ ನಾಟಕವೆ ಬೇರೆ. ಕಾಲೇಜುಗಳಲ್ಲಿ ಕಲಿಯುವುದೇ ಒಂದು. ವಾಸ್ತವ ಜೀವನದಲ್ಲಿ ವ್ಯಕ್ತಿಗೆ ಅಗತ್ಯವಾಗಿರುವುದೇ ಇನ್ನೊಂದು! ಬದುಕನ್ನು ನಡೆಸಲಿಕ್ಕೆ ಇಂದಿನ ಶಿಕ್ಷಣ ಯಾವುದೇ ರೀತಿ ಪೂರಕಾಂಶಗಳನ್ನು ನೀಡುವುದಿಲ್ಲವಾದ್ದರಿಂದ ಇಂಥದ್ದನ್ನು ನಮ್ಮ ಇಂದಿನ ತರುಣ ಜನಾಂಗ ತಮ್ಮ ತಮ್ಮ ಮನೆಗಳಲ್ಲಿ ಬೀದಿಗಳಲ್ಲಿ ಸ್ನೇಹ ವಲಯದಲ್ಲಿ ಕಂಡೂ ಕಂಡೂ ಹತಾಶರಾಗಿದ್ದಾರೆ. ಅವರು ಒರಟುತನದ ನಡವಳಿಕೆಗೆ ಈ ಮೂಲಕ ಹತಾಶ ಭಾವ ಬೇರೊಂದು ರೀತಿಯ ಸೂಕ್ಷ್ಮ ಅಭಿವ್ಯಕ್ತಿಯಾಗಿರುವ ಸಾಧ್ಯತೆ ಇದೆ. ಇದನ್ನು ಹಿರಿಯರೂ ಶಿಕ್ಷಣ ತಜ್ಞರೂ ಆಡಳಿತ ನಡೆಸುವವರೂ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಬೇಕಾಗಿದೆ.

ಇನ್ನು ಬಹಳಷ್ಟು ಯುವಜನರ ಪಾಲಿಗೆ ಮನೆಯಲ್ಲಿ ದೊರಕುವ ಅಕ್ಕರೆಯ ಕೊರತೆ— ತಂದೆ ತಾಯಿಗಳಿಬ್ಬರೂ ದುಡಿಮೆಗೆ ಹೊರಡುವುದರಿಂದ ಮಕ್ಕಳು ಚಿಕ್ಕಂದಿನಿಂದಲೂ ಸರಿಯಾದ ಮೇಲ್ವಿಚಾರಣೆಯಲ್ಲಿ ಬೆಳೆಯುವುದಿಲ್ಲ. ಹಿರಿಯರು ತಮ್ಮನ್ನು ಗಮನಿಸುತ್ತಿಲ್ಲ ಎಂದಾಗ ಉಡಾಳತನ ಕ್ರಮ ಕ್ರಮೇಣ ಬೆಳೆದು ವ್ಯಾಪಕವಾಗಿ ವ್ಯಕ್ತಿ ದುರ್ನಡತೆಗಳತ್ತ ಅಭಿಮುಖವಾಗಿರುತ್ತಾನೆ. ಒಂದು ಕಡೆ ಹಿರಿಯರು ಪ್ರೀತಿಯಿಂದ ತಮ್ಮನ್ನು ನೋಡಿಕೊಳ್ಳುತ್ತಿಲ್ಲ ಎಂಬ ಕೊರತೆ; ಇನ್ನೊಂದು ಕಡೆ ತಮ್ಮ ಆಸೆ ಆಕಾಂಕ್ಷೆಗಳನ್ನು ಬೇಕು ಬೇಡಗಳನ್ನು ಯಾರೂ ಗಮನಿಸುತ್ತಿಲ್ಲ ಎಂಬ ಕೊರಗು, ಶಾಲೆ ಕಾಲೇಜುಗಳು



"ಕಳ್ಳತನ-ಗುಂಡಾಗಿರಿ ಬಿಟ್ಟು ಈ ರಾಜಕಾರಣಕ್ಕೆ ಸೇರಿದ್ರೂ ಕಳ್ಳ ಅನ್ನೋ ಬೈಗುಳ ತಪ್ಪಲಿಲ್ಲವಲ್ರೀ...."

ದೊಡ್ಡಿಗಳಾಗಿರುವುದರಿಂದ ಅಲ್ಲೂ ತರುಣ—ತರುಣಿಯರಿಗೆ ಅಧ್ಯಾಪಕ ವರ್ಗ ಪ್ರತ್ಯೇಕ ಗಮನ ಕೊಡಲಾರದೆ ಹೋಗುವುದರಿಂದ ಎಲ್ಲರ ಅನಾದರಕ್ಕೆ ನಾವು ಪಾತ್ರವಾಗಿದ್ದೇವೇನೋ ಎಂದು ಭ್ರಮಿಸುವ ಯುವಜನತೆ ಸಿಡುಕು ತೋರುವುದು ಸಹಜ. ಅವರ ಮಾತಿನಲ್ಲಿ ಸಿಸಿಕ ತನ ಉಕ್ಕುವುದೂ ಸಹಜ. ಅವರ ಸಿಟ್ಟು ಸಿಡವುಗಳಿಗೆ ಆಕ್ರೋಶಗಳಿಗೆ ಹಿನ್ನೆಲೆ ಇದ್ದೇ ಇರುತ್ತದೆ ಎಂಬುದನ್ನು ಅವರ ವರ್ತನೆಯ ಬಗ್ಗೆ ತಕರಾರು ಸಲ್ಲಿಸುವ ಟೀಕಿಸುವ ಎಲ್ಲ ಹಿರಿಯರೂ ಅರಿಯುವ ಮನೋಭಾವವನ್ನು ಮೊದಲು ಬೆಳೆಸಿಕೊಳ್ಳಬೇಕಾಗುತ್ತದೆ.

ಈ ಆಧುನಿಕ ಜಗತ್ತಿನಲ್ಲಿ ಎಲ್ಲಿಂದ ಎಲ್ಲಿಗೆ ಹೋದರೂ ಯಂತ್ರ ನಾಗರಿಕತೆಯ ಪ್ರಭಾವ. ವ್ಯಕ್ತಿಗಿಂತ ಯಂತ್ರಶಕ್ತಿಗೇ ಪ್ರಾಧಾನ್ಯ. ವ್ಯಕ್ತಿಯ ಪ್ರತಿಭೆಯನ್ನು ಗುರುತಿಸುವ ಕೆಲಸ ಇಂದಿನ ಸಮಾಜದಲ್ಲಿ ಸಾಕಷ್ಟು ವ್ಯಾಪಕವಾಗಿ ಆಗುತ್ತಿಲ್ಲ. ಒಂದು ಪಕ್ಷ ಈ ಕಾರ್ಯ ಆಗು-ತ್ತಿದ್ದರೂ ಅತ್ಯಂತ ಕಡಿಮೆ ಪ್ರಮಾಣ. ಆಂಶಿಕ ಅರ್ಥದಲ್ಲಿ ಮಾತ್ರ. ತಮ್ಮ ಪ್ರತಿಭೆಗಳಿಗೆ ತಕ್ಕ ಪ್ರೋತ್ಸಾಹ ಸಿಗದ ಅಸಂಖ್ಯ ಯುವಜನ ಸಮ್ಮ ಈಗಿನ ವ್ಯವಸ್ಥೆಗಳ ಬಗೆಗೇ ಕ್ರುದ್ಧ ರಾಗಿದ್ದಾರೆ. ಹಾಗೆ ಕುಪಿತ ಯುವಗಣವನ್ನು ನಾವು ಕಾನೂನುಗಳಿಂದ ನೀತಿ ಪಾಠಗಳಿಂದ ವ್ಯಕ್ತಿಯಲ್ಲಿ ವಿನಯವಿರಬೇಕೆಂಬ ಬುದ್ಧಿವಾದದ ಮೂಗುದಾರಗಳನ್ನು ಬಲವಂತವಾಗಿ ಹಾಕುವುದ ರಿಂದ ಹತ್ತಿಕ್ಕುತ್ತಿದ್ದೇವೆ. ನಿಯಂತ್ರಣ ಸಹಿಸದ ಮುಕ್ತ ಸ್ವಭಾವದ ಯುವಗಣ ಸಿಡಿದು ನಿಲ್ಲು ವುದು ಅಪರೂಪವೇನಲ್ಲ. ಅಸಂಗತವೂ ಅಲ್ಲ. ಅವರ ಆಕ್ರೋಶಗಳ ಹಿನ್ನೆಲೆಯಲ್ಲಿ ದಾರುಣ ಅಳಲಿರಬಹುದು. ಆ ಬಂಡಾಯಗಳ ದನಿ ಯಲ್ಲಿ ಸೌಲಭ್ಯಗಳಿಂದ ವಂಚಿತ ಹೃದಯಗಳಿರ-ಬಹುದು. ಅದನ್ನು ಸಮೀಪಿಸುವ ವ್ಯವಧಾನ ಹಿರಿಯರಿಗಿದೆಯೇ? ತಜ್ಞರು ಅತ್ತ ನಿಜ ವಾಗಿಯೂ ಗಮನ ಹರಿಸಿದ್ದಾರೆಯೇ ? ನಮ್ಮನ್ನು ನಾವೇ ಸ್ವವಿಮರ್ಶೆ ಮಾಡಿಕೊಳ್ಳ ಬೇಕು. ಅದರ ಬದಲು ಯುವ ವರ್ತನೆಗಳ ಮೂಗು ಮುರಿದು ಮಡಿ ಪ್ರಹಾರ ಮಾಡುವ ಧೋರಣೆ ಹಿರಿಯರಿಗೆ ಖಂಡಿತ ಸಾಧುವಲ್ಲ.

ಭಾರತದ ಎಲ್ಲ ಸಾಮಾಜಿಕ ಆಂದೋಳನ ಗಳಲ್ಲೂ ಯುವಜನರ ಪಾತ್ರವಿಲ್ಲದಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಯುವಜನತೆ ರಾಜ ಕೀಯ ಕಣಕ್ಕೂ ಧುಮುಕಿದ್ದರಲ್ಲಿ ಒಂದು ನಿಶ್ಚಿತ ಗುರಿಯಿತ್ತು. ಈಗ ಹಾಗಿಲ್ಲ. ಕೆಲವು ರಾಜ ಕಾರಣಿಗಳು, ಕೆಲವು ಪಕ್ಷಗಳು ಯುವ ಜನತೆ ಯನ್ನು ಪಗಡೆಯ ದಾಳಗಳನ್ನಾಗಿ ಮಾಡಿ ಕೊಂಡಿದ್ದಾರೆ. ಅಧಿಕಾರ, ಸವಲತ್ತು, ನೌಕರಿ ಗಳ ಆಮಿಷಗಳಿಗೆ ಯುವಕರು ಬಲಿಯಾಗಿ ಆ ಭ್ರಷ್ಟ ವಲಯದಲ್ಲೂ ವಂಚಿತರಾಗಿ ಸೆಟೆಯು-ವುದು ಅತ್ಯಂತ ಸಹಜ, ನೈಸರ್ಗಿಕ ಕೂಡ. ಇದನ್ನು ಅರಿಯದೆ ಅಧಿಕಾರಿಗಳು ಕಾನೂನಿನ ಕತ್ತಿ ಝಳಪಿಸಿದರೆ, ಬಂಡಾಯ ಮಾಡದೆ ಮತ್ತಿನ್ನೇನು ಮಾಡಿಯಾರು? ವ್ಯವಸ್ಥೆಗಳ ವಿರುದ್ಧ ಸಂಘಟಿತರಾಗಿ ಒರಟಾಗಿ ವರ್ತಿಸುವು-ದರ ಮೂಲಕ ತಮ್ಮ ಹಕ್ಕು ಸ್ಥಾಪಿಸಿಕೊಳ್ಳಲು ಘೋಷಣೆಗಳನ್ನು ಕೂಗದೆ ಹೇಗೆ ಮೌನವಾಗಿ-ದ್ದಾರು? ಪ್ರತಿಷ್ಠಿತರ ಗೋಸುಂಬೆ ನಾಟಕಗಳ ವಿರುದ್ಧ ಕಪ್ಪು ಬಾವುಟ ಪ್ರದರ್ಶಿಸದೇ ನಿಷ್ಕ್ರಿಯವಾಗಿರಲು ಸಾಧ್ಯವೇ? ವಿಚಾರವಂತ-ರೆಲ್ಲರೂ ಯುವಗಣದ ಸೂಕ್ಷ್ಮ ವರ್ತನೆಗಳ ಆಳದಲ್ಲಿರುವ ತುಮುಲದ ಸೆಲೆಯನ್ನು ಅರಿ ಯುವ ಪ್ರಯತ್ನವನ್ನು ಇನ್ನಾದರೂ ಮಾಡ ಬೇಕಾಗಿದೆ.





# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದ ಭಂಡಾರವು ಹಣದ ಭಾಂಡಾರಕ್ಕಿಂತಲೂ ಅನುಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ನಾರಿಕೇಳಪಾಕ
(ಅ) ಬೆಳೆದ ತೆಂಗಿನಕಾಯಿ (ಆ) ಒಂದು ತರದ ಹೋಳಿಗೆ (ಇ) ಸುಲಭವಾಗಿ ಅರ್ಥವಾಗದ ಶೈಲಿ (ಈ) ಹೆಂಡತಿಗೆ ಅಧೀನ

೨. ನಾದಾರಿ
(ಅ) ದರಿದ್ರ (ಆ) ಕಲ್ಲು ಮುಳ್ಳಿನ ದಾರಿ (ಇ) ಕರ್ಕಶ ಧ್ವನಿ (ಈ) ಅಸಾಧಾರಣತನ

೩. ಬಕ್ಕ
(ಅ) ವಿಜಯನಗರದ ಸಂಸ್ಥಾಪಕ (ಆ) ತೆರೆದ (ಇ) ಚಿಗರೆ (ಈ) ಆಸೆಬುರುಕ

೪. ಅಮರ್ಷ
(ಅ) ಅಪ್ಪಿಕೊಳ್ಳುವಿಕೆ (ಆ) ಇಳಿಗಾಲ (ಇ) ತಾಳ್ಮೆ (ಈ) ತಾಳ್ಮೆ ತಪ್ಪುವುದು

೫. ಆಸನ್ನ
(ಅ) ತಾಳಲಸಾಧ್ಯ (ಆ) ಹೆಗ್ಗುರುತು (ಇ) ಸೋಜಿಗ (ಈ) ಹತ್ತಿರ ಬಂದ

೬. ದಿವ್ಯ
(ಅ) ಸಂಪತ್ತು (ಆ) ಸುಡುವಿಕೆ (ಇ) ಅಪರಾಧ ನಿಶ್ಚಯಕ್ಕೆ ಉಗ್ರ ಪರೀಕ್ಷೆ (ಈ) ಹಗಲು ಹೊತ್ತಿನ

೭. ಚೌಕಾಶಿ
(ಅ) ಚರ್ಚೆ (ಆ) ಜಗಲಿ (ಇ) ಜಾರುವಿಕೆ (ಈ) ಚಬುಕು

೮. ಕುಸ್ತರಿಸು
(ಅ) ಉರುಳು (ಆ) ಕುಳ್ಳಿರಿಸು (ಇ) ಚಿಕ್ಕದು ಮಾಡು (ಈ) ಕೆಡಿಸು

೯. ಭಂಡಾರಿಸು
(ಅ) ಕೋಣೆ ಸೇರು (ಆ) ಅಶ್ಲೀಲವಾಗಿ ವರ್ತಿಸು (ಇ) ದಂಗೆಯೇಳು (ಈ) ಜೇನು ಸಂಗ್ರಹಿಸು

೧೦. ಉತ್ತುಂಗ
(ಅ) ಅವಸರ (ಆ) ಲಂಚ (ಇ) ಬಹಳ ಎತ್ತರ (ಈ) ಯಥೇಷ್ಟ ವರ್ತನೆ

೧೧. ಒಪ್ಪ
(ಅ) ಪ್ರಿಯ (ಆ) ಒಪ್ಪಿಗೆ (ಇ) ತಂದೆ (ಈ) ಅಜ್ಜ

೧೨. ಕುಲೀನ
(ಅ) ದಿಕ್ಕು ದಿಕ್ಕಿಗೆ ಚೆದರುವುದು (ಆ) ಸಂಗ್ರಹ (ಇ) ಹುಗಿದು ಹೋದ (ಈ) ಒಳ್ಳೇ ಕುಲದ



೧. ನಾರಿಕೇಳಪಾಕ (ಇ) ಸುಲಭವಾಗಿ ಅರ್ಥವಾಗದ ಬರವಣಿಗೆ ಶೈಲಿ, 'ಕಬ್ಬಿಣದ ಕಡಲೆ' ಉದಾ:- ಷಡಕ್ಷರಿಯದು ನಾರಿಕೇಳಪಾಕ. [ಸಂ. ನಾರಿಕೇಳ = ತೆಂಗಿನಕಾಯಿ ಪಾಕ = ಅಡಿಗೆ]

೨. ನಾದಾರಿ (ಅ) ದರಿದ್ರ, ತನ್ನ ಸಾಲಗಳನ್ನು ತೀರಿಸಲಾರದವನು, ದಿವಾಳಿ ಎದ್ದವನು, ಪಾಪರು. [ಫಾರಸಿ – ಉರ್ದು – ನಾದಾರ್ = ದರಿದ್ರ, ದಿವಾಳಿ]

೩. ಬಕ್ಕ (ಅ) ತೆರೆದ, ಆವರಣವಿಲ್ಲದ; ಬರಿದಾದ; ಉದಾ:— ಬಕ್ಕತಲೆ = ಟೊಪ್ಪಿ, ರುಮಾಲು ಇಲ್ಲದ ತಲೆ. [ದೇಶ್ಯ - ಬರಿ ಎಂಬುದರಿಂದ]

೪. ಅಮರ್ಷ (ಈ) ತಾಳ್ಮೆ ತಪ್ಪುವುದು, ಅಸಹನೆ. ಸಿಟ್ಟಿಗೇಳುವುದು, ರೋಷ; ಹೊಟ್ಟೆಕಿಚ್ಚು. ಉದಾ:— ಮನುಷ್ಯನಿಗೆ ಸ್ವಲ್ಪ ಅಮರ್ಷ ಬೇಕು. [ಸಂ. ಅ = ಇಲ್ಲ + ಮರ್ಷ = ಸಹನೆ]

೫. ಆಸನ್ನ (ಈ) ಹತ್ತಿರ ಬಂದ, ಸಮೀಪಿಸಿದ. ಉದಾ:— ಮರಣಾಸನ್ನನಾದ [ಸಂ.]

೬. ದಿವ್ಯ (ಇ) ಖಚಿತ ಪುರಾವೆಗಳಿಲ್ಲದಾಗ ನ್ಯಾಯ ತೀರ್ಮಾನಿಸಲು ಉಪಯೋಗಿಸುತ್ತಿದ್ದ ಕುದಿಯುವ ಎಣ್ಣೆಯಲ್ಲಿ ಕೈಯಿದ್ದುವುದೇ ಮೊದಲಾದ ಉಗ್ರ ಪ್ರಮಾಣ ವಿಧಾನ; ಅಂಥ ಕಠಿನ ತೊಂದರೆಗಳು: [ಸಂ. ದಿವ್ = ಜುಗಾರಾಡು]

೭. ಚೌಕಾಶಿ (ಅ) ಚರ್ಚೆ, ವ್ಯಾಪಾರದಲ್ಲಿ ದರದ ಒಗ್ಗೆ ಕೊಸರಾಡುವುದು, ವಿಚಾರಣೆ. ಉದಾ:— ಚೌಕಾಶಿ ಮಾಡಿ ತರಕಾರಿ ಕೊಳ್ಳುತ್ತಾಳೆ. [ಹಿಂದಿ ಚೌಂಕಸಾಯಿ, ಚೌಂಕಸಿ = ಜಾಗ್ರತೆ]

೮. ಕುಸ್ತರಿಸು (ಈ) ಕುಳಿತುಕೊಳ್ಳುವಂತೆ ಮಾಡು, ಕುಳ್ಳಿರಿಸು: ಉದಾ:— ಕುರ್ಚಿ ಕೊಟ್ಟು ಕುಸ್ತರಿಸಿ. [ತೆಲಗು – ಕುಸ್ತರಿಂಚು]

೯. ಭಂಡಾರಿಸು (ಅ) ಕೋಣೆ ಸೇರು, ಸೇರಿಸು; ಮುಚ್ಚಿಡು; ಹೊರಗೆ ಬಾರದಿರು. ಉದಾ:— ಕೈದು ಭಂಡಾರಿಸಿತು. [ಸಂ. ಭಂಡಾರ – ದಿಂದ]

೧೦ ಉತ್ತುಂಗ (ಇ) ಬಹಳ ಎತ್ತರ, ಶ್ರೇಷ್ಠ. ಉದಾ:— ಉತ್ತುಂಗ ಶಿಖರ, ಉತ್ತುಂಗ ವಿಚಾರ. [ಸಂ. ಉತ್ = ಮೇಲೆ + ತುಂಗ = ಎತ್ತರ]

೧೧. ಒಪ್ಪ (ಅ) ಒಪ್ಪಿಗೆ, ಸಮ್ಮತಿ; ಸಮ್ಮತಿ, ಸಮ್ಮತಿ ಸೂಚಿಸುವ ಸಹಿ. ಉದಾ:— ದ್ರಾಮಸ್ಥರ ಒಪ್ಪ. [ದೇಶ್ಯ – ಒಪ್ಪು – ಇಂದ]

೧೨. ಕುಲೀನ (ಈ) ಒಳ್ಳೇ ಕುಲದ, ಕುಲವಂತ; ಶ್ರೇಷ್ಠ ಮನೆತನದ. ಉದಾ:— ಕುಲೀನ ಕನ್ಯೆ. [ಸಂ.]

●

## ನಿಮ್ಮ ಶಬ್ದಶಕ್ತಿಯ ತರಗತಿ

ನಿವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ ಸರಿಯಿದ್ದರೆ | ... | ಸಾಧಾರಣ |
| ೮–೧೦ ,, | ... | ಉತ್ತಮ |
| ೧೧–೧೨ ,, | ... | ಅತ್ಯುತ್ತಮ |

●

# ಬಣ್ಣದ ಬೊಂಬಾಯಿ ಬೊಂಬೆ

**ಕೆ. ಚಂದ್ರಮೌಳಿ**

ಬಣ್ಣದ ಬೊಂಬಾಯಿ ಎಂದು ಹೇಳಲು ಹೊರಟಿದ್ದೆ, ಅಷ್ಟರಲ್ಲೇ ಆಡುತ್ತಿದ್ದ ಮಗುವಿನ ಬೊಂಬೆಯನ್ನು ನೋಡಿ ಬಣ್ಣದ ಬೊಂಬೆ ಎಂದೇ ನಿಲ್ಲಿಸಿದೆ. ಭಾರತದ ನಗರಗಳಲ್ಲಿ ಬೊಂಬಾಯಿ ಬಣ್ಣದ ಬೊಂಬೆಯೇ ಸರಿ ಅನಿಸುತ್ತದೆ. ಇಲ್ಲಿಯ ಬದುಕೇ ಬಣ್ಣದ ಬದುಕು. ಜನಗಳೂ ಬಣ್ಣ, ಜೀವನವೂ ವೈವಿಧ್ಯಮಯ ಇಲ್ಲಿ ಸಿಗುವ ಅವಕಾಶ, ಆಸರೆಗಳೂ ನವ ರಂಗದವು. ಇಲ್ಲಿಯ ಬಣ್ಣದ ಬದುಕಿನ ಸಾರ ಸರ್ವವನ್ನು ವಿವರಿಸಲು ಹೆಚ್ಚು ಕಾಲ ಇಲ್ಲಿರಬೇಕು. ಇಲ್ಲಿಯ ಅನೇಕ ಅನುಭವಗಳಲ್ಲಿ ಭಾಗಿಯಾಗಿರಬೇಕು. ಆದರೆ ಇಲ್ಲಿ ಬಣ್ಣವೇ ಬದುಕು, ಬಣ್ಣವೇ ಜೀವ, ಬಣ್ಣವೇ ಜೀವನ ಅನ್ನುವುದಕ್ಕೆ ವರ್ಷಾನುಗಟ್ಟಲೆ ಕಳೆಯಬೇಕಿಲ್ಲ. ಇಲ್ಲಿಯ ಬಣ್ಣಕ್ಕೆ ಜೀವ ತುಂಬುವವರು ಸೀರೆ ಮತ್ತು ಬಟ್ಟೆಗಳ ತಯಾರಕರು. ರಸ್ತೆಯಲ್ಲಿ ಎಲ್ಲೋ ನಡೆದು ಹೋಗುತ್ತಿದ್ದರೂ, ಮುಂದೆ ಹೋಗುತ್ತಿರುವ ಹೆಣ್ಣನ್ನು ನೋಡಿ, "ಅಬ್ಬಾ! ಅದೇನು ಬಣ್ಣ, ಅದೇನು ಥಳುಕು, ಅದೇನು ಬಳುಕು ಅದೇನು ಹೊಳಪು, ಅದೇನು ಬಿಳುಪು, ಅದೇನು ಠೊಣಪು, ಅದೇನು ಮೆರಗು, ಅದೇನು ಸೆರಗು, ಎಂದು ಮೂಗಿನ ಮೇಲೆ ಬೆರಳಿಡುವುದಕ್ಕೂ ಪುರುಸೊತ್ತಿಲ್ಲದೆ ಕರವಸ್ತ್ರದಿಂದ ಬೆವರು ಒರೆಸಿಕೊಳ್ಳುತ್ತಾ, ಬೇಗ ಬೇಗನೆ ಹೆಜ್ಜೆ ಹಾಕಿ ಆಕೆಯ ಪಕ್ಕಕ್ಕೆ ಬರುತ್ತೀರಿ, ಕಳ್ಳತನದಿಂದ ಓರೆ ನೋಟ ನೋಡುತ್ತೀರಿ. ಅದೇ ಸಮಯಕ್ಕೆ ಅವಳು ಆ ಕಡೆಯ ಯುವಕನೆಡೆ ಕಣ್ಣು ಹಾಯಿಸಿದ್ದರಿಂದ ಇನ್ನೊಂದೆರಡು ಹೆಜ್ಜೆ ಮುಂದಿಟ್ಟು ಮತ್ತೆ ಹಿಂತಿರುಗಿ ನೋಡುತ್ತೀರಿ—ಅಹಾ, ಸೌಂದರ್ಯ ದರ್ಶನವಾದೀತೆಂದುಕೊಂಡರೆ ಹೀಗೆ ಭಯದರ್ಶನವಾಗಬೇಕೆ! ಛೀ, ಛೀ, ಆ ಮುಳ್ಳು ಮುಖ, ಗುಂಡು ಮೂಗು, ಬಣ್ಣ ಮೆತ್ತಿದ ದಪ್ಪ ತುಟಿ, ಬೆದರುಗಣ್ಣಿನ ಬದಲು ಬೇದರಿಸುವ ಕಣ್ಣು......ಮತ್ತೆ ತಿರುಗಿ ನೋಡದೆ ಮುಂದಕ್ಕೋಡುತ್ತೀರಿ,

* ಆಕಾಶವಾಣಿ, ಬೊಂಬಾಯಿಯಿಂದ ೧೪-೭-೧೯೫೫ ರಂದು ಪ್ರಸಾರವಾದ ಹರಟೆ.

ಮುಂದೊಂದು ಬಣ್ಣದ ಚಿಟ್ಟೆ ನಿಮ್ಮ ಕಣ್ಣಿಗೆ ಬೀಳುವವರೆಗೆ! ಅರೆ! ಅದೇನು ಬಣ್ಣ, ಅದೇನು ಥಳುಕು......ಮತ್ತೆ ನಿಮ್ಮ ಹೆಜ್ಜೆ ತ್ವರಿತ ಗೊಳ್ಳುತ್ತದೆ. ಒಟ್ಟಿನಲ್ಲಿ ಹೇಳಬೇಕಾದರೆ, ಇಲ್ಲಿಯ ಸೆಖೆಯಲ್ಲಿ ಸ್ನಾನವೂ ಮಾಡದೆ, ಮುಖಕ್ಕೆ ಪದರ ಪದರವಾಗಿ ಬಣ್ಣ ಬಳಿದು, ಮೈಗೆಲ್ಲಾ ಸುಗಂಧ ಸಿಂಪಡಿಸಿಕೊಂಡು, ಬಣ್ಣದ ಸೀರೆಯನ್ನು ನವಿರಾಗಿ ಹೊಕ್ಕಳ ಕೆಳಗೆ ಸುತ್ತಿ ಕೊಂಡು ಹೊರಡುವ ಬಿಂಕದ ಸಿಂಗಾರಿಯರನ್ನು ನೋಡುವುದು ಸಾಮಾನ್ಯ.

ಬೊಂಬಾಯಿನ ಬಿಂಕದ ಸಿಂಗಾರಿಗಳಿಗೆ ಬಣ್ಣವೇ ಸ್ನಾನ, ಬಣ್ಣವೇ ಮಾನ, ಬಣ್ಣವೇ ಯೌವನ, ಬಣ್ಣವೇ ಆರೋಗ್ಯ, ಬಣ್ಣವೇ ಜಪ ತಪ, ಬಣ್ಣವೇ ನಯವಿನಯ, ಬಣ್ಣವೇ ನಡೆನುಡಿ, ಬಣ್ಣವೇ ಬೆಡಗು, ಬಣ್ಣವೇ ರೂಪು, ಬಣ್ಣವೇ



ಪ್ರೀತಿ ಪ್ರೇಮ, ಬಣ್ಣವೇ ಬದುಕು— ದೂರ ದಿಂದ ನೋಡುವ ಬಣ್ಣದ ಕಣ್ಣಿಗಳವರಿಗೂ ಹೀಗೆಯೇ! ಹೊರಗಡೆ ಸುತ್ತಿ ಬಿಸಿಲಲ್ಲಿ ಬಳಲು ವವರಿಗೆ ಬಣ್ಣವು ತಂಪನ್ನೂ ನೀಡುವುದು, ಅವರ ನೀರಸ ಜೀವನದಲ್ಲಿ ಕ್ಷಣಿಕ ರಂಗನ್ನೂ ತರುವುದು ಸರಿಯೇ. ಆದರೆ ಮನೆಯಲ್ಲೇ ಕುಳಿತು ಬಣ್ಣದ, ಅನುಮಾನದ ಕಣ್ಣಿಗಳಿಂದ ಎಲ್ಲವನ್ನೂ ನೋಡುತ್ತಿರುವ ಹೆಂಡತಿಗೆ ಹೊರ ಗಿನ ಬಣ್ಣ ಹೆಚ್ಚಿದಷ್ಟೂ ಅವಳ ಜೀವನದ ಬಣ್ಣ ಇಳಿಮುಖವಾಗುತ್ತದೆ. ರೈಲಿನಲ್ಲಿ ಯಾರ್‍ಯಾರು ಸಿಕ್ಕಿದರು, ಆಫೀಸಿನಲ್ಲಿ ನಿಮ್ಮ ರಿಸೆಪ್ಶನಿಸ್ಟ್ ಹೇಗಿದ್ದಾಳೆ, ಸೆಕ್ರೆಟರಿ ಮತ್ತು ಬೇರೆ ಹುಡುಗಿ ಯರು ನಿಮ್ಮೊಡನೆ ಚಕ್ಕಂದ ಹೊಡೆಯುತ್ತಿರ ಬೇಕು, ಇವತ್ತು ಡಬ್ಬದ ಊಟ ಮಾಡೇ ಇಲ್ಲ, ಯಾರ ಜೊತೆ ಹೋಟೆಲ್ಲಿಗೆ ಹೋಗಿದ್ದಿರಿ... ಇಂತಹ ಪ್ರಶ್ನೆಗಳು ದಿನ ನಿತ್ಯದವು. ಇದನ್ನೆಲ್ಲಾ ಕೇಳಿ ನಾನೊಬ್ಬ ಸುಂದರ, ಸಿನೆಮಾ ನಟನಂತಹ ಕೃಷ್ಣನಂತಹ ಮೋಹಕ ವ್ಯಕ್ತಿ ಅಂತಾ ಅನ್ಕೋ ಬೇಡಿ, ನನ್ನ ಹೆಂಡ್ತಿ ಹಾಗಂತ ಭಾವಿಸಿದ್ದಾಳೆ, ಅಷ್ಟೇನೇ. ನಮ್ಮ ಮುಂಬಯಿಯ ಜೀವನ ದೋಣಿ ಸುಗಮವಾಗಿ ಸಾಗುತ್ತಿರುವಾಗ ಈ ಬಣ್ಣದ ಗಲಾಟೆಯೇ ಸುಂಟರಗಾಳಿಯಾಗಿ ಬಂದು ದೋಣಿಯನ್ನು ಅಲ್ಲಾಡಿಸುವಂತಹ ಪ್ರಸಂಗ ವೊಂದು ನಡೆಯಿತು.

ಹೋಳೀ ಹಬ್ಬದ ಗಲಾಟೆಗೆ ಹೆಂಗಸರ ಮಧ್ಯ ನಾನಿರಲಿಲ್ಲವೆಂದು ನನ್ನಾಕೆಗೆ ಒಂದು ರೀತಿಯ ಸಂತೋಷವೇ ಆಗಿತ್ತು. ಆದರೆ ಮೂರನೇ ದಿನ ಮನೆಗೆ ವಾಪಸ್ಸು ಬಂದಾಗ ಮನೆಯ ಬಾಗಿಲ ಮೇಲೆ ಸ್ಪಷ್ಟವಾಗಿ, ಸ್ಫುಟ ವಾಗಿ, ಎಳೆಎಳೆಯಾಗಿ ಅಚ್ಚೊತ್ತಿದ ತುಟಿಯ ಬಣ್ಣ ಅಂಟಿತ್ತು! ಅದು ಯಾರ ತುಟಿಯೋ ಏನೋ, ಅದೇಕೆ ನಮ್ಮನೆಯ ಬಾಗಿಲಿಗೆ ತುಟಿ ಒತ್ತಿದ್ದಳೋ, ಒಂದೂ ಅರ್ಥವಾಗಲಿಲ್ಲ. ರವಿ ಕಾಣದ್ದನ್ನು ಕವಿ ಕಂಡ ಹಾಗೆ, ಗಂಡಸಿಗೆ ತಿಳಿಯದ್ದು ಹೆಂಗಸಿಗೆ ಚಿಲುಮೆ ನೀರಂತೆ ತಿಳಿ.

ಗಂಡಸಿಗೆ ಅರ್ಥವಾಗದ್ದು ಹೆಂಗಸಿಗೆ ನೂರು ಅರ್ಥ ಹೇಳುತ್ತದಂತೆ— ಅದೇ ನೋಡಿ, ತೊಂದರೆ ತಾಪತ್ರಯಗಳ ಮೂಲ. ಅವತ್ತು ಆಗಿದ್ದೂ ಹಾಗೆಯೇ. ಹೆಣ್ಣಿನ ಮನದಲ್ಲಿ ಸಂಶಯಗಳ ಮೋಡ ಘನಘೋರವಾಗಿ ಕವಿದಿರುವಾಗ ಹಾಸ್ಯ ಚಟಾಕಿಯ ಮಿಂಚು ಹೊಳೆದರೆ ತಕ್ಷಣ ಗುಡುಗು, ನಂತರ ಮಳೆ ಕರೆಯಲೇಬೇಕು. ಅರೆ, ಎಲ್ಲಾ ಬಿಟ್ಟು ಬಾಗಿಲಿಗೆ ಒತ್ತಿ ಹೋದಳೇ, ನನ್ನ ತುಟಿಗೋ ಕೆನ್ನೆಗೋ ಒತ್ತಬಾರದಿತ್ತೆ ಎಂದು ಹಾಸ್ಯ ಮಾಡಿದ್ದೇ ದೊಡ್ಡ ತಪ್ಪಾಯಿತು. ಹೀಗೆ ತುಟಿಯ ಚಿಹ್ನೆ ಒತ್ತಿ ಏನೋ ಸೂಚನೆ ಕೊಟ್ಟಿ-ರುವ ಈ ಚಂದೊಳ್ಳಿ ಹೆಣ್ಣು ಯಾರಿರಬಹುದೆಂದು ಶರ್‌ಲಾಕ್ ಹೋಮ್ಸ್‌ನಂತೆ ಪತ್ತೇದಾರಿ ಶುರುಮಾಡಬೇಕು. ಈ ಕಟ್ಟಡದಲ್ಲಿರುವ ಎಲ್ಲಾ ಹೆಣ್ಗಳ ತುಟಿಯನ್ನೂ ನೋಡಿ ಬರುತ್ತೇನೆ ಎಂದದ್ದು ವಿಪರೀತಕ್ಕೆ ಹೋಯಿತು. ಅರೆ, ಬಾಬಾ, ಇಲ್ಲಿ ಯಾರ ತುಟಿ ಹೀಗೆ ಚಂದ್ರಾಕಾರವಾಗಿ, ದಪ್ಪವಾಗಿ, ಗೆರೆಗೆರೆಯಾಗಿ, ಮಾಟವಾಗಿದೆ ಎಂದು ಹೋಲಿಕೆಯ ಕಣ್ಣಿಂದ ನೋಡಿದರೆ ಸಾಕು, ಅವರ ತುಟಿಯ ಒತ್ತನ್ನು ಕೆನ್ನೆಯ ಮೇಲಾಗಲಿ, ಕಾಗದದ ಮೇಲಾಗಲೀ ತಗೋಬೇಕಿಲ್ಲ ಅಂದೆ. ಹಾಸ್ಯದ ಮಿಂಚಿನಿಂದ ಹುಡುಗಿ ಮಳೆಗರೆದು, ವಾತಾವರಣ ಶಾಂತವಾದ ಮೇಲೂ ಮೋಡ ಮಾತ್ರ ಚದುರಲಿಲ್ಲ. ಆ ಹೆಣ್ಣು ಇಷ್ಟೊಂದು ಸಲಿಗೆಯಿಂದ ಮುಂದುವರೆದಿರಬೇಕಾದರೆ, ಅವಳಿಗೆ ಸಾಕಷ್ಟು ಧೈರ್ಯವಿರಬೇಕು ಆ ಧೈರ್ಯಕ್ಕೆ ನಾನು ಖಂಡಿತಾ ಉತ್ತೇಜನ ಕೊಟ್ಟಿರಲೇಬೇಕೆಂದು ನನ್ನಾಕೆಯ ತೀರ್ಮಾನ!

ಒಂದು ವಾರದಲ್ಲಿ ಇಡೀ ಕಟ್ಟಡದ ಅನೇಕ ಮನೆಗಳ ಹೆಂಗಸರನ್ನು ಏನೇನೋ ನೆಪದಿಂದ ಗುರುತು ಮಾಡಿಕೊಂಡು ನೋಡಿ ಬಂದಳು. ಅವರಲ್ಲಿ ಯಾರ್ಯಾರು ಅವಳ ಕಣ್ಣಿಗೆ ಚೆನ್ನಾಗಿ ಕಂಡರೋ ಅವರ ಮೇಲೆಲ್ಲಾ ನನ್ನಾಕೆಯ ಸುಮಾನ. ಅರೆ, ಅವರ ತುಟಿ ಹೀಗಿಲ್ಲ, ಇಷ್ಟು ಮಾಟವಾಗಿಲ್ಲ ಅಂತ ಉಸುರಿದರೂ ನನಗೆ ಛೀಮಾರಿ! ಒಂದು ವಾರದಲ್ಲಿ ಹದಿನೈದು ಹೆಂಗಸರ ಪಟ್ಟಿಯನ್ನು hit-list ತರಹ ಮಾಡಿಬಿಟ್ಟಳು. ಮೊದ ಮೊದಲು ಎಲ್ಲವನ್ನೂ ಒಂದು ದೊಡ್ಡ ತಮಾಷೆ, ಜೋಕ್ ಎಂದು ತಗೊಂಡ ನನಗೆ, ದಿನಗಳೆದಂತೆ, ಪರಿಸ್ಥಿತಿಯ ಗಂಭೀರತೆ ಅರ್ಥವಾಗುತ್ತ ಬಂದಾಗ ನಗುವಿನ ಬದಲು ಯೋಚನೆ ಶುರುವಾಯಿತು. ಮೊದ ಮೊದಲಲ್ಲಿ ಬೆಳಿಗ್ಗೆಯ ಬೆಡ್‌ಕಾಫಿಗೆ ಖೋತಾ, ಕಾಫಿ ಕೊಟ್ಟಾಗ ಕಾರ್ಕೋಟಕ ವಿಷದಂತೆ ಕಹಿ, ತಿಂಡಿಯೆಂದರೆ ದಿನವೂ ಒಣ ಅವಲಕ್ಕಿ, ಊಟದಲ್ಲಿ ನಾನು ಮುಟ್ಟದ ನುಗ್ಗೇಕಾಯಿ, ಸಂಜೆ ಮೌನ ಇಲ್ಲವೆ ಜೋರು ಜಗಳ, ರಾತ್ರಿ ತೀವ್ರ ಸ್ತಬ್ಧತೆ ಮತ್ತು ನಿದ್ದೆಗೇಡು! ಹತ್ತು ದಿನದಲ್ಲಿ ಹತ್ತು ಕಿಲೋ ಇಳಿದಿರಬೇಕು, ಕಣ್ಣು ಸುತ್ತ ಕಪ್ಪುಗಟ್ಟಿ ಕಣ್ಣು ಗುಳಿ ಬಿದ್ದಂತಾಗಿರಬೇಕು, ನನ್ನ ವಿಚಿತ್ರ ಸ್ಥಿತಿ, ಅನ್ಯಮನಸ್ಕತೆಯನ್ನು ನೋಡಿ ಆಫೀಸಿನವ



ರೆಲ್ಲಾ— ಆಫೀಸಿನ ಹೆಣ್ಣಗಳು ಅಂದರೆ ಮತ್ತೆ ನನ್ನಾಕೆ ರೇಗುತ್ತಾಳೆ— ನನ್ನ ಭುಜತಟ್ಟಿ, ಕೆನ್ನೆ ಚಿವುಟಿ, ಏನಾಯ್ತು ಎಂದು ವಿಚಾರಿಸತೊಡಗಿದರು. ನನ್ನ ಸ್ನೇಹಿತ ಮುನಿಷಿಯಂತೂ "ನೋಡು, ನಿಂಗೀಗ ಶನಿದೆಶೆಯಿದೆ. ಪ್ರತಿ ಶನಿವಾರ ಶನಿಮಂದಿರಕ್ಕೆ ಹೋಗು" ಅಂದ. ನನ್ನ ಬಾಸ್ ನನ್ನನ್ನು ಸೈಕಿಯಾಟ್ರಿಸ್ಟ್ ಬಳಿ ಕಳಿಸಲು ತಯಾರಾದ. ಆದರೆ ನನ್ನ ಸಮಸ್ಯೆ ಹೇಳಲೂ ಆರೆ, ನುಂಗಲೂ ಆರೆ ಅನ್ನುವ ರೀತಿಯಾಗಿತ್ತು. ಯಾವನೋ ಸೈಕಿಯಾಟ್ರಿಸ್ಟ್ ಬಳಿ ಹೋಗಿ ಒದ್ದಾಡುವ ಬದಲು ಶನಿದೇವರ ಕೋಪಶಮನಕ್ಕೆ ಬಜ್ರಂಗಬಲಿಯೇ ಸರಿಯೆಂದು ತಪ್ಪದೆ ಹನುಮಾನ ಮಂದಿರಕ್ಕೆ ಹೋಗಿ ಬೇಡಿಕೊಂಡೆ.

ಒಂದು ಶನಿವಾರ ಗುಡಿಗೆ ಹೋಗಿ ಒಂದು ಗಂಟೆ ಕೂತು ಪ್ರಾರ್ಥನೆ ಮಾಡಿದೆ, ಪೂಜೆ ಮಾಡಿಸಿದೆ. ಪ್ರಸಾದ ಬಲಗಡೆಯಿಂದ ಬಿದ್ದಾಗ ನನಗಂತೂ ತುಂಬಾ ಖುಷಿಯಾಯಿತು. ನನ್ನ ಸಮಸ್ಯೆ ಸಧ್ಯದಲ್ಲೇ ಖಂಡಿತಾ ಪರಿಹಾರವಾಗುತ್ತದೆಂದು ಅನಿಸಿ ಬಲು ಸಂತೋಷದಿಂದ ಮನೆಯ ಕಡೆ ಹೊರಟೆ. ದಾರಿಯಲ್ಲಿ ನನ್ನಾಕೆಗಾಗಿ ಬೊಂಬಾಯಿನ ವಾಸನೆಯಿಲ್ಲದ 'ಮೈಸೂರು ಮಲ್ಲಿಗೆ'ಯ ದಂಡೆ ಕೊಂಡೆ, ಬೀದಿಯ ಬೊಂಬಾಯಿ ಬೋಂಡಾ ತಂದೆ. ಮನೆ ಹತ್ತಿರ ಬರುವಾಗ ನಡಿಗೆಯ ಬದಲು ಜಿಂಕೆಯ ಜಗಿತ ಇತ್ತು, ಸಣ್ಣದಾಗಿ ಸಿಳ್ಳುಹೊಡೆಯುತ್ತಾ ಹಳೆಯ ಹಾಡೊಂದನ್ನು ಗುಣಗುಣಿಸುತ್ತಿದ್ದೆ. ಮನಸ್ಸು ಅಷ್ಟು ಹಗುರವಾಗಿತ್ತು. ಬಾಗಿಲ ಹತ್ತಿರದ ಕರೆಗಂಟೆಯನ್ನು ಒತ್ತಿ, ಹಸನ್ಮುಖಿಯಾಗಿ ನಿಂತಿದ್ದಾಗ ಇದ್ದಕ್ಕಿದ್ದಂತೆ ಬಾಗಿಲ ಮೇಲಿ ಹಿಂದಿನ ತುಟಿಯ ಅಚ್ಚಿನ ಪಕ್ಕದಲ್ಲಿಯೇ



ಇನ್ನೊಂದು ಅದೇ ತರಹ, ಅದೇ ಆಕಾರ ಗಾತ್ರದ ಇನ್ನೊಂದು ಗುರುತು! ಹಿಂದಿನದು ಕೆಂಪು ಬಣ್ಣದ್ದು, ಈಗಿನದು ಕಂದು ಬಣ್ಣದ್ದು ಅಷ್ಟೇ ವ್ಯತ್ಯಾಸ. ಇದ್ದಕ್ಕಿದ್ದಂತೆ ಬವಳಿ ಬಂದ ಹಾಗಾಗಿ ಇಡೀ ಕಟ್ಟಡವೇ ಗಿರ್ರನೆ ತಿರುಗಿದಂತಾಯಿತು. ಬಾಗಿಲು ತೆಗೆದ ನನ್ನಾಕೆ ಎಲ್ಲೋ ಹಿಮ ಅಥವಾ ಹೊಗೆಯಲ್ಲಿ ತೇಲುತ್ತಿರುವಂತೆ ಕಾಣಿಸಿತು... ಅಷ್ಟೆ, ಮುಂದೆ ಆಗಿದ್ದುದು ನನಗೆ ಗೊತ್ತಾಗಲಿಲ್ಲ.

ಕಣ್ಣು ತೆರೆದಾಗ ನನ್ನಾಕೆಯ ಕೈ ನನ್ನ ಹಣೆಯ ಮೇಲಿತ್ತು. ನನ್ನ ತಲೆ ನನ್ನಾಕೆಯ ತೊಡೆಯ ಮೇಲಿತ್ತು. ಆಕೆಯ ಕಣ್ಣಂಚಿನಲ್ಲಿ ನೀರಿತ್ತು. "ನೀವು ಸರಿಯಾಗಿದ್ದೀರಾ ತಾನೆ" ಎಂದದ್ದು ಕೇಳಿಸಿತು. "ಹು. ಹು... ಆ ಬಾಗಿಲಲ್ಲಿ..." ಅಂದೆ. ನನ್ನಾಕೆಯ ಮುಖ ಅರಳಿತು, ತುಟಿ ಬಿರಿದು ಕಿಸಕ್ಕನೆ ನಕ್ಕಳು. ನನಗೆ ಏನೂ ಅರ್ಥವಾಗಲಿಲ್ಲ. ಅರ್ಥವಾಗಿದ್ದುದು ಬಲು ನಿಧಾನವಾಗಿ. "ಬಾಗಿಲ ಮೇಲೆ ತುಟಿಯ ಅಚ್ಚೊತ್ತಿದ್ದವಳು ಯಾವ ರೂಪಸಿ ಗೊತ್ತೇ?—ಅಕ್ಕಪಕ್ಕದ ಮನೆಯ ಸುಂದರಿಯರಲ್ಲ, ನಮ್ಮನೆಗೆ ಕೆಲಸಕ್ಕೆ ಬರುತ್ತಿದ್ದ ಬೊಚ್ಚ ಬಾಯಿನ ಹೆಂಗಸು!!" ಅಯ್ಯೋ. ದೇವ್ರೇ. ನನ್ನ ಊಹಾಪ್ರಪಂಚವನ್ನು, ಆಶಾಗೋಪುರವನ್ನು ಹೀಗೆ ಒಡೆದು ಉರುಳಿಸುವುದೇ! ಈಗ ಹಾಸ್ಯ ಚಟಾಕಿ ಹಾರಿಸುವ ಸರದಿ ನನ್ನಾಕೆಯದಾಗಿತ್ತು. ಗುಡುಗುವ ಸರದಿ ನನ್ನದಾಗಿತ್ತು. ಯಾವುದೋ ರೂಪಸಿಯ ತುಟಿಯ ಬದಲು, ಕೆಟ್ಟ ಮೂತಿಯ ಕೆಲಸದಾಕೆಯದಾಯಿತಲ್ಲಾ ಎಂದು ನನಗೆ ಸಿಟ್ಟು. ಅದು ಸರಿ, ಹಾಗೆ ಬಾಗಿಲ ಮೇಲೆ ತುಟಿ ಅಚ್ಚೊತ್ತುವ ಕಾರಣವಾದರೂ ಏನಿತ್ತು ಅಂದೆ. ಆ ಕೆಲಸದಾಕೆಗೆ ಸಿನೆಮಾದ ಹುಚ್ಚು ಜಾಸ್ತಿ. ಹೊಸ ಲಿಪ್‌ಸ್ಟಿಕ್ ತಂದು ಅದನ್ನು ಉಪಯೋಗಿಸಿದ ಮೇಲೆ ಅವತ್ತು ವಿಡಿಯೋದಲ್ಲಿ ನೋಡಿದ ಸಿನೆಮಾ ನಾಯಕಿಯಂತೆ. ಪ್ರೀತಿಯಿರುವೆಡೆ ತುಟಿ ಅಚ್ಚೊತ್ತಬೇಕು ಅನ್ನಿಸಿತಂತೆ. "ಈ ಇಡೀ ಬೊಂಬಾಯಿಯಲ್ಲಿ ನೀವು ನನಗೆ ತುಂಬಾ



ಪ್ರೀತಿಪಾತ್ರರು." ಈ ಮಾತು ಕೇಳಿ ನಾನು ರೇಗಿದೆ. ನನ್ನಾಕೆ ಸರಿಯಾಗಿ ವಿವರಿಸಿದಳು. ಇದು ಕೆಲಸದಾಕೆಯ ಮಾತು, ಮುಂದೆ ಕೇಳಿರಿ ಅಂದಳು.

"ನೀವು ಒಳ್ಳೇ ದೇವಿ ಇದ್ದಂತೆ. ಆದ್ದರಿಂದ ನಿಮ್ಮ ಮೇಲಿನ ನನ್ನ ಪ್ರೀತಿಯ ಕುರುಹಿಗಾಗಿ ನಿಮ್ಮ ಬಾಗಿಲ ಮೇಲೆ ನನ್ನ ಮುತ್ತಿನ ತುಟಿ ಒತ್ತಿದೆ" ಅಂದಳಂತೆ. ಈಗೆಲ್ಲಾ ಅರ್ಥ ವಾಯಿತು. ಆದರೆ ಎರಡನೆಯ ಸಲ ಯಾಕೆ ತುಟಿ ಒತ್ತಿದಳು ಅಂದಾಗ ವಿವರಣೆಯನ್ನು ಕೆಲಸ ದವಳ ಮಾತಲ್ಲೇ ಹೇಳಿದಳು. "ಅಲ್ರೀ ಇವತ್ತು ತಾನೇ ಬ್ಯಾರೆ ಕಂದು ಬಣ್ಣದ ಲಿಪಿಸ್ಟಿಕ್ ತಕ್ಕೊಂಡೆ. ಹಿಂದಿನ ಬಣ್ಣಕ್ಕೂ ಈ ಬಣ್ಣಕ್ಕೂ ಏನು ವ್ಯತ್ಯಾಸವೆಂದು ನೋಡಲು ಅದರ ಪಕ್ಕದಲ್ಲೇ ಇನ್ನೊಂದು ಸಲ ತುಟಿ ಒತ್ತಿದೆ. ಅಂದ್ರೆ, ನಿಮ್ಮ ಮೇಲೆ ನನ್ನ ಪ್ರೀತಿ ಎರಡರಷ್ಟಾಯಿತು ನೋಡಿ!" ನನ್ನಾಕೆಗೆ ಅವಳ ಪ್ರೀತಿ ನೋಡಿ ಖುಷಿ, ನನಗೋ ಎಲ್ಲಿಲ್ಲದ ಸಂಕಟ.

"ಈ ಸಿನಿಮಾ ಸಂಸ್ಕೃತಿ ಈ ಹಣದ ಹುಚ್ಚು ಎರಡನ್ನೂ ಇಲ್ಲಿಗೇ ನಿಲ್ಲಿಸಲು ಹೇಳು, ನಿನ್ನ ಪ್ರೀತಿಯ ಕೆಲಸದಾಕೆಗೆ" ಎಂದು ಅರಚಿದೆ. "ಅವಳ ಬಣ್ಣದ ಹುಚ್ಚು ಹೆಚ್ಚಿದಷ್ಟೂ, ನಿನ್ನ ಮೇಲಿನ ಪ್ರೀತಿ ಹೆಚ್ಚಿದಷ್ಟೂ ನನ್ನ ರಕ್ತದ ಒತ್ತಡವೂ ಹೆಚ್ಚುತ್ತಾ ಹೋದೀತು." ಎಂದಾಗ ನನ್ನಾಕೆ ಕಿಸಕ್ಕನೆ ನಕ್ಕಳು!! ಇದು ನೋಡಿ, ಬಣ್ಣದ ಬೊಂಬಾಯಿನ ಮೊದಲ ಬಣ್ಣದ ಅನುಭವ. ✡



ಬೆಂಜಮಿನ್ ಫ್ರಾಂಕ್‌ಲಿನ್‌ನ ಪುಸ್ತಕದ ಅಂಗಡಿಯ ಹೊರಗೆ ಕಾರಕೂನನೊಬ್ಬ ಕೆಲಸ-ದಲ್ಲಿ ಮಗ್ನನಾಗಿದ್ದ. ಒಬ್ಬ ಗಿರಾಕಿ ಒಂದು ಪುಸ್ತಕವನ್ನು ನಿರ್ದೇಶಿಸಿ ಇದರ ಬೆಲೆ ಯೇನೆಂದು ಕೇಳಿದ. "ಒಂದು ಡಾಲರ್" ಎಂದ ಕಾರಕೂನ. "ಎಷ್ಟೂ ಕಡಿಮೆಯಿಲ್ಲವೆ?" "ಇಲ್ಲ" "ನಿಮ್ಮ ಮಾಲಿಕರೆಲ್ಲಿ?" "ಒಳಗೆ ಕೆಲಸದಲ್ಲಿದ್ದಾರೆ" "ನಾನು ಅವರನ್ನು ತುಸು ಕಾಣಬೇಕಾಗಿದೆ."

ಫ್ರಾಂಕ್‌ಲಿನ್ ಹೊರಗೆ ಬಂದ. ಆತನನ್ನು ಕಂಡೊಡನೆಯೇ ಗಿರಾಕಿಯು "ಈ ಪುಸ್ತಕದ ಬೆಲೆಯೇನು?" ಎಂದ. "ಒಂದೂ ಕಾಲು ಡಾಲರು." "ಈಗ ಮಾತ್ರ ನಿಮ್ಮ ಕಾರಕೂನ ಒಂದು ಡಾಲರ್ ಎಂದಿದ್ದನಲ್ಲ?" "ಹೌದು, ಈಗ ನಾನು ಕೆಲಸ ಬಿಟ್ಟು ಬಂದುದರಿಂದ ನನ್ನ ವೇಳೆ ನಷ್ಟವಾಯಿತು. ಅದಕ್ಕೆ ಬೆಲೆಯಿಲ್ಲವೇ?" ಗಿರಾಕಿ ಚಕಿತನಾದ.

"ಹಾಗಾದರೆ ಕಡಿಮೆಯೆಂದರೆ ಎಷ್ಟಕ್ಕೆ ಕೊಡುವಿರಿ?"

"ಒಂದೂವರೆ ಡಾಲರಿಗೆ"

"ಈಗ ಮಾತ್ರ ಒಂದೂ ಕಾಲು ಡಾಲರೆಂದು ನೀವೆ ಹೇಳಿದ್ದಿರಲ್ಲ?"

"ಹೌದು, ಹೀಗೆಯೇ ಮಾತು ಬೆಳೆಸಿ ವೇಳೆ ಕಳೆದಂತೆ ಬೆಲೆಯೂ ಹೆಚ್ಚುವುದು" ಎಂದು ಫ್ರಾಂಕ್‌ಲಿನ್ ಗಂಭೀರತೆಯಿಂದ ನುಡಿದ. ಗಿರಾಕಿ ಪುಸ್ತಕ ಕೊಂಡ. ಸಮಯಕ್ಕೂ ಬೆಲೆ-ಯಿದೆಯೆಂಬುದನ್ನು ಅರಿತ.

(ಸಂಗ್ರಹ) ವಿ. ಕೆ. ರೇಣುಕಾ



ಡಾ. ಸುನಂದಾ ಕುಲಕರ್ಣಿ

# ದ್ರಾಕ್ಷಿಯ ಬಳ್ಳಿ

ದ್ರಾಕ್ಷಿಯ ಬಳ್ಳಿ ಎಂದಾಕ್ಷಣ ಸಿಹಿ-ಹುಳಿಯು ತುಂಬಿದ ದ್ರಾಕ್ಷಿಯ ನೆನಪಾಗಿ ಬಾಯಲ್ಲಿ ನಿಮಗೆ ನೀರೂರಬಹುದು. ಆದರೆ ಇದು ತಿನ್ನುವ ದ್ರಾಕ್ಷಿಯಲ್ಲ. ತಾಯು-ಗರ್ಭದಲ್ಲಿ ಬೆಳೆಯುವ ದ್ರಾಕ್ಷಿ. ಇದಕ್ಕೆ ಇಂಗ್ಲೀಷಿನಲ್ಲಿ Vericular mole ಇಲ್ಲವೆ Hydatidi mole ಎಂತಲೂ ಅನ್ನು-ತ್ತಾರೆ.

ಗರ್ಭದಲ್ಲಿ ಮಗುವಿಲ್ಲದೆ ಈ ಬಳ್ಳಿಗಳೇಕೆ ಬೆಳೆಯುತ್ತವೆಂಬುದು ತಿಳಿಯದು. ಆದರೆ ಈ ಬಳ್ಳಿಯು ೨೦೦೦-೨೫೦೦ರಲ್ಲಿ ಒಂದರಂತೆ ಯುರೋಪಿಯನ್ ಜನಾಂಗದಲ್ಲಿ ಕಂಡು ಬಂದರೆ, ೫೦೦-೬೦೦ ರಲ್ಲಿ ಒಂದರಂತೆ ಏಶಿಯಾದಲ್ಲಿ ಕಂಡುಬರುತ್ತದೆ. ಅದರಲ್ಲೂ ಹೆಚ್ಚಾಗಿ ಹಾಂಗ್‌ಕಾಂಗ್, ಫಿಲಿಪಾಯನ್ಸ್, ಸಿಂಗಪುರ, ಥಾಯ್‌ಲ್ಯಾಂಡ್, ಮಲೇಶಿಯಾಗಳಲ್ಲಿ ಇನ್ನೂ ಹೆಚ್ಚಾಗಿ ಕಂಡುಬರುತ್ತದೆ!

ಭಾರತದಲ್ಲಿ ಕೂಡ ಉತ್ತರ ಹಿಂದುಸ್ತಾನಕ್ಕಿಂತ ದಕ್ಷಿಣದಲ್ಲಿ ಇದರ ಪ್ರಮಾಣ ಹೆಚ್ಚು.

ಫಲಿತ ಅಂಡವು ಅರ್ಧಭಾಗವನ್ನು ತಂದೆಯಿಂದ ಪಡೆದಿದ್ದರೆ, ಇನ್ನರ್ಧಭಾಗವನ್ನು ತಾಯಿಯಿಂದ ಪಡೆದಿರುತ್ತದೆ. ತಂದೆಯಿಂದ ಪಡೆದ ಅರ್ಧವನ್ನು ತಾಯಿಯ ದೇಹಕ್ಕೆ ಸಹಿಸಲಸಾಧ್ಯವಾದಾಗ ಇಂಥ ಪ್ರಮೇಯುವೇಳುತ್ತದೆ. ಸಾಧಾರಣವಾಗಿ ತಾಯಿಯು ಗರ್ಭವತಿಯಿರುವಾಗ ಮಗುವು ಹುಟ್ಟುವತನಕ ತಂದೆಯಿಂದ ಬಂದುದನ್ನು ಸಹಿಸಲು ಸಾಧ್ಯವಾಗುವಂತೆ ಶರೀರದಲ್ಲಿ ಮಾರ್ಪಾಡುಗಳಾಗುತ್ತವೆ. ಇಂಥ ಮಾರ್ಪಾಡುಗಳು ಸರಿಯಾಗಿ ಆಗದಿದ್ದಲ್ಲಿ, ದ್ರಾಕ್ಷಿಯ ಬಳ್ಳಿಯಂಥ ಬೆಳವಣಿಗೆ ಅಲ್ಲಿ ಆಗುವುದು ಸಾಧ್ಯವಿದೆಯೆಂದು ಕೆಲವರ ವಾದ.

ದ್ರಾಕ್ಷಿ ಬಳ್ಳಿಯು ಏಶಿಯದಲ್ಲಿ ಹೆಚ್ಚಾಗಿ ಕಾಣುವುದರಿಂದ ಅದು ಕೆಲವು ಜನಾಂಗಗಳಿಗೇ ಮೀಸಲೆಂಬಂತೆ ಕಾಣಸಿಗುತ್ತದೆ. ಅದು ಜನಾಂಗಕ್ಕೆ ಸಂಬಂಧ ಪಟ್ಟದೆಯೋ ಇಲ್ಲವೋ ಅಥವಾ ಆ ಜನಾಂಗಗಳು ಸೇವಿಸುವ ಆಹಾರದ ಮೇಲೆ ಅವಲಂಬಿಸಿದೆಯೋ ತಿಳಿಯದು. ಇದು ಹೆಚ್ಚಾಗಿ 'ಅ' ಗುಂಪಿನ ರಕ್ತವಿರುವ ಇಲ್ಲವೆ 'ಅಬ' ಗುಂಪಿನ ರಕ್ತವಿರುವ ತಾಯಂದಿರಲ್ಲಿ ಕಂಡು ಬರುವದು. 'ಅ' ಗುಂಪಿನ ರಕ್ತದ ತಾಯಿಗೆ ಅದೇ ಗುಂಪಿನ ಗಂಡ ಸಿಕ್ಕರೆ ಮತ್ತೆ ಇದರ ಸಾಧ್ಯತೆ ಇನ್ನಷ್ಟು ಕಡಿಮೆ. ಆದರೆ ಅದೇ ತಾಯಿಗೆ 'O' ಗುಂಪಿನ ಗಂಡ ಸಿಕ್ಕರೆ ಬಳ್ಳಿಯಾಗುವ ಸಾಧ್ಯತೆ ಹೆಚ್ಚು.

ದ್ರಾಕ್ಷಿ ಬಳ್ಳಿಯು ಬೆಳೆದ ತಾಯಿಯು ತಾನು ಬಸಿರಿ ಎಂದು ಸಂತೋಷದಿಂದ ಬೀಗುತ್ತಿರುವಾಗ ಅವಳಿಗೆ ಅನೇಕ ತೊಂದರೆಗಳಾಗುತ್ತವೆ. ಈ ಬಳ್ಳಿಯು ಮೊದಲ ಬಸಿರಿನಲ್ಲಿ ಕಾಣುವ ಸಂಭವ ಹೆಚ್ಚು. ಕೆಲವು ಸಲ ವರ್ಣರೇಷೆಗಳಲ್ಲಿ ಹೆಚ್ಚು ಕಡಿಮೆಯಾದ ಮಗುವು ಬಸಿರಿನಲ್ಲಿರುವಾಗ ಈ ತೊಂದರೆಯಾಗಬಹುದು. ಅಂತೂ ಹುಟ್ಟುವ ಮಗುವಿನ ಬದಲಿಗೆ ಗರ್ಭಾಶಯವು ಚಿಕ್ಕ ಚಿಕ್ಕ ದ್ರಾಕ್ಷಿಗಳಂತೆ ಕಾಣುವ ನೀರು ತುಂಬಿದ ಗುಳ್ಳೆಗಳನ್ನು ತುಂಬಿಕೊಂಡಿರುತ್ತದೆ.

ಇಂಥ ತಾಯಂದಿರಲ್ಲಿ ಕಾಲು ಉಬ್ಬಿ ರಕ್ತದ ಒತ್ತಡವು ಹೆಚ್ಚಾಗಿ ತಲೆ ತಿರಗಬಹುದು. ಮಧ್ಯೆ-ಮಧ್ಯೆ ಅವರಿಗೆ ರಕ್ತಸ್ರಾವವಾಗಬಹುದು. ತಿಂಗಳುಗಳು ಕಡಿಮೆಯಿದ್ದರೂ ಏನು ಅವಳಿ ಮಕ್ಕಳೆ? ದಿನ ತುಂಬಿದೆಯೇ? ಎಂಬ ನೂರಾರು ಇತರ ಹೆಂಗಳೆಯರ ಪ್ರಶ್ನೆಗಳನ್ನು ಅವರು ಎದುರಿಸಬೇಕಾಗುತ್ತದೆ.

ಕೆಲವು ದ್ರಾಕ್ಷಿ ಬಳ್ಳಿಗಳು ಏಡಿಹುಣ್ಣಿಗೂ ತಿರುಗಿಕೊಳ್ಳಬಹುದು. ಇವು ಬಾಣಂತನವಾದ ನಂತರವಾಗಲೀ, ಗರ್ಭಪಾತವಾದ ನಂತರವಾಗಲಿ ಕೆಲವು ದಿನಗಳಿಂದ ಹಿಡಿದು ೨೦ ವರ್ಷಗಳಾದ ನಂತರವೂ ಕಾಣಸಿಗಬಹುದು!!

ಏಡಿಹುಣ್ಣು ಶರೀರದ ಯಾವುದೇ ಭಾಗದಲ್ಲಾದರೂ ಅವುಗಳನ್ನು ಪೂರ್ತಿ ಹೋಗಲಾಡಿಸಲಾಗದು ಎಂಬುದು ಸರ್ವವಿದಿತ. ಆದರೆ ಇಲ್ಲಿ ಮಾತ್ರ ಅದಕ್ಕೆ ಅವಕಾಶವಿದೆ. ದ್ರಾಕ್ಷಿಯ ಹಣ್ಣಿನ ಏಡಿಗಂತಿಯಾದವರು ಪೂರ್ತಿ ಗುಣವಾಗಿ ಚೆಂದುಳ್ಳ ಮಕ್ಕಳನ್ನು ಹೆತ್ತಿದ್ದಾರೆ.

ಹೊಸ ಹೊಸ ಯಂತ್ರಗಳು, ಹೊಸ ಹೊಸ ತರಹದ ಸಲಕರಣೆಗಳು ಬಂದ ಈಗಿನ ಕಾಲದಲ್ಲಿ ದ್ರಾಕ್ಷಿಯ ಬಳ್ಳಿಯನ್ನು ಬೇಗ ಕಂಡುಹಿಡಿಯಬಹುದು. ಈ ರೋಗವು ನಿಮ್ನ ವರ್ಗದವರಲ್ಲಿ ಹೆಚ್ಚಾಗಿ ಕಂಡುಬರುವದು. ಸರಿಯಾದ ಚಿಕಿತ್ಸೆಯನ್ನು ಸರಿಯಾದ ವೇಳೆಗೆ ಮಾಡಿದರೆ ಎಲ್ಲ ತರಹದ ಅನಾಹುತಗಳನ್ನು ನಿವಾರಿಸಬಹುದು. ✻



# ಧೂಮಕೇತು ದರ್ಶನದ ಫಲಶ್ರುತಿ

ಜಿ. ಟಿ. ನಾರಾಯಣರಾವ್

ಹಾಲೀಯ ಧೂಮಕೇತು ಈಗ ಗತ ವೈಭವ. ವೈಭವವೇನು ಬಂತು? ಈ ಸಲದ ದರ್ಶನದಲ್ಲಿ ಬೆಳಕಿಗಿಂತ ಹೊಗೆಯೇ ಜಾಸ್ತಿ. ವೀಕ್ಷಣೆಯ ದೃಷ್ಟಿಯಿಂದ ಸೂರ್ಯ-ಹ್ಯಾಲೀ-ಭೂಮಿ ವಿನ್ಯಾಸ ಅನುಕೂಲವಾಗಿರದಿದ್ದುದೇ ಇದರ ಕಾರಣ. ಅಂತೂ ಪ್ರಪಂಚವನ್ನು ನಡುಗಿಸಿದ ಒಂದು ದುರ್ಘಟನೆ ಈಗ ಸಂದ ಅಧ್ಯಾಯ. ಈ ಸಂದರ್ಭದಲ್ಲಿ ಧೂಮಕೇತುವಿನಿಂದ ಪ್ರಪಂಚಕ್ಕೆ ಒಟ್ಟಾಗಿ ಮತ್ತು ವ್ಯಕ್ತಿಗೆ ಬಿಡಿಯಾಗಿ ಏನಾದರೂ ಅಪಾಯವಿದೆಯೇ ಎಂದು ಪರಿಶೀಲಿಸುವುದು ಯುಕ್ತವಾಗಿದೆ.

ವಿಜ್ಞಾನ ಲೇಖಕ ಐಸಾಕ್ ಅಸಿಮಾವ್ Change of Space and Time ಎನ್ನುವ ಲೇಖನದಲ್ಲಿ ಇಂಥ ಒಂದು ಪ್ರಯತ್ನ ಮಾಡಿದ್ದಾರೆ. ಐತಿಹಾಸಿಕ ದಾಖಲೆಗಳ ಪ್ರಕಾರ ಹ್ಯಾಲೀ ಕ್ರಿಸ್ತಶಕ ೪೬೭ರಿಂದ ಕ್ರಿಸ್ತಶಕ ೧೯೧೦ರ ತನಕ ಸರಾಸರಿ ೭೬.೭ ವರ್ಷಗಳ ಅವಧಿಯಲ್ಲಿ ಮೂವತ್ತೆರಡು ಬಾರಿ ಗೋಚರಿಸಿದೆ. ಆಯಾ ಸಂದರ್ಭದಲ್ಲಿ ಸಂಭವಿಸಿದ ದುರ್ಘಟನೆಗಳನ್ನು ಅವರು ವ್ಯವಸ್ಥಿತವಾಗಿ ಪಟ್ಟಿಮಾಡಿ ವೈಜ್ಞಾನಿಕ ಕಾರ್ಯಕಾರಣ ಸಂಬಂಧ ಸ್ಥಾಪಿಸಿದ್ದಾರೆ. ಕೆಲವು ಮಾದರಿಗಳನ್ನು ಇಲ್ಲಿ ಸಾರ ರೂಪದಲ್ಲಿ ಬರೆದಿದೆ.

೧ ಕ್ರಿಸ್ತಪೂರ್ವ ೪೬೭, ಪರ್ಶಿಯನರ ಮತ್ತು ಗ್ರೀಕರ ನಡುವೆ ಒಂದು ತಲೆಮಾರು ಪರ್ಯಂತ ಭೀಕರ ಯುದ್ಧ ಸಿಡಿದಿದೆ. ವಿಧಿ ೪೬೭ರಲ್ಲಿ ಧೂಮಕೇತುವನ್ನು ಎತ್ತಿ ಹಾರಿಸಿದೆ. ತಕೋ! ಮರುವರ್ಷವೇ ಗ್ರೀಕರ ನೌಕೆ ಪರ್ಶಿಯನರನ್ನು ಸದೆಬಡಿದಿದೆ. ಹೀಗೆ ಧೂಮಕೇತು ಗೋಚರವಾದಾಗ ಪೂರ್ಣಾಹುತಿ ಹಂತಕ್ಕೆ ಐದಿದ್ದ ಯುದ್ಧ ತನ್ನ ಬಲಿಯನ್ನು ಪೂಗದಸ್ತಾಗಿ ಕಬಳಿಸಿಯೇ ಶಮನವಾಗಿದೆ. (ಆ ವರ್ಷವೇ ಗ್ರೀಕ್ ನಾಗರಿಕತೆಯ ಸುವರ್ಣಯುಗ ಪ್ರಾರಂಭವಾಯಿತೆಂಬ ಸಂಗತಿ ಅಲಾಯಿದ.)

೨ ಕ್ರಿಸ್ತಪೂರ್ವ ೩೯೧, ಕ್ರಿಸ್ತಪೂರ್ವ ೭೫೩ರಲ್ಲಿ ಸ್ಥಾಪಿತವಾದ ರೋಮ್ ನಗರ ಶತಮಾನಗಳ ಅವಧಿಯಲ್ಲಿ ವಾಣಿಜ್ಯ, ಕಲೆ, ಅಧಿಕಾರ ಎಲ್ಲದರಯೂ ಉತ್ಸರ್ಪಿಣೀ ಸ್ಥಿತಿಗೆ ಏರಿ ೫೦೯ರಲ್ಲಿ ಗಣರಾಜ್ಯವಾಗಿ ವಿಜೃಂಭಿಸಿದೆ. ಅಲ್ಲಿಂದ ಮುಂದಕ್ಕೆ ಸಾಮ್ರಾಜ್ಯ ವಿಸ್ತರಣೆ ಅವ್ಯಾಹತವಾಗಿ ಸಾಗಿದೆ. ಇಷ್ಟಾಗುವಾಗ ೩೯೧ರಲ್ಲಿ ಧೂಮಕೇತು ಮೈದೋರಿ ಬರಲಿರುವ ಅವಸರ್ಪಿಣೀ ಸ್ಥಿತಿಗೆ ನಾಂದಿ ಹಾಕಿದೆ. ಅನಾಗರಿಕ ಗಾಲ್ ಸೈನಿಕರು

ಮರುವರ್ಷವೇ ನಾಗರಿಕ ರೋಮನ್ನರನ್ನು ಸೋಲಿಸಿ ಸಾಕ್ಷಾತ್ ರೋಮ್ ನಗರವನ್ನೇ ಆಕ್ರಮಿಸಿದ್ದಾರೆ. (ಆದರೆ ಬುದ್ಧಿವಂತ ರೋಮ-ನ್ನರು ದಡ್ಡ ಗಾಲಿಗರನ್ನು ಕುಯುಕ್ತಿಯಿಂದ ಓಂದಟ್ಟಿದರೆಂಬುದೂ ತದನಂತರ ಕಸಿ ಮಾಡಲ್ಪಟ್ಟವರಂತೆ ಇನ್ನಷ್ಟು ಊರ್ಜಿತ ಸ್ಥಿತಿಗೆ ಏರಿದರೆಂಬುದೂ ಇಲ್ಲಿ ಅಪ್ರಸ್ತುತ.)

೩ ಕ್ರಿಸ್ತಪೂರ್ವ ೩೧೫. ಗ್ರೀಕ್ ಸಾರ್ವಭೌಮ ಅಲೆಕ್ಸಾಂಡರ್ ಮಹಾಶಯ ೩೩೪–೩೨೩ ಅವಧಿಯಲ್ಲಿ ಕೈಗೊಂಡ ದಂಡಯಾತ್ರೆಗಳಿಂದ ಜಗದೇಕವೀರನೆಂಬ ಬಿರುದಿಗೆ ಪಾತ್ರನಾಗಿದ್ದಾನೆ. ಆದರೆ ಆ ವೇಳೆಗಾಗಲೇ ೩೧೫ರಲ್ಲಿ ಗೋಚರವಾಗಲಿದ್ದ ಧೂಮಕೇತುವಿನ ಕರಾಳ ಛಾಯೆ ಅವನ ಮೇಲೆಯೂ ಅವನ ಸಾಮ್ರಾಜ್ಯದ ಮೇಲೆಯೂ ಕವಿದಿದೆ. ೩೨೩ರಲ್ಲಿ ಅವನು ಮಡಿದಿದ್ದಾನೆ. ಮುಂದೆ ಅವನ ಚಕ್ರಾಧಿಪತ್ಯ ಅಂತಃಕಲಹಗಳಿಂದ ಹರಿಹಂಚಾಗಿ ಒಡೆದು ಧೂಮಕೇತು ದೃಷ್ಟಿ ಬೀಳುವ ವೇಳೆಗೆ ಗತವೈಭವವಾಗಿದೆ. ದೇವ ಸಂದೇಶವನ್ನು ಗ್ರಹಿಸದೇ ಅಲೆಕ್ಸಾಂಡರ್ ಹಾಳಾಗಿ ಹೋದ. ನಂಬದ ರಾವಣನಿಗೆ ಯಮನಾದ!

೪ ಕ್ರಿಸ್ತಪೂರ್ವ ೨೪೦. ಅಲೆಕ್ಸಾಂಡರನ ಮರಣಾನಂತರ ಗ್ರೀಕ್ ಸಾಮ್ರಾಜ್ಯ ಮೂರು ಪರಸ್ಪರ ವೈರಿ ರಾಜ್ಯಗಳಾಗಿ ಒಡೆದುಹೋಗಿದೆ. ಇವುಗಳ ನಡುವೆ ನಿರಂತರ ಕದನ. ಹೀಗೆ ಪೂರ್ವ ಯೂರೋಪ್ ಒಂದು ತೆರನಾದ ತಹತಹ ಸ್ಥಿತಿಯಲ್ಲಿರುವಾಗ ಪಶ್ಚಿಮ ಯೂರೋಪಿನಲ್ಲಿ ರೋಮ್ ಮತ್ತೆ ಪ್ರಬಲ ಸೇನಾ ಪ್ರಭುತ್ವವಾಗಿ ಹೆಡೆಯೆತ್ತಿದೆ. ೨೪೦ರಲ್ಲಿ ಧೂಮಕೇತುವಿನ ಆಗಮನವೂ ಪೂರ್ವ ಪಶ್ಚಿಮ ರಾಷ್ಟ್ರಗಳ ನಡುವಿನ ಸಮರವೂ ಹೊಂದಾಣಿಕೆಗೊಂಡದ್ದು ಖಂಡಿತವಾಗಿಯೂ ಗಗನದ ಅಜ್ಞಾತ ಆಗಂತುಕನ ಪ್ರಭಾವದಿಂದಲೇ– ದೇವರು ಹೀಗೆ ದುಷ್ಟ ಜನರಿಗ ಶಿಕ್ಷೆ ವಿಧಿಸಿದ್ದಾನೆ.

೫ ಕ್ರಿಸ್ತಪೂರ್ವ ೧೬೩, ರೋಮ್ ಚಕ್ರಾಧಿಪತ್ಯದ ಪುನರಾವರ್ತಿತ ಹತಿ ತಡೆಯಲಾಗದೆ ಗ್ರೀಕ್ ರಾಷ್ಟ್ರಗಳು ನುಚ್ಚು ನುರಿ ಆಗಿವೆ. ಫಲವಾಗಿ ಸ್ವತಂತ್ರ ಯಹೂದ್ಯ ರಾಷ್ಟ್ರ ತಲೆ ಎತ್ತಿದೆ. ಈ ರೀತಿ ಪ್ರಪಂಚ ಎರಡು ವೈರಿ ಬಣಗಳ ರಣರಂಗವಾದದ್ದು ೧೬೩ರಲ್ಲಿ ಅವತರಿಸಿದ ಧೂಮಕೇತುವಿನ ಪ್ರತ್ಯಕ್ಷ ಪ್ರಭಾವ.

೬ ಕ್ರಿಸ್ತಪೂರ್ವ ೮೭, ಈ ಧೂಮಕೇತು ಪ್ರತ್ಯಕ್ಷವಾಗುವ ಅದೇ ಮೊದಲು ವಿಸ್ತಾರ ರೋಮ್ ಸಾಮ್ರಾಜ್ಯದೊಳಗೆ ಅಂತಃಕಲಹಗಳು ಬುಸುಗುಟ್ಟಿವೆ. ರಾಷ್ಟ್ರಶಕ್ತಿ ಯಾರಲ್ಲಿ ಕೇಂದ್ರೀಭವಿಸಿದೆ— ಪ್ರಜಾಪ್ರತಿನಿಧಿಗಳಲ್ಲೋ? ಸೇನಾನಾಯಕರಲ್ಲೋ? ಸಂಸತ್ಸದನದ ವಾಗ್ಯುದ್ಧಗಳಿಗಿಂತ ಸಮರಭೂಮಿಯ ಸ್ನಾಯುಬಲ ಪ್ರದರ್ಶನಗಳೇ ಅಧಿಕ ಪ್ರಾಯೋಗಿಕವೆನಿಸಿವೆ ರಟ್ಟೆ ತ್ರಾಣ ಉಳ್ಳವರಿಗೆ. ಧೂಮಕೇತು ಬಂದಾಗ ಇದರ ಮಾನುಷ ರೂಪವಾದ ಜನರಲ್ ಸಲ್ಲಾ ಎಂಬಾತ ರೋಮಿನಲ್ಲಿ ಸೇನಾಕ್ರಾಂತಿ ನಡೆಸಿ ವಿರೋಧಿಗಳನ್ನು ಸಂಹರಿಸಿ ಅಧಿಕಾರಾರೂಢನಾಗಿದ್ದಾನೆ. ಇವನ ಪಕ್ಷದವರು ಧೂಮಕೇತುವಿಗೆ ನಮನ ಅರ್ಪಿಸಿದ್ದಾರೆ– ಅದು ಅನುಗ್ರಹಿಸಿದ ವರಕ್ಕಾಗಿ. ವಿರೋಧ ಪಕ್ಷದವರು ಸರ್ವಪೀಡೆಗಳ ಮೂಲವನ್ನೂ ಅದರಲ್ಲಿ ಗುರುತಿಸಿ ಅದಕ್ಕೆ ಶಾಪಹಾಕಿದ್ದಾರೆ— ಆದರೆ ಸಾರ್ವಜನಿಕವಾಗಿ ಅಲ್ಲ.

೭ ಕ್ರಿಸ್ತಪೂರ್ವ ೧೨, ಏಸು ಕ್ರಿಸ್ತನ ಖಚಿತ ಜನ್ಮವರ್ಷ ತಿಳಿದಿಲ್ಲ. ಆದರೆ ಬೆತ್ಲೆಹೇಮಿನ ನಕ್ಷತ್ರವೆಂದು ಪ್ರಸಿದ್ಧವಾದ ಈ ಧೂಮಕೇತುವಿನ ದರ್ಶನವೂ ಆ ಶಾಂತಿದೂತನ ಅವತಾರವೂ ಒಂದೇ ವೇಳೆ ಆಗಿರಬೇಕೆಂಬುದು ಆಸ್ತಿಕರ ನಂಬಿಕೆ. ಅತ್ತ ರೋಮನ್ ಸಾಮ್ರಾಜ್ಯದ ಉತ್ಕರ್ಷ ಮತ್ತು ವಿಸ್ತರಣೆ, ತತ್ಕಾರಣವಾಗಿ ವೈರಿ ಬಲಗಳ ಅಪಕರ್ಷ ಮತ್ತು ಮರ್ದನ ಸಾರೋದ್ಧಾರವಾಗಿ ನಡೆದಿದ್ದು ಪ್ರಸಕ್ತ ಧೂಮಕೇತು ಇವುಗಳಿಗೆ ಹೊಸ ಅರ್ಥ ನೀಡಿದೆ.

೩೩ ಕ್ರಿಸ್ತ ಶಕ ೧೯೮೬. (ಈ ವ್ಯಾಖ್ಯಾನ ನನ್ನದು; ಅಸಿಮಾವ್ ಅವರದಲ್ಲ.) ವರ್ತಮಾನ ಕಾಲದ ಕುತಂತ್ರ, ಕುವಾದ ಮತ್ತು ಕುಚೋದ್ಯ ಪರಂಪರೆ ಎಂಬುದಾಗಿ ಆಸ್ತಿಕ ಮಹಾಜನರಲ್ಲಿ ಕುಪ್ರಸಿದ್ಧವಾಗಿರುವ ವಿಜ್ಞಾನ ಮತ್ತು ತಂತ್ರವಿದ್ಯೆ, ಭಗವದ್ಭಕ್ತರು ಮತ್ತು ಆರ್ಷೇಯ ಋಷಿಗಳು ತಿಳಿಯಲಾರದ ಗೌಡಬಂಗಾಳ ಮಾಡಿ, ೧೯೮೨ರಷ್ಟು ಹಿಂದೆಯೇ ನವಗ್ರಹ ಯೋಗ

ಅಥವಾ ಗುರು ಪರಿಣಾಮ ಎಂಬ ದುಷ್ಟಕೂಟ ಮುಹೂರ್ತದಲ್ಲಿ ಹ್ಯಾಲೀಯನ್ನು ಅಕಾಲಿಕವಾಗಿ ಪತ್ತೆ ಹಚ್ಚಿವೆ. ಬ್ರಹ್ಮ ಸೃಷ್ಟಿಯಲ್ಲಿ ಪ್ರತಿಯೊಂದು ಆಕಾಶ ಘಟನೆಯೂ ದೈವ ನಿಯಂತ್ರಿತವಾಗಿ ಮಾನವನಿಗೆ ಯಥಾವಕಾಶ ಪ್ರಕಟವಾಗಬೇಕಾದದ್ದು ವಿಧಿನಿರ್ಣೀತ ನಿಯಮ ವಾಗಿರುವಲ್ಲಿ ಮಾನವ ತನ್ನ ಅತಿಜ್ಞಾನದ ಅವಜ್ಞೆ ಮತ್ತು ಅಹಂಕಾರಗಳಿಂದ ದೈವಸಂಕಲ್ಪ ವನ್ನು ಉಲ್ಲಂಘಿಸಿದ್ದರ ವಿಷಫಲ ಆಗಾಗಲೇ ಪ್ರಾಪ್ತವಾದದ್ದು ಹೇಗೆ ದೈವಬಲಕ್ಕೆ ಎದುರಾಗಿ ಪುರುಷಬಲ ನಿಷ್ಫಲವೆಂಬುದನ್ನು ಶ್ರುತಪಡಿಸಿದೆ. ಇದಕ್ಕೆ ನಿದರ್ಶನಗಳಾಗಿ ಅಮೆರಿಕದ ನಿಕ್ಸನ್ ಅವರ ವಿನಾಕಾರಣ ಮಾನಭಂಗ ಮತ್ತು ಅಧಿಕಾರಚ್ಯುತಿ, ರಶ್ಯಾದ ಬ್ರೆಝ್ನೇವ್ ಅವರ ಅಕಾಲ ಮರಣ ಮತ್ತು ಆ ದೇಶದೊಳಗಿನ ತುಮುಲ, ಇಂದಿರಾ ಗಾಂಧಿಯವರ ಕಗ್ಗೊಲೆ ಮತ್ತು ಭಾರತದೊಳಗಿನ ಹಾಲಾಹಲ ಅಲ್ಲದೇ ಮೆಕ್ಸಿಕೊದಲ್ಲಿಯ ಭೂಕಂಪನ ದುರಂತ, ಚಾಲೆಂಜರ್ ಆಕಾಶ ಲಾಳಿಯ ಸ್ಫೋಟನೆ, ಕರ್ನಾಟಕದಲ್ಲಿಯ ಬರಗಾಲ ಮುಂತಾದವನ್ನು ಹೆಸರಿಸಬಹುದು.

*

"ಇದು ಭಾಷಾ ಚಮತ್ಕಾರ, ತಾರ್ಕಿಕ ಕುಚೋದ್ಯ, ಸೈತಾನ ಮಾಡಿದ ವೇದಪಠಣ" ಎಂದು ಮುಂತಾಗಿ ನೀವು ಗೊಣಗುವುದು ನನಗೆ ಕೇಳುತ್ತಿದೆ. ತಪ್ಪು ವಿಜ್ಞಾನದ್ದಲ್ಲ, ವೈಜ್ಞಾನಿಕ ವಿಧಾನದ್ದೂ ಅಲ್ಲ, ಘಟನೆಗಳ ಅನುಕ್ರಮ ದ್ದಂತೂ ಖಂಡಿತವಾಗಿಯೂ ಅಲ್ಲ — ಅದು ಫಲಜ್ಯೋತಿಷ್ಯದ್ದು, ಅದರ ನಯವಂಚನೆಯ ಮಾರ್ಗದ್ದು, ಲೌಕಿಕ ಘಟನೆಗಳನ್ನು ಇಲ್ಲಿಯ ಚೌಕಟ್ಟಿನಲ್ಲಿ ಅರ್ಥವಿಸಲು ಪ್ರಯತ್ನಿಸದೆ ಗಗನ ಘಟನೆಗಳ ಜೊತೆ ಸಂಬಂಧಿಸಲು ನಡೆಸುವ ಅವೈಜ್ಞಾನಿಕ ವಿಧಾನದ್ದು.

ನಾನು ಇಲ್ಲಿ ಸಂಕ್ಷೇಪಿಸಿ ಬರೆದಿರುವುದಕ್ಕಿಂತ ಎಷ್ಟೋ ವಿಸ್ತಾರವಾಗಿ ಹ್ಯಾಲೀಯ ಮೂವತ್ತೆ ರಡು ಕ್ರಮಾಗತ ದರ್ಶನಗಳಿಗೂ ವ್ಯಾಖ್ಯಾನ ಬರೆದಿರುವ ಅಸಿಮಾವ್ ಸಮಾರೋಪವಾಗಿ ಬರೆದಿರುವ ಮಾತು ಗಮನಾರ್ಹವಾಗಿದೆ:

"ತುಂಬ ಪರಿಣಾಮಕಾರಿಯಾಗಿದೆ, ಅಲ್ಲವೇ? ಅಂದಮೇಲೆ ಫಲಜ್ಯೋತಿಷ್ಯದಲ್ಲಿ ಕೊಂಚವಾ ದರೂ ಹುರುಳು ಇರಲೇಬೇಕು!"

"ಇಲ್ಲ, ನಿಜಕ್ಕೂ ಇಲ್ಲ. ನನ್ನ ತುಸು ಅವಿ ನಯವನ್ನು ನೀವು ಕ್ಷಮಿಸುವಿರಾದರೆ, ಈ ಮೇಲಿನ ಪಟ್ಟಿ ನನ್ನ ಕಲ್ಪನಾಸಾಮರ್ಥ್ಯ ಪ್ರದ ರ್ಶಿಸಿರುವ ಅದ್ಭುತ ಚಳಕ. ಕ್ರಿಸ್ತಪೂರ್ವ ೭೦೦ ರಿಂದ ತೊಡಗಿ ಕ್ರಮ ಅಥವಾ ಕ್ರಮರಹಿತ ಅವಧಿಗಳಲ್ಲಿ ಆಳವಡಿಸಿರುವ ಮೂವತ್ತಮೂರು ಇಸವಿಗಳ ಯಾವುದೇ ಯಾದಿಯನ್ನು ನನಗೆ ಕೊಡಿ ಮತ್ತು ಯೋಚಿಸಲು ಕೊಂಚ ಅವಕಾಶ ನೀಡಿ. ಈ ಮೇಲಿನದರಷ್ಟೇ ಪರಿಣಾಮಕಾರಿ ಯಾದ ನಿರ್ಣಾಯಕ ಘಟನೆಗಳ ಒಂದು ಪಟ್ಟಿ ಯನ್ನು ಖಾತ್ರಿ ತಯಾರಿಸಿಕೊಡುತ್ತೇನೆ. ಇಂಥ ಐವತ್ತು ಪಟ್ಟಿಗಳು ನಮ್ಮ ಎದುರಿರು ವಾಗ—ಮುಖ್ಯವಾಗಿ ಪೌರಸ್ತ್ಯ ಇತಿಹಾಸ, ತಂತ್ರವಿದ್ಯಾತ್ಮಕ ಪ್ರಗತಿ, ಸಾಂಸ್ಕೃತಿಕ ಘಟನೆಗಳು ಮುಂತಾದವನ್ನು ಕೂಡ ಪರಿಗಣಿಸಿದ್ದಾದರೆ— ಐವತ್ತು ವಿಭಿನ್ನ ವ್ಯಾಖ್ಯಾನಗಳನ್ನು ಮಂಡಿಸು ವುದು ತೀರ ಸುಲಭ. ಇವುಗಳ ಪೈಕಿ ಅತ್ಯು ತ್ತಮವಾದದ್ದು ಯಾವುದು? ಆಯುವುದು ಕಡು ಕಷ್ಟ."

ಕೆಲವು ವರ್ಷಗಳ ಹಿಂದೆ ಕಾಹೂಟೆಕ್ ಧೂಮ ಕೇತು ಸುದ್ದಿಯಲ್ಲಿದ್ದಾಗ (೧೯೭೩) ನನಗೆ ಆಕಾಶವಾಣಿಯಿಂದ 'ಧೂಮಕೇತು' ಬಗ್ಗೆ ೧೫ ಮಿನಿಟುಗಳ ಭಾಷಣ ನೀಡಲು ಕರೆ ಬಂದಿತು. ಯಥಾ ಕಾಲದಲ್ಲಿ ಹಸ್ತಪ್ರತಿ ಸಿದ್ಧಪಡಿಸಿ ಅಲ್ಲಿಯ ಅಧಿಕಾರಿಗೆ ಪೂರ್ವಭಾವಿ ಪರಿಶೀಲ ನಾರ್ಥ ಒಪ್ಪಿಸಿದೆ. ಇದನ್ನು ಏಕಾಗ್ರತೆಯಿಂದ ವಾಚಿಸಿದ ಅವರೆಂದರು: "ಎಲ್ಲ ಸರಿ. ಆದರೆ ಧೂಮಕೇತುವಿನ social function ಕುರಿತು ನೀವು ಏನೂ ಹೇಳಿರುವುದಿಲ್ಲವಲ್ಲ?"

"ಧೂಮಕೇತುವಿನ ಸಾಮಾಜಿಕ ಪಾತ್ರ? ಹಾಗೆಂದರೇನು? ಸ್ವಲ್ಪ ವಿವರಿಸಿ."

"ಅದೇ—ಧೂಮಕೇತು ಗೋಚರವಾದಾಗ ರಾಜರು ಸಾಯುತ್ತಾರೆ, ಪ್ರಪಂಚ ವಿಪತ್ಪರಂ ಪರೆಗೆ ತುತ್ತಾಗುತ್ತದೆ ಎಂದು ಮುಂತಾಗಿ ಶಾಸ್ತ್ರ ಹೇಳುತ್ತದಲ್ಲ?"

"ನೀವದನ್ನು ನಂಬುತ್ತೀರಾ?"

"ಖಂಡಿತವಾಗಿ! ಹಲವು ಶತಮಾನಗಳಿಂದ—ಪ್ರಾಯಶಃ ಮಾನವ ಹುಟ್ಟಿದಂದಿನಿಂದಲೇ—ಬೆಳೆದು ಬಂದಿರುವ ಈ ನಂಬಿಕೆ ದೇವರ ಅಸ್ತಿತ್ವದಷ್ಟೇ ಸತ್ಯವೆಂದು ಭಾವಿಸಿದ್ದೇನೆ. ಇಲ್ಲಿ ನೋಡಿ ಧೂಮಕೇತು ಅಪಾಯರಕ್ಷಕ ತಾಯಿತಿ."

ಅವರ ಮುಗ್ಧತೆ ಅರ್ಥವಾಗುವಂತಿದ್ದರೂ ಅಜ್ಞಾನ ಮತ್ತು ಈ ಅಜ್ಞಾನಾಧಾರಿತ ನಂಬಿಕೆ ಕ್ಷಮ್ಯವಾಗಿರಲಿಲ್ಲ. ಏಕೆಂದರೆ, ಅವರು ಆಧುನಿಕ ಯುಗದ ವಿಜ್ಞಾನ ಪದವೀಧರರು, ತಂತ್ರ ವಿದ್ಯೆಯ ಜೊತೆ ನಿತ್ಯ ವ್ಯವಹಾರವಿದ್ದವರು. ಆದರೂ ಮನಸ್ಸು ಮಾತ್ರ ಓಬೀರಾಯನ ಕಾಲದ ಮೊಡಕು ಮೂಲೆಯಲ್ಲಿ ಮುದುಡಿತ್ತು.

ನಾನೆಂದೆ: "ಒಂದು ನಂಬಿಕೆಯ ಪ್ರಾಚೀನತೆಯಾಗಲೀ ಬಹುಮತತ್ವವಾಗಲೀ ಅದರ ವೈಜ್ಞಾನಿಕತೆಯ ಮಾನಕವಲ್ಲ. ನೀವು ಹೇಳುತ್ತಿರುವುದೆಲ್ಲ ಮೂಢ ನಂಬಿಕೆಗಳು."

"ಹಾಗಾದರೆ ನಿಮ್ಮ ವಿಜ್ಞಾನ ಎಲ್ಲ ಸಮಸ್ಯೆಗಳಿಗೂ ಪರಿಹಾರ ನೀಡಬಲ್ಲದೇ? ಒಬ್ಬ ವಿಜ್ಞಾನಿ ಒಂದು ಕಾಲದಲ್ಲಿ ಗಹನ ಸತ್ಯವೆಂದು ಸಾರಿದ್ದನ್ನು ಇನ್ನೊಬ್ಬ ವಿಜ್ಞಾನಿ ಮುಂದೊಂದು ಕಾಲದಲ್ಲಿ ಅಪ್ಪಟ ಜೊಳ್ಳೆಂದು ತಿರಸ್ಕರಿಸಿ ಬೇರೆ ವಾದ ಮಂಡಿಸಿಲ್ಲವೇ? ಅರಿಸ್ಟಾಟಲನಿಂದ ತೊಡಗಿ ಟಾಲೆಮಿ, ಕೊಪರ್ನಿಕಸ್, ಕೆಪ್ಲರ್, ಗೆಲಿಲಿಯೋ ಮತ್ತು ನ್ಯೂಟನ್ ಮೂಲಕ ಐನ್‌ಸ್ಟೈನ್ ವರೆಗೆ ಖಗೋಳ ವಿಜ್ಞಾನ ನಡೆದು ಬಂದ ಹಾದಿಯೇ ಇದಕ್ಕೆ ನಿದರ್ಶನ."

ವಾದ ಯಾವಾಗ ತರ್ಕ ಮತ್ತು ಪ್ರಯೋಗದ ಗಟ್ಟಿ ನೆಲದಿಂದ ಉದ್ವೇಗ ಮತ್ತು ಮೊಂಡುತನದ ಜಾರು ನೆಲಕ್ಕೆ ಕುಸಿಯುತ್ತದೋ ಆಗ ಅದನ್ನು ಊರ್ಜಿತಗೊಳಿಸಲು ಪ್ರಯತ್ನಿಸುವುದು ವ್ಯರ್ಥ ಪಿಷ್ಟಪೇಷಣ. ನಾನು ಸಮಾರೋಪಿಸಿದೆ: "ಸರಿ, ನೀವು ಹೇಳಿದ ವಿಚಾರವನ್ನೇ ತೆಗೆದುಕೊಂಡು ನನ್ನ ವಾದವನ್ನು ಮಂಡಿಸಲು ಸಾಧ್ಯವಿದೆ. ಆದರೆ ಕಾಲಾವಕಾಶ ಸಾಲದು. ಅಲ್ಲದೇ ಆಗ ಧೂಮಕೇತುವಿನ ವಿಜ್ಞಾನ ವೃತ್ತಾಂತವನ್ನು ತೆಳುಗೊಳಿಸಬೇಕಾಗುತ್ತದೆ."

ನನ್ನ ಸ್ಥಾನ ಮತ್ತು ವಾದ ಪ್ರಬಲವಾಗಿದ್ದುದರಿಂದ ಅವರು ಅಸಮಾಧಾನದಿಂದಲೇ ಹಸ್ತಪ್ರತಿಯನ್ನು ಧ್ವನಿಮುದ್ರಿಸಲು ಮಂಜೂರು ಮಾಡಿದರು. ನಿಜ, ತಿಳಿದಿಲ್ಲವೆಂಬುದನ್ನು ತಿಳಿದಿಲ್ಲದಾತನಿಗೆ ತಿಳಿವಳಿಕೆ ನೀಡುವುದು ಹರಿಹರ ಬ್ರಹ್ಮರಿಗೂ ತಿಳಿದಿರದ ಅತಿ ಗೂಢ ವಿದ್ಯೆ. ವಾಸ್ತವವಾಗಿ 'ಪ್ರಾಜ್ಞ'ರ ಮೌಢ್ಯ ಅಜ್ಞರ ಮೌಢ್ಯಕ್ಕಿಂತ ಅಪಾಯಕಾರಿ.

ಧೂಮಕೇತುವಿನಿಂದ ಈ ಲೋಕಕ್ಕೆ ಅಥವಾ ಮಾನವನಿಗೆ ಹಾನಿ ಉಂಟೆಂದು ಅಂಗೀಕರಿಸಿ ಇದರ 'ವೈಜ್ಞಾನಿಕ' ಸಮರ್ಥನೆಗೆ ಹೊಂದಿಸುವ ಎಲ್ಲ ಘಟನೆಗಳೂ ಕಲ್ಪನೆಯ ಲಂಗುಲಗಾಮಿಲ್ಲದ ಬಾನ ಡೊಂಬರಲಾಗಗಳೆಂದು ಆಧುನಿಕ ವಿಜ್ಞಾನ ಪ್ರಾಯೋಗಿಕ ಪುರಾವೆಗಳಿಂದ ರುಜುವಾತಿಸಿದೆ. ಏಕೆಂದರೆ, ಧೂಮಕೇತುವಿನ ಆಕಾರ ಮತ್ತು ಗತಿ ವೃತ್ತಾಂತದಲ್ಲಾಗಲೀ ಮಾನವನೇತ್ರದ ರಚನೆ ಮತ್ತು ರಸಾಯನ ವೃತ್ತಾಂತದಲ್ಲಾಗಲೀ ಅಂದಿಗೂ ಇಂದಿಗೂ ಏನೂ ವ್ಯತ್ಯಾಸವಾಗಿರುವುದಿಲ್ಲ.

Cometomantia: A discourse of comets ಎಂಬ 'ಉದ್ಗ್ರಂಥ'ವನ್ನು ಲಂಡನ್ನಿನಲ್ಲಿ ೧೬೮೪ರಲ್ಲಿ ಪ್ರಕಟಿಸಲಾಯಿತು. "ಧೂಮಕೇತು ಆಗಮನ ವಿಪತ್ತಿನ ಪೂರ್ವಸೂಚನೆಯೇ? ಆಕಾಶಕಾಯಗಳನ್ನು ವೀಕ್ಷಿಸಿ ಭೂಮಿ ಮೇಲಿನ ಭವಿಷ್ಯ ಘಟನೆಗಳನ್ನು ಮುನ್ನುಡಿಯುವ ಫಲಜ್ಯೋತಿಷ್ಯ ಸಾಧುವೇ?" ಮುಂತಾದ ಸಮಕಾಲೀನ ಜ್ವಲಂತ ಪ್ರಶ್ನೆಗಳಿಗೆ ತಾರ್ಕಿಕ (ಸ್ವಲ್ಪಮಟ್ಟಿಗೆ ಕುಹಕ ಕೂಡ) ಉತ್ತರಗಳನ್ನು ನೀಡುವ ಪ್ರಯತ್ನವನ್ನು ಈ ಪುಸ್ತಕದಲ್ಲಿ ನೋಡಬಹುದು:

"ಧೂಮಕೇತುಗಳು ವಾಯುವನ್ನು ಮಲಿನಗೊಳಿಸಿ ಅಹಿತಕರವಾಗಿಸುತ್ತವೆ ಮತ್ತು ಭೂಮಿಯ ಜೀವರಸಗಳನ್ನು ನಿರ್ನಾಮಗೊಳಿಸುತ್ತವೆ ಎಂಬುದನ್ನು ಒಪ್ಪಿದ್ದೇ ಆದರೆ ಬಂಜರುನೆಲ ಮತ್ತು ಶುಷ್ಕಫಲ ಅವುಗಳ ಸಹಜ ಪರಿಣಾಮವಾಗುವುದು ಶತಸ್ಸಿದ್ಧ. ದುರ್ಭಿಕ್ಷ, ಅಲಭ್ಯತೆ ಮತ್ತು ಕ್ಷಾಮ ಬೆನ್ನಾಲಿನಲ್ಲಿ ಬಂದು ಬಡಿಯುತ್ತವೆ. ಇವೆಲ್ಲವುಗಳ ಅನಿವಾರ್ಯ ಫಲವೆಂದರೆ ಅನಾರೋಗ್ಯ, ರೋಗ

ರುಜಿನ, ನಾಶ, ಸಾವು ಇತ್ಯಾದಿ. ಅಲ್ಲಿಯೂ ಮಹಾಪುರುಷರ ಹಠಾತ್ ಮರಣ ಸಾಧಾರಣ ಘಟನೆ ಆಗುತ್ತದೆ. ತಮ್ಮ ಬಲು ನವುರು ಆಹಾರ ಕ್ರಮ, ವಿಲಾಸಮಯ ಜೀವನ ಮತ್ತು ಬದುಕಿನಲ್ಲಿ ಅನುಸರಿಸುವ ಅಸಾಧಾರಣ ಮುನ್ನೆಚ್ಚರಿಕೆ ಇವುಗಳಿಂದ ಈ ಕುಲೀನ ವಂಶಜರು (ಧೂಮಕೇತು ತಾಡನೆಗೆ) ಭೂರಿ ಮಂದಿಗಿಂತ ಹೆಚ್ಚು ಸುಲಭವಾಗಿ ಗ್ರಾಸವಾಗುತ್ತಾರೆ."

ಇಲ್ಲಿಯ ಸುಕುಮಾರ ವ್ಯಂಗ್ಯ ಅಂದಿನ ಫಲಜ್ಯೋತಿಷ್ಯಾಂಧರಿಗೆ ಖಂಡಿತವಾಗಿಯೂ ತಟ್ಟಿರಲಾರದು. ಇಂದಿನವರಿಗೆ?

ಜೂಲಿಯಸ್ ಸೀಸರನ (ಕ್ರಿಸ್ತಪೂರ್ವ ೧೦೦-೪೪) ಕೊಲೆ ಆದಾಗ ಅಥವಾ ಆಗುವ ಅದೇ ಮುನ್ನ ಧೂಮಕೇತು ಗೋಚರಿಸಲಿಲ್ಲ. ಸೃಷ್ಟಿಕರ್ತ ತನ್ನ ಮನೆಗೆಲಸ ಮಾಡಲು ಮರೆತಂಥ ಪರಿಸ್ಥಿತಿ! ಆದರೆ ಹಲವು ತಿಂಗಳ ಬಳಿಕ ಗಗನದಲ್ಲೊಂದು ಉಜ್ವಲ ಧೂಮಕೇತು ಪ್ರಕಾಶಿಸಿತು: When beggars die, there are no comets seen. The heavens themselves blaze forth the death of princes. (ಕಾಣಿಸವು ಧೂಮಕೇತುಗಳು ತಿರುಕರು ಸಾಯೆ. ಸಾಮ್ರಾಟರಂತ್ಯಮಂ ಬಾನೆ ತಾನುರಿದು ಬಿತ್ತರಿಸುವುದು.) ಶೇಕ್‌ಸ್ಪಿಯರ್ ಜಗಜ್ಜಾಹೀರು ಗೊಳಿಸಿದ ಈ ಸಾರ್ವಕಾಲಿಕ ಸಿದ್ಧಾಂತವನ್ನು(?) ಜನ ಆ ಸಂದರ್ಭದಲ್ಲಿ ಬದಿಗೊತ್ತಿ ಅದು (ಧೂಮಕೇತು) ಸೀಸರನ ಪವಿತ್ರಾತ್ಮದ ಸ್ವರ್ಗಾರೋಹಣವನ್ನು ಪ್ರತಿನಿಧಿಸುತ್ತದೆಂದು ವಾದಿಸಿದರು!

ಅಲ್ಲಿಂದ ಮುಂದಿನ ಇಪ್ಪತ್ತು ಶತಮಾನಗಳಲ್ಲಿ ವಿಜ್ಞಾನ ಬೆಳೆದು ಅರಳಿತು. ಒಂದಿಗೇ ಕುರುಡು ನಂಬಿಕೆ ಕೂಡ. ಉದಾಹರಣೆಗೆ ಕ್ರಿಸ್ತಶಕ ೧೯೧೦ ರಲ್ಲಿ ಹ್ಯಾಲೀ ನಿರೀಕ್ಷಿಸಿದ್ದಂತೆಯೇ ಪ್ರಕಟವಾದಾಗ ಅದರ ದಾಹ ಶಮನಾರ್ಥ ಅಮೆರಿಕದ ರೆಡ್ ಇಂಡಿಯನ್ ಮಂದಿ ಒಬ್ಬ ಕನ್ಯೆಯನ್ನು ಬಲಿ ಕೊಡುವ ಸನ್ನಾಹದಲ್ಲಿದ್ದರು. ಆಕೆಯ ಪುಣ್ಯವೋ ಧೂಮಕೇತುವಿನ ದುರ

## ಬೆಂಕಿ ಕಥೆ

ಇದು ಬೆಂಕಿಗತೆ
ನೀ ನನಗೆ ಹೇಳಿದುದು
ಇದು ಜೀವನ ಸಿಗರೇಟು
ನೀ ಹಚ್ಚಿದುದು
ಬೆಂಕಿ ನೀ ಕೊಟ್ಟೆ
ಅವಾಗಿನಿಂದ ನನ್ನ ಹೃದಯ
ಧೂಮಪಾನ ಮಾಡುತ್ತಿದೆ.

ಕೈಯಲಿ ಲೇಖನಿ ಹಿಡಿದು ಕಾಲ
ಮುಗುಳ್ನಕ್ಕು ಲೆಕ್ಕ ಹಾಕುತಿದೆ.

ಸಿಗರೇಟು ಸೇದಲು
ಹದಿನಾಲ್ಕು ನಿಮಿಷ
ಇದನು ಬರೆಯಲು ನನಗೆ
ಹದಿನಾಲ್ಕು ವರ್ಷ
ನನ್ನ ದೇಹ ಹೊತ್ತಿಸದ ಒಂದು
ಸಿಗರೇಟಾಗಿತ್ತು.

ನಿನ್ನ ಉಸಿರೇ ಅದಕ್ಕೆ ಜೀವವನು
ತುಂಬಿದುದು
ಅದು ಬಳಿಕ ನಿರಂತರವಾಗಿ ಉರಿಯುತಿದೆ
ಭೂಮಿ ಸಾಕ್ಷಿ.

ಸಿಗರೇಟು ನಂದಿ
ನನ್ನ ಪ್ರೀತಿಯ ಸೌರಭ
ನೀನು ಸ್ವಲ್ಪ ಒಳಗೊಂಡ
ನಂತರ ಗಾಳಿಯಲಿ ಹಾರಿತು.

ಇದೋ ತುಂಡನು
ಎಸೆದು ಬಿಡು
ನನ್ನ ಪ್ರೇಮಾಗ್ನಿ
ನಿನ್ನ ಬೆರಳನು ಸುಡದೆ ಇರಲಿ
ಹೊತ್ತಿದುದರ ಬಗ್ಗೆ ಚಿಂತಿಸದಿರು
ತುಂಡಿನಲ್ಲಿನ ಬೆಂಕಿಯ ಕಿಡಿಯನು
ಗಮನಿಸು.

ಕೈಯನ್ನು ಎಚ್ಚರಿಕೆಯಿಂದಿಟ್ಟುಕೋ
ಮತ್ತೊಂದು ಸಿಗರೇಟು ಹಚ್ಚು.

-ಅಶೋಕಕುಮಾರ್

ದೃಷ್ಟವೋ ಅದೇ ಮುಹೂರ್ತದಲ್ಲಿ ಸುಧಾರಕರ ದಂಡೊಂದು ಅಲ್ಲಿ ಘೇರಾಯಿಸಿ ಈ ದುರಂತವನ್ನು ತಪ್ಪಿಸಿತು. ಆದರೆ ಧೂಮಕೇತು ತನ್ನ ಕೊಳ್ಳಿಯನ್ನು ಹೊಡೆಯದೇಬಿಟ್ಟೀತೇ? ಕಡಲರಾಣಿ ಬ್ರಿಟಾನಿಯುಳ ದೊರೆ, ಆಧುನಿಕ ನಾಗರಿಕ ಜನಾಂಗದ ಮಹಾಪ್ರಭು ಮತ್ತು ನೇಸರು ಕಂತದ ಬೃಹತ್ ಸಾಮ್ರಾಜ್ಯದ ಚಕ್ರವರ್ತಿ ಎಂಬುದಾಗಿ ಪ್ರಖ್ಯಾತನಾಗಿದ್ದ ಎಂಟನೆಯ ಎಡ್ವರ್ಡನ ಮೇಲೆ ಅದರ ವಕ್ರದೃಷ್ಟಿ ಬಿದ್ದೇ ಬಿದ್ದಿತು. ಘುಪ್ಪುಸಗಳ ತೀವ್ರ ಉರಿಯೂತದಿಂದ ಅವನು ಅದೇ ವರ್ಷ ಮೃತನಾದದ್ದು ಧೂಮಕೇತು ಇನ್‌ಫ್ಲೂಯೆಂಜಾ ವೈರಸುಗಳನ್ನು ಬಿತ್ತುವ ಹಿಡುಗಾದ್ದರಿಂದ ಎಂದು ಕೆಲವು ವಿಜ್ಞಾನಿಗಳು ಕೂಡ ವಾದಿಸಿದರು. ನಿಜ, ಕುಲೀನ ವಂಶಜರು ತಮ್ಮ ಕೋಮಲ ಜೀವನ ಕ್ರಮಗಳ ಕಾರಣವಾಗಿ ಧೂಮಕೇತುವಿಗೆ ಸುಲಭ ಗ್ರಾಸವಾಗುತ್ತಾರೆ!

ಶತಮಾನದ ಏಕೈಕ ಅದ್ಭುತ ದೃಶ್ಯ ಎಂಬುದಾಗಿ ಯದ್ವಾತದ್ವಾ ಪೂರ್ವಭಾವಿ ಪ್ರಚಾರ ಪಡೆದ. ಆದರೆ ವಾಸ್ತವವಾಗಿ ಗೋಚರವಾದಾಗ ತೀರ ಪೇಲವ ಚಿತ್ರವಾಗಿ ಎಗರಿಹೋದ, ೧೯೭೩ರ ಕಾಹೂಟೆಕ್ ಧೂಮಕೇತು (ಆಕಾಶ ರಣರಂಗದ ಉತ್ತರ ಕುಮಾರ!) ಗೋಚರಿಸಲಿದ್ದ ಅದೇ ಮುನ್ನ Children of God Trust 1973 ಎಂಬ ಪ್ರಕಾಶನ ಸಂಸ್ಥೆ ಪ್ರಕಟಿಸಿದ ಮೋಸೆಸ್ ಡೇವಿಡ್ ಎಂಬಾತನ 'ಮೇರು ಕೃತಿ' 40 Days: Ninevah shall be destroyed! ಲಕ್ಷ ಲಕ್ಷ ಸಂಖ್ಯೆಗಳಲ್ಲಿ ಖರ್ಚಾದದ್ದು ಹೇಗೆ ವಿಜ್ಞಾನದ ಜೊತೆಯಲ್ಲೇ ಮೂಢಭಾವನೆಗಳು ಕೂಡ ವಿಕಾಸಹೊಂದುತ್ತವೆ ಎನ್ನುವುದಕ್ಕೆ ತೀರ ಈಚಿಗಿನ ನಿದರ್ಶನ.

ಅಷ್ಟೇಕೆ? ಇಂದಿನ ಪ್ರಸಿದ್ಧ ದಿನ ಮತ್ತು ವಾರಪತ್ರಿಕೆಗಳ ಅವಿಭಾಜ್ಯ ಮತ್ತು ಅನಿವಾರ್ಯ ಅಂಗವಾಗಿರುವ 'ಗ್ರಹಗಳ ಮುನ್ನೋಟ' ಮತ್ತು 'ರಾಶಿ ಭವಿಷ್ಯ', ಅಥವಾ ಜಾತಕ ನೋಡಿ ಗ್ರಹಬಲ ನಿರ್ಧರಿಸಿ ಮದುವೆ ಮುಂತಾದ ಶುಭ ಕಾರ್ಯಗಳ ಏರ್ಪಾಡು ಇವುಗಳ ಹಿನ್ನೆಲೆಯಲ್ಲಿರುವ ಮನೋಭಾವ ತಿಳಿಸುವುದೇನನ್ನು? ಕುರುಡು ನಂಬಿಕೆಗಳ ಕಬಂಧ ಬಾಹುಗಳಿಂದ ನಾವು ಅದೆಷ್ಟು ಬಿಗಿಯಾಗಿ ಬಂಧಿಸಲ್ಪಟ್ಟಿದ್ದೇವೆ ಎಂದು.

ಆಕಾಶದಲ್ಲಿ ಸಂಭವಿಸುವ ಘಟನೆಗೂ ಪ್ರಪಂಚದ ಅಥವಾ ವ್ಯಕ್ತಿಯ ಹಿತಾಹಿತಕ್ಕೂ ತಳಕು ಹಾಕುವುದು ಅವೈಜ್ಞಾನಿಕ. ಇದು ದುರ್ಬಲ ಮನಸ್ಸಿನ ಪಲಾಯನ ನೀತಿ. ಖಗೋಳೀಯ ಘಟನೆಗಳು ಖಚಿತ ವೈಜ್ಞಾನಿಕ ವಿಧಿನಿಯಮಾನುಸಾರ ಜರಗುತ್ತವೆ. "ಗ್ರಹಗತಿಯ ತಿದ್ದುವನೆ ಜೋಯಿಸನು ಜಾತಕದಿ? ವಿಹಿತವಾಗಿಹುದದರ ಗತಿ ಸೃಷ್ಟಿ ವಿಧಿಯಿಂ." ಈ ವಿಧಿನಿಯಮಗಳು ಏನೆಂದು ಅರಿತಾಗ, ಬೆಳಕಿನ ಕಿಡಿ ಕತ್ತಲೆಯ ಮೊತ್ತವನ್ನೇ ತೊಡೆದು ಹಾಕುವಂತೆ, ಮೂಢ ನಂಬಿಕೆಯ ಗಾಢಾಂಧಕಾರ ತೊಲಗಿ ಹೋಗುತ್ತದೆ. ಜನರ ಹಿತಾಹಿತಗಳನ್ನು ಧೂಮಕೇತು ದರ್ಶನದ ಜೊತೆ ಹೊಂದಿಸುವುದು ಎಂಥ ಹಾಸ್ಯಾಸ್ಪದ ಮತ್ತು ಅರ್ಥಶೂನ್ಯ ತರ್ಕ ಎಂಬುದರ ಅರಿವು ಮೂಡುತ್ತದೆ. ನಿಜಕ್ಕೂ ಅರಿವಿನ ಕೊರೆಯೇ ಕುರುಡು ನಂಬಿಕೆಯ ಆಸರೆ.

ಇದು ಹಾಗಿರಲಿ, ಧೂಮಕೇತು ಅಥವಾ ತತ್ಸದೃಶ ಆಕಾಶಕಾಯ ಭೂಮಿಯ ಮೇಲೆ ನೇರವಾಗಿ ಬಿದ್ದು ಸರ್ವನಾಶಕ್ಕೆ ಕಾರಣವಾದ ಸಂಗತಿ ತಿಳಿದಿದೆಯೇ? ಈ ಪ್ರಶ್ನೆಗೆ ಉತ್ತರವನ್ನು ಮುಂದಿನ ತಿಂಗಳ ಸಂಚಿಕೆಯಲ್ಲಿ ಓದಬಹುದು. ✡



ದುಃಖಿತರಿಗೆ ತಮ್ಮ ಹಾಗೆಯೇ ಇರುವ ಜನರಿಂದ ಸುಖ ಸಿಗುತ್ತದೆ.

–ಕ್ರಿಸ್ಟೊಫರ್ ಮಾರ್ಲೊ

# ಜೆಟ್ ವಿಮಾನ ೨೦೦೦ ವರ್ಷ ಹಳೆಯದೆ?

ಉದಯರವಿ

ಈ ಲೇಖನವನ್ನು ಬರೆಯಬೇಕೆಂದುಕೊಂಡಿರುವಾಗಲೇ ಬಹಳ ಹಿಂದೆ ನಾನು ಓದಿದ 'ಎಕ್ಸ್‌ಪಿಡಿಶನ್ ಟು ಅರ್ತ್' ಎಂಬ ಆರ್ಥರ್ ಸಿ. ಕ್ಲಾರ್ಕ್‌ರವರ (ವೈಜ್ಞಾನಿಕ) ಕಥೆಯೊಂದು ಥಟ್ಟನೆ ನೆನಪಿಗೆ ಬರುತ್ತದೆ.

ಮೇಲೆ ತಿಳಿಸಿದ ಕಥೆಯ ಮೂಲಕ ಲೇಖಕರು ಒಂದು ಅಪ್ಪಟ ವೈಜ್ಞಾನಿಕ ಅನ್ವೇಷಣೆಯು ಸಾವಿರಾರು ವರುಷಗಳ ನಂತರ ಹೇಗೆ ಒಂದು ನಿಗೂಢವೂ, ಪೂಜಾರ್ಹ ವಿಸ್ಮಯಕರ ಕಲಾವಸ್ತುವೂ ಆಗಬಲ್ಲದೆಂದು ಅರ್ಥಪೂರ್ಣವಾಗಿ ನವಿರು ಹಾಸ್ಯ ಬೆರೆಸಿ ಹೇಳುತ್ತ ಹೋಗುತ್ತಾರೆ.

ಲೇಖಕರು ಕಥೆಯನ್ನು ಪ್ರಾರಂಭಿಸುವಾಗಲೇ ಈ ನಮ್ಮ ಶತಮಾನವು ಗತಿಸಿ ೪-೫ ಸಾವಿರ ವರ್ಷಗಳಾಗಿ ಹೋಗಿರುತ್ತವೆ! ಭೂಮಿಯ ಮೇಲಿನ ಪ್ರತಿ ಬಲಿಷ್ಠ ದೇಶವು ತನ್ನ ವೈರಿಯೊಂದಿಗೆ ಅಣುಯುದ್ಧಕ್ಕಿಳಿದು ಇಡೀ ಭೂಗೋಳವಷ್ಟೇ ಅಲ್ಲದೆ, ಭೂಮಿಯ ಪರಿಸರ ಹಾಗೂ ಹವಾಮಾನಗಳು ಹಲವು ಗಂಡಾಂತರಕಾರಿ ವೈಪರೀತ್ಯಗಳಿಗೊಳಗಾಗಿ ಭೂಮಿಯ ಮೇಲೆ 'ಅಣು ಚಳಿಗಾಲ'ವೊಂದರ ಸೃಷ್ಟಿಯಲ್ಲಿ ಯುದ್ಧವು ಪರ್ಯವಸಾನಗೊಳ್ಳುತ್ತದೆ.

ನಾಗರಿಕತೆಯ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜನಾಂಗಗಳೆಲ್ಲಾ ಬರ್ಬರರ ಮಟ್ಟಕ್ಕೆ ಇಳಿಯತೊಡಗುತ್ತವೆ. ಕಾಲಕ್ರಮೇಣ ಈ ಚಳಿಗಾಲವು ಒಂದು 'ಅಣು ಹಿಮಯುಗಕ್ಕೆ' ಪರಿವರ್ತನಗೊಳ್ಳುತ್ತದೆ. ಕಾಲ ನಡೆಯುತ್ತಲೇ ಇದೆ. ದಶಕವು ಶತಮಾನವಾಗಿ, ಶತಮಾನವು ಸಹಸ್ರಮಾನವಾಗುತ್ತದೆ. ಇಂತಹ ೪-೫ ಸಹಸ್ರಮಾನಗಳಾದ ಮೇಲೆಯೇ ಪ್ರಸ್ತುತ ಕಥೆಯ ಪಾತ್ರಧಾರಿಗಳು ರಂಗದ ಮೇಲೆ ಕಾಣಿಸಿಕೊಳ್ಳುತ್ತಾರೆ.

ಇವರು ಹಿಮಯುಗದ ಕಡೆಗಾಲವಲ್ಲಿ ಕಾಣಿಸಿಕೊಳ್ಳುವ ಭೂಮಿಯ ಕಟ್ಟ ಕಡೆಯ ಜನಾಂಗ. ಅತ್ತ ಬರ್ಬರರೂ ಅಲ್ಲದ, ಇತ್ತ ನಾಗರಿಕರೂ ಅಲ್ಲದ ಅಲೆಮಾರಿ ಜನಾಂಗ. ಇವರ ಬಳಿ ಏನೂ ಇಲ್ಲದಿದ್ದರೂ ಸಹಸ್ರ ಸಹಸ್ರ ವರ್ಷಗಳ ಹಿಂದಿನ ಅವರ ಪೂರ್ವಜರು ಯಾವುದೋ ಕೆಲವು ಅದ್ಭುತ ಚಮತ್ಕಾರಗಳನ್ನು ಮಾಡಲು ಉಪಯೋಗಿಸುತ್ತಿದ್ದಂತಹ ಕೆಲವು ವಿಚಿತ್ರ ವಸ್ತುಗಳು ವಂಶಪಾರಂಪರ್ಯವಾಗಿ ಹಸ್ತಾಂತರಗೊಂಡು ಬಂದಿರುತ್ತವೆ. ಅವುಗಳಲ್ಲಿ ಮೂರು ವಸ್ತುಗಳಿಗೆ ಮಾತ್ರ ಇನ್ನಿಲ್ಲದ ಪ್ರಾಧಾನ್ಯ ಮತ್ತು ಪೂಜಾ ಪ್ರಾಶಸ್ತ್ಯವನ್ನಿತ್ತಿರುತ್ತಾರೆ. ಏಕೆಂದರೆ, ಅವು ಎಷ್ಟು ಪುರಾತನವಾದದ್ದೆಂದರೆ, ಅವುಗಳ ಕಾರ್ಯ ವಿಧಾನವಾಗಲಿ ಅವುಗಳ ಉಪ-

ಯೋಗವಾಗಲಿ ಬಹುಶಃ ಜನಾಂಗದ ಪೂರ್ವಿಕರಿಗೂ ತಿಳಿದಿರಲಿಲ್ಲ. ಅವು ಅಷ್ಟು ಅರ್ವಾಚೀನ ಬುದ್ಧಿಯ ಸಂತತಿಯೊಂದರ ಕುರುಹಾಗಿರುವುದರಿಂದಲೇ ಅದಕ್ಕೆ ಅಷ್ಟು ಹೆಚ್ಚಿನ ಮಹತ್ವ.

ಆ ಮೂರು ವಸ್ತುಗಳಲ್ಲಿ ಮೊದಲನೆಯದು ವಿಚಿತ್ರ ಆಕೃತಿಯಲ್ಲಿದ್ದ ಒಂದು ಲೋಹದ ತುಂಡು. ಎರಡನೆಯದು ಪಾರದರ್ಶಕವಾದ ಒಂದು ಗೋಳ. ಅದರೊಳಗೆ ಅಡ್ಡಾದಿಡ್ಡಿಯಾಗಿ ಹುದುಗಿಸಲಾದ ಲೋಹದ ತುಣುಕುಗಳು. ಅವುಗಳ ಮಧ್ಯೆ ಕತ್ತಲಲ್ಲಿ ಮಂದ ಬೆಳಕನ್ನುಳ್ಳ ಯಾವುದೋ ಒಂದು ಚಿಕ್ಕ ಸ್ವಯಂ ಪ್ರಕಾಶಿತ ವಸ್ತುವನ್ನಿಡಲಾಗಿತ್ತು. ಗೋಳದೊಳಗಿನ ಲೋಹದ ತುಣುಕು ಹಾಗೂ ಅವುಗಳ ನಡುವೆ ಇದ್ದ ಪ್ರಕಾಶಿತ ವಸ್ತುವನ್ನು ಲೋಹದ ಜಾಲರಿಯೊಂದು ಸುತ್ತುವರಿದಿತ್ತು. ಮೂರನೆಯ ಹಾಗೂ ಕೊನೆಯದಾದ ವಸ್ತುವನ್ನು ಕಂಡೊಡನೆ ಆ ಜನಾಂಗದ ಜನರೆಲ್ಲ ಕೈ ಮುಗಿದು ಅಡ್ಡ ಬೀಳುತ್ತಿದ್ದರು. ಕಾರಣ ಅದೊಂದು ವೃತ್ತಾಕಾರದ, ಚಪ್ಪಟೆಯಾದ, ಮೊಹರು ಮಾಡಿದ್ದ ಲೋಹದ ಡಬ್ಬಿ. ಅದನ್ನು ಅತ್ತಿತ್ತ ಅಲುಗಾಡಿಸಿದರೆ ಗಲಗಲನೆ ಶಬ್ದವಾಗುತ್ತಿತ್ತು. ಒಂದು ವೇಳೆ ಆ ಡಬ್ಬಿಯನ್ನೇನಾದರೂ ಬಲವಂತವಾಗಿ ತೆರೆದರೆ ಇಡೀ ಭೂಮಿಯೇ ನಾಶವಾಗುವುದೆಂದು ಆ ಜನಾಂಗದ ಹಿರಿಯ ತನ್ನ ಹಿರಿಯರು ತನಗೆ ತಿಳಿಸಿದ್ದಾಗಿ ಹೇಳುತ್ತಾನೆ.

ಮುಂದಿನ ಕಥೆ ಅದೇನೇಯಿರಲಿ. ಆದರೆ, ಆ ಕಥೆಯ ಮುಕ್ತಾಯ ಮಾತ್ರ ಬಹಳ ಹಾಸ್ಯಮಯ, ಆದರೆ, ಅಷ್ಟೇ ಅರ್ಥಗರ್ಭಿತ ಸಂಗತಿಯಾಗಿ ಪರಿಣಮಿಸುತ್ತದೆ. ಏಕೆಂದರೆ ಮೊದಲನೆಯ ವಸ್ತುವಿನ ಕೆಳಭಾಗದಲ್ಲಿ 'ಮಾರ್ನಿಂಗ್ ಸ್ಟಾರ್' ಎಂಬ ರಾಕೆಟ್‌ನಲ್ಲಿ ಅಳವಡಿಸಲಾಗಿರುವ 'ಜ್ವಲನ ಪರಿಕರವಿದು' (Ignitor) ಎಂದು



ಚಿತ್ರ ೧-ಅ

ಬರೆದಿರುತ್ತದೆ. ಎರಡನೆಯದು ವ್ಯೋಮದ ಯಾವುದೋ ಗ್ರಹದ ಮೇಲೆ ತಾನಿರುವ ಸ್ಥಳವನ್ನು ಸೂಚಿಸುವ 'ರೇಡಿಯೋ ಟ್ರಾನ್ಸ್ ಮೀಟರ್' ಆಗಿರುತ್ತದೆ. ಮೂರನೆಯ ಪರಿಕರದ ಒಳಗಿರುವುದು ಒಂದು 'ಫಿಲ್ಮ್ ರೀಲ್'. ಕೊನೆಯಲ್ಲಿ ಅದನ್ನು ಪರದೆಯ ಮೇಲೆ ಪ್ರದರ್ಶಿಸಿದಾಗ ಹಾಸ್ಯಮಯ-ಸಾಹಸಮಯ ಚಲನ ಚಿತ್ರವೊಂದು ಪ್ರದರ್ಶನಗೊಂಡು ಅಂತ್ಯದಲ್ಲಿ 'ಇದು ವಾಲ್ಟ್ ಡಿಸ್ನೀಯವರ ತಯಾರಿಕೆ' ಎಂಬ ಅಕ್ಷರಗಳು ಮೂಡಿಬರುತ್ತವೆ!

ಆದರೆ ಇಷ್ಟೆಲ್ಲಾ ಸಾಹಸಗಳನ್ನು ಮಾಡಿ ವಿಶ್ಲೇಷಣೆಯನ್ನು ನಡೆಸುವವರಾರು ಗೊತ್ತೆ?

ಈ ಅಲೆಮಾರಿ ಜನಾಂಗ, ಈ ಭೂಮಿಯ ಮೇಲೆ ಅಳಿದು ೪-೫ ಸಹಸ್ರ ವರ್ಷಗಳ ನಂತರ ಭೂಮಿಗೆ ಬಂದಿಳಿಯುವ ಪರಲೋಕವಾಸಿಗಳು ಅಥವಾ ಅನ್ಯ ಗ್ರಹ ಜೀವಿಗಳು.

ಇದು ಸಂಕೀರ್ಣ ವೈಜ್ಞಾನಿಕ ಸಾಧ್ಯತೆಯೊಂದರ ಪರಿಕಲ್ಪನೆಯ ಪಡಿಯಚ್ಚಿನಂತೆ ಕಾಣುವ ಕಥೆಯಂತೆ ಕಂಡುಬರುತ್ತದೆ. ಆದರೆ ಯೋಚಿಸಿದಾಗ ಈ ಕಥೆಯ ಉತ್ತರಾರ್ಧದಷ್ಟು ವಿಚಿತ್ರ ಇನ್ನೂ ಈ ಭೂಮಿಯ ಮೇಲೆ ನಡೆದಿಲ್ಲವಾದರೂ ಕಥೆಯ ಪೂರ್ವಾರ್ಧದ ಸಾರಾಂಶವನ್ನು ಬಹುಮಟ್ಟಿಗೆ ಹೋಲುವಂತಹ ಹಲವು ನೈಜ ಘಟನೆಗಳು ನಡೆದಿರಬಹುದು-ನಡೆದಿವೆ ಎಂಬ ವಿಷಯ ವೇದ್ಯವಾಗುತ್ತದೆ. ಹೌದೋ ಅಲ್ಲವೋ ಎಂಬುದಕ್ಕೆ ಕೆಳಗೆ ಸೂಚಿಸಿರುವ ಎರಡು ವರದಿಗಳನ್ನು ವಿಶ್ಲೇಷಿಸಿ ನೀವೇ ತೀರ್ಮಾನಕ್ಕೆ ಬನ್ನಿ. ಈ ವಾದವನ್ನು ದೃಢಪಡಿಸುವ ಹಲವು ಪ್ರಾಚ್ಯ ವಸ್ತುಗಳು ನಮ್ಮಲ್ಲಿವೆಯಾದರೂ ಉದಾಹರಣೆಗಾಗಿ ಈಗ ಎರಡು ಪ್ರಾಚ್ಯಾ(ವಶೇಷ) ವಸ್ತುಗಳನ್ನು ತುಲನಾತ್ಮಕ ವಿಶ್ಲೇಷಣೆಗೆ ಒಳಪಡಿಸಿ ನೋಡಲು ನಮಗೆ ಲಭ್ಯ ಎಂದಿಟ್ಟುಕೊಳ್ಳೋಣ.

ಡಾ. ವಿಲ್‌ಹೆಲ್ಮ್ ಕೋನಿಗ್ ಒಬ್ಬ ಜರ್ಮನ್ ಪ್ರಾಚ್ಯ ವಸ್ತು ಸಂಶೋಧನಾ ವಿಜ್ಞಾನಿ. ೧೯೩೮ರಲ್ಲಿ ಅವರು ಇರಾಕ್‌ನ ಬಾಗ್ದಾದ್ ನಗರದ ರಾಜ್ಯ ವಸ್ತು ಸಂಗ್ರಾಹಲಯದಲ್ಲಿ ಪುರಾತತ್ವ ಸಂಶೋಧಕರ ಹುದ್ದೆಯಲ್ಲಿದ್ದರು. ಒಂದು ದಿನ ಅವರು ವಸ್ತು ಸಂಗ್ರಹಾಲಯದ ತಳ ಮಜಲಿ (Basement)ನ ಉಗ್ರಾಣದಲ್ಲಿ ಧೂಳು ತುಂಬಿದ ಪ್ರಾಚೀನ ವಸ್ತುಗಳನ್ನು ಪರಿಶೀಲಿಸುತ್ತಿರಲಾಗಿ ಒಂದು ಹಳೆಯ ಸಂಗ್ರಹಣ ಪೆಟ್ಟಿಗೆಯಲ್ಲಿ ಎರಡು ಸಾವಿರ ವರ್ಷಗಳಿಗೂ ಹಿಂದೆ ನಿರ್ಮಿಸಲಾಗಿದ್ದ ಹಲವಾರು ಮಣ್ಣಿನ ಕುಡಿಕೆಗಳನ್ನು ಸಂಗ್ರಹಿಸಿಟ್ಟಿರುವುದನ್ನು ಕಂಡರು. ಅವು ಆಗ್ನೇಯ ಬಾಗ್ದಾದ್‌ನ ಕುಜತ್ ರಬುವಾ ಎಂಬಲ್ಲಿ ಉತ್ಖನನ ನಡೆಸಿದಾಗ ದೊರೆತಂಥವು.

ಮೊದಲ ನೋಟಕ್ಕೆ ಅವನ್ನು ಅಸ್ವಾಭಾವಿಕ ಕೆಲಸಗಳಿಗೆ ಉಪಯೋಗಿಸಿರಬಹುದೆಂಬ ಅಭಿಪ್ರಾಯ ಯಾರಲ್ಲಾದರೂ ಮೂಡುತ್ತದೆ. ಪ್ರತಿ ಕುಡಿಕೆಯ ಎತ್ತರ ೬ ಅಂಗುಲಗಳು. ಅವುಗಳ ಒಳಗೆ ಸುಮಾರು ೫ ಅಂಗುಲ ಎತ್ತರ ಹಾಗೂ ೧⅔ ಅಂಗುಲ ವ್ಯಾಸವಿರುವ ತಾಮ್ರದ ತಗಡಿನ ಕೊಳವೆಗಳನ್ನು ಹೊಂದಿಸಿ ಕುಡಿಕೆಯ ಹಾಗೂ ಕೊಳವೆಯ ಕಂಠಗಳೆರಡನ್ನೂ ಸೀಸದಿಂದ ಬೆಸೆಯಲಾಗಿತ್ತು. (ಚಿತ್ರ ೧-ಅ) ಕೊಳವೆಯ ತಳಭಾಗಕ್ಕೆ ತಾಮ್ರದ ತಗಡನ್ನು ಹಚ್ಚಿ ತಳ ಹಾಗೂ ತಗಡನ್ನು ಕಲ್ಲರಗು ಅಥವಾ ಶಿಲಾಜಿತು (Asphalt)ವಿನಿಂದ ಮೊಹರು ಮಾಡಲಾಗಿತ್ತು. ತಾಮ್ರದ ಕೊಳವೆಯ ನಡುವೆ ಕಬ್ಬಿಣದ ಸಣ್ಣ ಸರಳೊಂದನ್ನು ಲಂಬವಾಗಿ ನಿಲ್ಲಿಸಿ ಅದಕ್ಕೂ ಕೊಳವೆಯ ಕಂಠಕ್ಕೂ ನಡುವೆ ಕಲ್ಲರಗನ್ನು ವಿದ್ಯುನ್ನಿರೋಧಕದಂತೆ ಉಪಯೋಗಿಸಿ ಮೊಹರು ಮಾಡಲಾಗಿತ್ತು. ಆ ಕಬ್ಬಿಣದ ಸರಳುಗಳನ್ನು ಪ್ರಯೋಗ ಶಾಲೆಯಲ್ಲಿ ಪರೀಕ್ಷೆಗೊಳಪಡಿಸಿದಾಗ ಅವು ಬಹುಕಾಲದ ಹಿಂದೆ ತನ್ನನ್ನು ಸುತ್ತುವರೆದಿದ್ದ ಯಾವುದೋ ಆಮ್ಲದ ಕೊರೆತಕ್ಕೆ ಸಿಕ್ಕು ಸವಕಳಿಯಾದದ್ದು ಕಂಡುಬಂತು.

ಮುಂದುವರೆದ ಯಂತ್ರಜ್ಞಾನದ ಪರಿಚಯವಿದ್ದ ಡಾ. ಕೋನಿಗ್ ತಾಮ್ರ, ಕಬ್ಬಿಣ ಮಣ್ಣಿನ ಕುಡಿಕೆ ಹಾಗೂ ಶಿಲಾಜಿತುವನ್ನು



ಚಿತ್ರ ೧–ಆ

(ಚಿತ್ರ ೧–ಆ.) ಪ್ರಾಚೀನರು ಯಾವುದೋ ಸಾಮಾನ್ಯ ಕಾರ್ಯಕ್ಕಾಗಿ ಬಳಸಿರದೆ ಅವು ಯಾವುದೋ ವೈಜ್ಞಾನಿಕ ಪರಿಕರವೊಂದರ ನಿರ್ಮಾಣಕ್ಕೆ ಉಪಯೋಗಿಸಿರಬಹುದಾದ ಬಿಡಿ ಭಾಗಗಳಾಗಿರಬೇಕೆಂಬ ನಿಲುವಿಗೆ ಬಂದರು. ಅವರ ಅನಿಸಿಕೆಗೆ ಪುಷ್ಟಿ ನೀಡಲೆಂಬಂತೆ, ವಿಲ್ಲೀಲೀ ಮತ್ತು ವಿಲ್ಲಾರ್ಡ್ ಗ್ರೇ ಎಂಬ ವಿಜ್ಞಾನಿಗಳಿಬ್ಬರು ಮಸ್ಸಾಚುಸೆಟ್ಟಿನ ಪಿಟ್ಸ್‌ಫೀಲ್ಡ್‌ದಲ್ಲಿರುವ ಜನರಲ್ ಎಲೆಕ್ಟ್ರಿಕ್ ಹೈವೋಲ್ಟೇಜ್ ಪ್ರಯೋಗಾಲಯದಲ್ಲಿ ಸದರೀ ಕುಡಿಕೆಯ ನಕಲನ್ನು ನಿರ್ಮಿಸಿ (ಎರಡು ಸಾವಿರ ವರ್ಷಗಳ ಹಿಂದೆಯೂ ಲಭ್ಯವಿದ್ದ) ಮೈಲುತುತ್ತ (copper-sulphate) ಹಾಗೂ ಅಸಿಟಿಕ್ ಆಮ್ಲವನ್ನು ಕೊಳವೆಯೊಳಗೆ ಬೆರೆಸಿದಾಗ ಆ ಕುಡಿಕೆಯಿಂದ ೧½ ರಿಂದ ೨ ವೋಲ್ಟ್‌ಗಳಷ್ಟು ವಿದ್ಯುಚ್ಛಕ್ತಿ ಹೊರಹೊಮ್ಮಿತು! ಈ ರೀತಿಯ ವಿದ್ಯುತ್ ಕೋಶಗಳನ್ನು ನಾಗರಿಕ ಮಾನವನು ಕಂಡು ಹಿಡಿದದ್ದು ೧೮೦೦ರಿಂದೀಚೆಗಷ್ಟೆ.

ಇಂತಹ ಹಲವಾರು ಕುಡಿಕೆಗಳನ್ನು ಒಂದು ವ್ಯೂಹದಲ್ಲಿರಿಸಿ ಒಂದರೊಡನೊಂದಕ್ಕೆ ತಾಮ್ರದ ಕಂಬಿಗಳ ಮೂಲಕ ಸಂಪರ್ಕವನ್ನು ರಚಿಸಿದ್ದುದು ಸಹ ಬಾಗ್ದಾದ್‌ನ ಕೆಲವೆಡೆ ನಡೆಸಿದ ಉತ್ಖನನಗಳಿಂದ ಕಂಡುಬಂದಿದೆ. ತಮಗೆ ಬೇಕಾದಷ್ಟು ಪ್ರಮಾಣದ ವಿದ್ಯುತ್ತನ್ನು ಉತ್ಪಾದಿಸಲು ಹಾಗೆ ಮಾಡಿರಬಹುದೆಂಬುದು ಆರೋಗ್ಯಕರವಾದ ಊಹೆಯಷ್ಟೆ.

## ೨

೧೮೯೮ ರಲ್ಲಿ ಈಜಿಪ್ಟ್‌ನ ಸಕ್ಕಾರಾ ಎಂಬಲ್ಲಿ ಕ್ರಿಸ್ತ ಪೂರ್ವ ೨೦೦ ರಷ್ಟು ಹಿಂದಿನ ಗೋರಿಯೊಂದರಲ್ಲಿ ಮೊಟ್ಟ ಮೊದಲ ಬಾರಿಗೆ ಪುಟ್ಟ ಮಾದರೀ ವಿಮಾನವೊಂದು ಸಿಕ್ಕಿತು. ಆಗಿನ್ನೂ ಆಧುನಿಕ ವಿಮಾನವನ್ನು ಕಂಡು ಹಿಡಿಯುವ ಸೂಚನೆಯೂ ಇರಲಿಲ್ಲ. ಹಾಗಾಗಿ ಆ ವಿಚಿತ್ರ ವಸ್ತುವನ್ನು ಕೈರೋದ ಪ್ರಾಚ್ಯ ವಸ್ತು ಸಂಗ್ರಹಾಲಯಕ್ಕೆ ರವಾನಿಸಲಾಯಿತು, ಅಲ್ಲಿ ಅದಕ್ಕೆ ದಾಖಲಾತಿ ಸಂಖ್ಯೆ ೬೩೪೭ ಎಂದು ಕೊಟ್ಟು ಒಂದು ಮೂಲೆಗೆ ಬಿಸಾಡಿದರು. ಕಾಲ ಕ್ರಮೇಣ ವಸ್ತು ಸಂಗ್ರಹಾಲಯದ ಕೆಲಸಗಾರರಿಗೆ ಅದರ ಇರುವಿಕೆಯ ನೆನಪೇ ಮರೆತುಹೋಯಿತು.

೧೯೬೯ರಲ್ಲಿ ಸದರೀ ಸಂಗ್ರಹಾಲಯದ ತಳಮಜಲನ್ನು ಡಾ. ಖಲೀಲ್ ಮಸ್ಸೀಹಾ ಎಂಬುವರು (ಈಜಿಪ್ಟ್ ಇತಿಹಾಸ ತಜ್ಞ ಹಾಗೂ ಪ್ರಾಚ್ಯ ವಸ್ತು ಸಂಶೋಧಕ) ಸ್ವಚ್ಛಗೊಳಿಸುತ್ತಿದ್ದ ಹಾಗೆ 'ಹಕ್ಕಿಗಳನ್ನು ಹೋಲುವ ಪ್ರಾಚ್ಯ ವಸ್ತುಗಳು' ಎಂಬ ಹಣೆಪಟ್ಟಿಯಿರುವ ಪೆಟ್ಟಿಗೆಯೊಂದು ಸಿಕ್ಕಿತು. ಡಾ. ಮಸ್ಸೀಹಾರವರು ಪೆಟ್ಟಿಗೆಯೊಳಗಿನ ಸರಕನ್ನೆಲ್ಲಾ ಮೇಜಿನ

ಮೇಲೆ ಹರಡಿದಾಗ ಪಕ್ಷಿಗಳ ಆಕೃತಿಯ ಹಲವು ವಸ್ತುಗಳ ನಡುವೆ ದಾಖಲಾತಿ ಸಂಖ್ಯೆ ೬೩೪೭ ಯಿರುವ ವಸ್ತುವು ಕಣ್ಣಿಗೆ ಬಿತ್ತು. ತಾನು ಯುವಕನಿದ್ದಾಗ ಹವ್ಯಾಸಿ ಮಾದರೀ ವಿಮಾನ ಸಂಗ್ರಹಕಾರನಾಗಿದ್ದ ಈತನಿಗೆ ಮೇಲೆ ತಿಳಿಸಿದ ವಸ್ತುವು ನೋಡಲು ಸ್ವಲ್ಪ ಹಕ್ಕಿಯಂತೆ ಕಂಡರೂ ಖಂಡಿತ ಅದರ ರೂಪುರೇಷೆಗಳು ಹಕ್ಕಿಯಂತಿಲ್ಲದೆ ನೂತನ ವಿಮಾನವೊಂದರ ಮಾದರೀ ಆಕೃತಿಯಂತೆ ಕಂಡುಬಂತು. ಆತ ತಡಮಾಡದೇ ಈ ವಿಷಯದ ಬಗ್ಗೆ ಹೆಚ್ಚಿನ ತನಿಖೆಯನ್ನು ನಡೆಸಲು ಒಂದು ತಜ್ಞರ ಸಮಿತಿಯನ್ನು ರಚಿಸುವಂತೆ ಈಜಿಪ್ಟಿನ ಸಾಂಸ್ಕೃತಿಕ ಇಲಾಖೆಯ ಅಂದಿನ ಅಧೀನ ಕಾರ್ಯದರ್ಶಿಯಾಗಿದ್ದ ಡಾ. ಮೊಹಮ್ಮದ್ ಕಮಾಲ್-ಅಲ್‌ಮುಖ್ತಾರ್‌ರವರನ್ನು ಪ್ರೇರೇಪಿಸಿದ. ಅಂತೆಯೇ ಡಿಸೆಂಬರ್ ೨೩, ೧೯೭೧ರಲ್ಲಿ ಆ ವಸ್ತುವಿನ ವೈಮಾನಿಕ-ವೈಜ್ಞಾನಿಕ ವಿಶ್ಲೇಷಣೆಯನ್ನು ನಡೆಸಲು ತಜ್ಞರ ಸಮಿತಿಯೊಂದು ನೇಮಕವಾಯಿತು.

ಈಜಿಪ್ಟ್ ಪ್ರಾಚ್ಯವಸ್ತು ಸಂಗ್ರಹಾಲಯದ ಅಂದಿನ ಆಡಳಿತಾಧಿಕಾರಿಯಾಗಿದ್ದ ಡಾ. ಹೆನ್ರೀ ರಿಯಾದ್, ಈಜಿಪ್ಟ್ ಪ್ರಾಚ್ಯವಸ್ತು ಸಂಶೋಧನಾಲಯದ ಸಹಾಯಕ ಆಡಳಿತಾಧಿಕಾರಿಯಾಗಿದ್ದ ಡಾ. ಅಬ್ದುಲ್‌ಖಾದರ್ ಸಲೀಮ್, ಪ್ರಾಚ್ಯ ವಸ್ತು ಇಲಾಖೆಯ ಡಾ. ಹಿಸ್ಮತ್ ನೆಸೀಹಾ ಹಾಗೂ ಸಂಯುಕ್ತ ಈಜಿಪ್ಟಿಯನ್ ವೈಮಾನಿಕ ಸಮಿತಿಯ ಅಧ್ಯಕ್ಷರಾಗಿದ್ದ ಕಮಾಲ್ ನಖೀಬ್ ಮುಂತಾದವರು ಸದರೀ ತಜ್ಞ ಸಮಿತಿಯ ಸದಸ್ಯರಾಗಿದ್ದರು.

ಮೇಲ್ಕಾಣಿಸಿದ ಸಮಿತಿಯು ಆ ವಸ್ತುವನ್ನು ಕೂಲಂಕಷವಾಗಿ ಪರಿಶೀಲಿಸಿದರು. (ಚಿತ್ರ ೨-ಅ) ಆ ವಸ್ತುವು ವಿಮಾನವೊಂದರ ಮಾದರೀ ವಿನ್ಯಾಸವೆಂದು ಅರಿಯಲು ಆ ಸಮಿತಿಯ ಸದಸ್ಯರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಇಂದು ಆ ಮಾದರಿಯು ಕೈರೋ ವಸ್ತು ಸಂಗ್ರಹಾಲಯದ ಪ್ರಮುಖ ಪ್ರಾಚ್ಯ ವಸ್ತುವನ್ನಾಗಿ ಪ್ರದರ್ಶಿಸಲಾಗುತ್ತಿದೆ.

ಆ ಸಂಗ್ರಹಾಲಯವನ್ನು ಸಂದರ್ಶಿಸಿದ ಹಲವು ಪರಿಣಿತ ತಂತ್ರಜ್ಞಾನಿಗಳು ಹಾಗೂ ವೈಮಾನಿಕ ತಂತ್ರ ಪರಿಣಿತರು ಆಧುನಿಕ ವಿಮಾನದಲ್ಲಿ ವಾಯು-ಚಲನ ಶಾಸ್ತ್ರಕ್ಕನುಗುಣವಾಗಿ ತಯಾರಿಸಿ ಅಳವಡಿಸಲಾದ ರೆಕ್ಕೆಗಳು ಹಾಗೂ ಇತರೆ ಭಾಗಗಳ ತದ್ರೂಪವನ್ನು ಸದರೀ ವಿಮಾನದಲ್ಲಿ ಕಂಡದ್ದಾಗಿ ದೃಢೀಕರಿಸಿದ್ದಾರೆ. (ಚಿತ್ರ ೨-ಆ.)

೧೯೫೪ ರಲ್ಲಿ ಕೋಲಂಬಿಯಾ ಸರಕಾರವು ತನ್ನಲ್ಲಿದ್ದ ಹಲವು ಪ್ರಾಚ್ಯ ವಸ್ತುಗಳನ್ನು ಪ್ರದರ್ಶನಕ್ಕಾಗಿ ಅಮೇರಿಕ ಸಂಯುಕ್ತ ಸಂಸ್ಥಾನದ ಆರು ವಸ್ತುಸಂಗ್ರಹಾಲಯಗಳಿಗೆ ಕಳುಹಿಸಿ ಕೊಟ್ಟಿತು. ಅವುಗಳಲ್ಲಿ ಆರು ಚಿನ್ನದ ಪ್ರಾಚೀನ (ಮಾನವ ನಿರ್ಮಿತ) ವಸ್ತು (Artifact)ಗಳ ತದ್ರೂಪದ ನಕಲಿಯನ್ನು ಎರಕ ಹೊಯ್ಯಲು ಅಂದಿನ ಸರಕಾರ ಅಮೇರಿಕದ ಪ್ರಖ್ಯಾತ ರತ್ನ ವ್ಯಾಪಾರಿಯಾದ ಇಮಾನ್ಯುಯೆಲ್ ಇ ಸ್ಟಾಬ್ಸ್‌ನನ್ನು ನೇಮಿಸಿತು.

ಆತನು ಎರಕ ಹೊಯ್ದ ಆರು ವಸ್ತುಗಳಲ್ಲಿ ಒಂದು ಪುಟ್ಟ ವಿಮಾನದ ಮಾದರಿಯೂ ಸೇರಿತ್ತು. (ಚಿತ್ರ-೩ ಅ.) ಆ ವಸ್ತುವು ಸುಮಾರು ೨ ಅಂಗುಲ ಉದ್ದವಿರಬಹುದು. ಅದನ್ನು ಸರದಲ್ಲಿ ಪದಕದಂತೆ ಸೇರಿಸಿ ಕಂಠಾ



೨-ಅ



೩-ಅ

ಭರಣವಾಗಿ ಉಪಯೋಗಿಸಬಹುದು. ಅದು ಇನ್ಕಾಗಳಿಗಿಂತಲೂ ಹಿಂದೆ ಅಸ್ತಿತ್ವದಲ್ಲಿದ್ದ 'ಸೈನು' ಜನಾಂಗದ ಸಂಸ್ಕೃತಿಗೆ ಸೇರಿದ ಕಲಾ ವಸ್ತು. ಅದನ್ನು ಕೋಲಂಬಿಯ ಸರಕಾರವು 'ಪ್ರಾಣಿ ರೂಪ ವಸ್ತು' (Zoomorfica) ಎಂಬ ವರ್ಗಕ್ಕೆ ಸೇರಿತ್ತಾದರೂ, ಆ ವಸ್ತುವು ನಮಗೆ ತಿಳಿದಿರುವ ಯಾವುದೇ ಪ್ರಾಣಿ, ಪಕ್ಷಿ, ಕ್ರಿಮಿ ಅಥವಾ ಮೀನಿನ ಆಕೃತಿಯನ್ನು ಹೋಲುತ್ತಿರಲಿಲ್ಲ. ಆ ವಸ್ತುವನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿದ ಇವಾನ್ ಟಿ ಸ್ಯಾಂಡರ್‌ಸನ್ ಹಾಗೂ ಹೆಸರಾಂತ ವಿಮಾನ ವಿನ್ಯಾಸಕಾರರಾದ ಆರ್ಥರ್ ಯಂಗ್‌ರವರು ಒಂದು ನಂಬಲಾಗದ (ಆದರೆ ಸತ್ಯಕ್ಕೆ ದೂರವಲ್ಲದ) ತೀರ್ಮಾನಕ್ಕೆ ಬಂದರು.

ಕೋಲಂಬಿಯಾ ಸರಕಾರವು ಆ ವಸ್ತುವನ್ನು Zoomorfica ವರ್ಗಕ್ಕೆ ಸೇರಿಸಿದರೂ, ಅದು ಅದೇ ಆಗಿರದೆ, ಇಂದಿನ ಜೆಟ್ ವಿಮಾನದ ಪಡಿಯಚ್ಚೆಂದು ಇವಾನ್ ಹಾಗೂ



೩-ಇ

ಯಂಗ್ ತೀರ್ಮಾನಿಸಿದರು! (ಚಿತ್ರ ೩-ಅ ನೋಡಿರಿ.)

ಹಳೆಯ ನಂಬಿಕೆ, ಮೌಲ್ಯಗಳಿಗಂಟಿಕೊಂಡ ಹಲವು ಮಂದಿ ವಿಜ್ಞಾನಿಗಳು ಮೊದಲಿಗೆ ಇದನ್ನು ನಂಬಲಿಲ್ಲವಾದರೂ ಕೆಲವು ಬಗೆಯ ವಿಶ್ಲೇಷಣೆಗೊಳಗಾದ ಆ ವಸ್ತು ತನ್ನ ಕರಾರು ವಾಕ್ಕಾದ, ಪ್ರಮಾಣಬದ್ಧ ಆಕಾರದಿಂದ ಹಾರಾಡಲು ಯೋಗ್ಯವಾದ ಒಂದು ಜೆಟ್ ವಿಮಾನದ ಪುಟ್ಟ ಮಾದರಿಯಾಗಿರಬಹುದೆಂಬ ವಾದವನ್ನು ಎಂಥವರೂ ಕೆಲ ಕಾಲ ಯೋಚಿಸಿದ ಮೇಲೆ ಹೌದೆಂದು ಒಪ್ಪಿಕೊಳ್ಳುವ ಹಾಗಾಯಿತು.

ಇಲ್ಲಿ ಒಂದು ತೊಡಕಿದೆ. ಹಲವು ವಿಷಯಗಳನ್ನು ಶ್ರುತಪಡಿಸಲು ಒಮ್ಮೊಮ್ಮೆ ಇತಿ-



೩-ಆ

ಹಾಸವು ವಿಜ್ಞಾನದ ಮೊರೆ ಹೋಗುತ್ತದೆ. ಅಂತೆಯೇ ವಿಜ್ಞಾನ ಸಹ ಉದಾಹರಣೆಗೆ ವಿಜ್ಞಾನವು ಪ್ರಾಚ್ಯ ವಸ್ತುವೊಂದರ ಅಂದಿನ ಕಾಲದ ಉಪಯೋಗವೇನಾಗಿದ್ದಿರಬಹುದೆಂದು ಅಭಿಪ್ರಾಯಪಡುತ್ತದೋ ಇತಿಹಾಸಕ್ಕೂ ಆ ವಿಷಯದ ಮೇಲೆ ಐತಿಹಾಸಿಕ ಪುರಾವೆಗಳು ಸಿಕ್ಕಿ ವೈಜ್ಞಾನಿಕ ಅಭಿಪ್ರಾಯವನ್ನು ಅನುಮೋದಿಸಿದಾಗ ಮಾತ್ರ ಎರಡು ಬಣ್ಣಗಳಲ್ಲೂ ಪರಸ್ಪರ ಶಾಂತಿ ಮತ್ತು ಸೌಹಾರ್ದವಿರಲು ಸಾಧ್ಯ. ಇಲ್ಲವಾದರೆ, ಈ ವಸ್ತುವಿನ ಯಾವತ್ತೂ ಸತ್ಯವು ತನಗೆ ಮಾತ್ರ ತಿಳಿದಿದೆಯೆಂದು ಎರಡೂ ಬಣಗಳು ಘೋಷಿಸಿ ನಾನು ಸರಿ ತಾನು ಸರಿ ಯೆಂದು ಕಿತ್ತಾಡುತ್ತವೆ. ಪರಸ್ಪರ ದೋಷಾ



೩–೮

ರೋಪಣ ವಾಗ್ಬಾಣ, ಲೇಖನ ಬಾಣಗಳನ್ನು ಪ್ರಯೋಗಿಸುತ್ತಾ ಕಚ್ಚಾಡುತ್ತವೆ. ಇದೊಂದಾದರೆ, ಮತ್ತೂ ಕೆಲವು ಪ್ರಾಚ್ಯ ವಸ್ತುಗಳು ಇತ್ತ ವಿಜ್ಞಾನ ಹಾಗೂ ಅತ್ತ ಇತಿಹಾಸ ಎರಡಕ್ಕೂ ಸವಾಲಾಗಿ ನಿಂತಿರುತ್ತವೆ. ಮತ್ತೊಂದು ತೊಡಕು. ಇಂತಹ ವಸ್ತುಗಳನ್ನು ಇಂದು ಎರಡೂ ಬಣದವರು ಒಟ್ಟಿಗೆ ಸೇರಿ 'ಎಡವಟ್ಟಿನ ಸಾಮಾನು'ಗಳೆಂದು ಕರೆದಿದ್ದಾರೆ. ಮೇಲ್ಕಾಣಿಸಿದ ಆ ಎರಡೂ ವಸ್ತುಗಳೂ ಮೇಲಿನ ವರ್ಗಕ್ಕೆ ಸೇರಿದವುಗಳೇ.

ಒಂದು ವೇಳೆ ನಾವು ಸದರೀ ಮಣ್ಣಿನ ಕುಡಿಕೆಗಳನ್ನು ವಿದ್ಯುತ್‌ಕೋಶವೆಂದು ಒಪ್ಪಿಕೊಂಡರೆ ಆ ವಸ್ತುವಿನ ಸಮಕಾಲೀನ ಇತಿಹಾಸವು ತಲೆ ಕೆಳಗಾಗುತ್ತದೆ. ಏಕೆಂದರೆ ಇತಿಹಾಸದಲ್ಲೇ ಮೊದಲಬಾರಿಗೆ ವಿದ್ಯುತ್ ಉತ್ಪನ್ನವಾದದ್ದು ೧೯ನೇ ಶತಮಾನದಲ್ಲೆಂದು ಎಲ್ಲರಿಗೂ ಗೊತ್ತು. ಹಾಗಾದರೆ; ಪ್ರಾಚೀನ ಕಾಲದಲ್ಲಿ ನಮಗಿಂತ ಮುಂದುವರೆದ ಜನಾಂಗವೊಂದು ಅಸ್ತಿತ್ವದಲ್ಲಿತ್ತೇ? ಇಲ್ಲವಾದರೆ, ಈ ವಿದ್ಯುತ್ ಕೋಶಗಳನ್ನು ನಿರ್ಮಿಸಿದವರಾರು?

ಮಾದರೀ ವಿಮಾನದ ಕಥೆಯೂ ಅದೇ. ಇಪ್ಪತ್ತನೆಯ ಶತಮಾನದಲ್ಲಷ್ಟೇ ವಿಮಾನದ ಬಗ್ಗೆ ಜನಕ್ಕೆ ಅರಿವು ಮೂಡತೊಡಗಿದ್ದು ವಿಮಾನಗಳು ಪ್ರಪಂಚದ ಎಲ್ಲಾ ದೇಶಗಳಿಗೂ ಸುಪರಿಚಿತವಾದದ್ದು ೧೯೨೫ ರಿಂದೀಚೆಗಷ್ಟೇ ಅಲ್ಲವೇ. ಹಾಗಾದರೆ ಇಂದಿಗೂ ನಮ್ಮ ನವ ನಿರ್ಮಾಣವೆಂದು (ಮೆಚ್ಚುಗೆಯ) ಜಂಬ ಕೊಚ್ಚುತ್ತಿರುವ ಜೆಟ್ ವಿಮಾನವನ್ನು ಕ್ರಿಸ್ತಪೂರ್ವ ೨೦೦ಕ್ಕೆ ಮೊದಲೇ ರಚಿಸಿದವರಾರು? ಇತಿಹಾಸವು ಹೇಳುವಂತೆ, ಭೂಮಿಯ ಮೇಲೆ ಮಾನವನ ಉಗಮವಾಗಿ ೫೦,೦೦೦ ವರ್ಷಗಳಾಯಿತಷ್ಟೇ. ಇಲ್ಲಿಯವರೆಗೆ ಮನುಕುಲದ ೮೦೦ ತಲೆಮಾರುಗಳು ಆಗಿಹೋದುವೆಂದು ಮಾನವಶಾಸ್ತ್ರ ಹಾಗೂ ಇತಿಹಾಸಗಳು ಹೇಳುತ್ತವೆ. ಅದರಲ್ಲೂ ೭೫೦ ತಲೆಮಾರುಗಳು ಗುಹೆಯಲ್ಲೇ ಕಳೆದಿವೆಯೆಂಬುದು ಇವರ ಅಂಬೋಣ. ಈಗ ೫೦೦ ವರ್ಷಗಳಿಂದೀಚೆಗಷ್ಟೇ ಆಧುನಿಕ ವೈಜ್ಞಾನಿಕ ಕ್ರಾಂತಿ ಪ್ರಾರಂಭವಾದುದೆಂದು ಎಲ್ಲರೂ ಬಲ್ಲರು. ಅದರಲ್ಲೂ ವೈಮಾನಿಕ ತಂತ್ರ ನಮಗೆ ಸಿದ್ಧಿಸಿದ್ದು ಈ ಶತಮಾನದ ಮೊದಲ ಕಾಲು ಭಾಗದಲ್ಲೇ ಎಂದು ಇಂದಿನ ಒಬ್ಬ ಶಾಲಾ ಬಾಲಕನಿಗೂ ಗೊತ್ತು. ಹಾಗಾದರೆ, ನಮ್ಮ ಇತಿಹಾಸದ ಅಂದಾಜಿನಂತೆ ಬಹಳ ಹೆಚ್ಚೆಂದರೆ ಅಲೆಮಾರಿ ಜೀವನವನ್ನು ಕೊನೆಗಾಣಿಸಿ ಸ್ಥಾಯೀ ಸಮಾಜ ನಿರ್ಮಾಣವೊಂದರ ಅಧ್ವರ್ಯುಗಳಾಗಿರಬೇಕಾದ ಮಾನವನ ಕಾಲದಲ್ಲಿ ಅತಿ ನವೀನ ಜೆಟ್ ವಿಮಾನವನ್ನು ನಿರ್ಮಿಸಿದವರಾರು?

ಈ ಭೂಮಿಯು ನಮ್ಮ ಇತಿಹಾಸದ ಊಹೆಗೂ ಸಿಲುಕದಷ್ಟು ಹಿಂದಿನಿಂದಲೂ ಇಂತಹ ಹಲವಾರು ನಿಗೂಢ ಜನಾಂಗಗಳು ಹಾಗೂ ಅವರು ನಿರ್ಮಿಸಿದ (ಕೃತಕ) ನಿಗೂಢ ವಸ್ತುಗಳನ್ನು ತನ್ನ ಗರ್ಭದಲ್ಲಡಗಿಸಿಕೊಂಡಿರಬಹುದೇ? ✡

# ಅಂತ್ಯ

ಲಾಟೀನಿನ ಮಂದ ಬೆಳಕಿನಲ್ಲಿ ನಾಲ್ವರ ಮುಖಗಳಲ್ಲಿಯು ನೋವು ಅಸಹಾಯಕತೆ ಎದ್ದು ಕಾಣುತ್ತದೆ. ಸ್ವಲ್ಪ ತಡಿಕೆಯು ಸಪ್ಪಳವಾದ ಕೂಡಲೇ ನಾಲ್ವರ ಕಣ್ಣುಗಳೂ ತಡಿಕೆಯತ್ತ ಸರಿಯುತ್ತವೆ. ಮರುಕ್ಷಣ ನಿರಾಶೆ ಮರು-ಕಳಿಸುತ್ತದೆ. ಒಳಕೋಣೆಯಲ್ಲಿ ನಾರಿನ ಹೊರ ಸಿನ ಮೇಲೆ ಒಬ್ಬ ರುಗ್ಣಶಯ್ಯೆಯಲ್ಲಿ ಮಲಗಿ-ದ್ದಾನೆ. ಅವನು ಎರಡು ಬಾರಿ ಹೃದಯಾ-ಘಾತಕ್ಕೆ ಒಳಗಾಗಿದ್ದಾನೆ. ಇದು ಮೂರನೆಯ ಬಾರಿ. ಅವನು ಬದುಕಿ ಉಳಿವ ಯಾವ ಚಿಹ್ನೆಯೂ ಕಾಣುತ್ತಿಲ್ಲ. ಅವನ ಸಾವು ಅಷ್ಟಾಗಿ ನೋವು ತರುವದಿಲ್ಲ; ಅವನ ಸಾವಿನ ನಂತರ ಜನ್ಮ ತಳೆಯುವ ಅಪ್ರಿಯ ವಿಷಯಗಳ ಸರಮಾಲೆ ನೋವು ತರುತ್ತದೆ. ಅವನು ತಾನು ಸಾಯುವ ದಲ್ಲದೆ ತನ್ನ ಹೆಂಡತಿ ಮಕ್ಕಳನ್ನು ಅನಾಥರನ್ನಾಗಿ ಮಾಡಿ ಹೋಗಲಿದ್ದಾನೆ. ಅವರಿಗೆ ಯಾವ ಆಸರೆಯೂ ಇಲ್ಲ. ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದವರು ಇಲ್ಲಿ ಬಂದಿದ್ದಾರೆ. ತುತ್ತಿನ ಚೀಲ ತುಂಬಿಸಿಕೊಳ್ಳಲು ಇಂಥವರಿಗೆ ಆಸರೆಯಾಗಿ ನಿಲ್ಲಬಲ್ಲವರಾದರೂ ಯಾರು?

ಅವನ ಹೆಂಡತಿಯ ಕಣ್ಣಿನ ಕಪ್ಪು ಗುಡ್ಡೆಗಳು ಹೊರಬಾಗಿಲಿನತ್ತ ಹೊರಳುತ್ತವೆ. ಈಗಲೋ ಆಗಲೋ ಹಾರಿ ಹೋಗುವಂತಿರುವ ಪತಿಯ ಪ್ರಾಣಪಕ್ಷಿಯನ್ನು ವೈದ್ಯ ತಡೆಯಬಲ್ಲ ಎನ್ನುವ ಆಸೆಯಿಂದ ಅವನ ನಿರೀಕ್ಷೆಯಲ್ಲಿದ್ದಾಳೆ. ಕ್ರೂರ ಬದುಕಿನ ಯಾವ ನೋವುಗಳನ್ನೂ ಅರಿಯದ ಕಂದಮ್ಮಗಳು ತಂದೆಯ ನರಳುವಿಕೆಯನ್ನು ಭೀತಿಯಿಂದ ನೋಡುತ್ತಿವೆ. ಅವಳ ಮಡಿಲಲ್ಲಿ ಮಲಗಿದ್ದ ಕೂಸು ಹಸಿದು ಹುಯ್ಲಿಡುತ್ತದೆ. ನಾಲ್ವರೂ ಮಗುವನ್ನು ಕ್ರೂರವಾಗಿ ನೋಡುತ್ತಾರೆ– ತಂದೆಯ ಸಾವನ್ನು ಸೆಳೆಯಲು ಬಂದ ಯಮನೆಂಬಂತೆ. ಆದರೆ ಹೊಟ್ಟೆ ಯಾರ ಸಾವನ್ನೂ ಕಾಯುವುದಿಲ್ಲ, ಕೇಳುವುದಿಲ್ಲ ಕೂಡ.

ದೇವರ ಪಟದ ಮುಂದಿರುವ ಹಣತೆ ಹೊಯ್ದಾಡುತ್ತದೆ. ಆಗ ತಾನೇ ಹಣತೆಯ ತುಂಬ ಎಣ್ಣೆ ಸುರಿದಿದ್ದರೂ ಹೊಯ್ದಾಡುವ ಹಣತೆಯನ್ನು ಕಂಡು ಅವಳೆದೆ ತಳಮಳಿಸುತ್ತದೆ. ಅವನು ಎದೆಯನ್ನು ಒತ್ತಿ ಹಿಡಿದು ನೋವಿನಿಂದ ಚೀತರಿಸುತ್ತಾನೆ. ಎಲ್ಲರ ಮೊಗಗಳು ಭೀತಿ ಯಿಂದ ಕಪ್ಪಿಡುತ್ತವೆ. ಅಸಹಾಯಕತೆಯಿಂದ ತಡಿಕೆಯತ್ತ ನೋಡುತ್ತಾರೆ. ಅದು ನಿಶಬ್ದ ವಾಗಿ ನಿಂತಿದೆ. ಅವನು ಏನನ್ನೋ ಹೇಳಲು ಇಚ್ಛಿಸುತ್ತಾನೆ. ಆದರೆ ಎದೆಯೊಳಗಿನ ಮಾತು ಗಳು ಎದೆಯಲ್ಲೇ ಸತ್ತು ಹೋಗುತ್ತವೆ. ತನ್ನನ್ನೇ ನಂಬಿರುವ ಹೆಂಡತಿ ಮಕ್ಕಳನ್ನು ಬಿಟ್ಟು ಸಾಯಲು ಅವನಿಗೂ ಇಚ್ಛೆಯಿಲ್ಲ. ಆದರೂ ಕ್ಷಣ ಕ್ಷಣಕ್ಕೂ ಎದೆ ಹಿಂಡುವ ಈ ನೋವು ಅವನನ್ನು ಬದುಕಲು ಬಿಡುತ್ತಿಲ್ಲ.

ತಡಿಕೆಯ ಸಪ್ಪಳಕ್ಕೆ ಎಲ್ಲರ ಕಣ್ಣುಗಳು ಆಸೆ ಯಿಂದ ಮಿನುಗುತ್ತವೆ. ವೈದ್ಯನನ್ನು ಕರೆ ಯಲು ಹೋಗಿದ್ದವನು ತಲೆ ತಗ್ಗಿಸುತ್ತಾನೆ. ಅವನ ವಿವರಣೆಯ ಅವಶ್ಯಕತೆ ಇರುವುದಿಲ್ಲ. ಹೊಯ್ದಾಡುವ ದೀಪ ಶಾಂತವಾಗುತ್ತದೆ. ನರಿ-ಯೊಂದು ವಿಕಾರವಾಗಿ ಕೂಗುತ್ತದೆ.

**ಸೌಮ್ಯ ಎಚ್.**

ಓ ಹೆನ್ರಿಯು ಅಮೆರಿಕನ್ ಕಥೆ

# ಪರಿವರ್ತನೆ

ಅನುವಾದ : ಜಿ. ಮೃತ್ಯುಂಜಯ

ಜೈಲಿನ ಶೂ ಅಂಗಡಿಗೆ ಒಬ್ಬ ಗಾರ್ಡ್ ಬಂದ. ಶ್ರದ್ಧೆಯಿಂದ ಶೂ ಹೊಲಿಯುತ್ತಿದ್ದ ಜಿಮ್ಮಿ ವಾಲೆಂಟೀನನನ್ನು ಮುಂದುಗಡೆಯ ಕಚೇರಿಗೆ ಕರೆದುಕೊಂಡು ಹೋದ. ಅಂದು ಮುಂಜಾನೆ ಗವರ್ನರು ಸಹಿಮಾಡಿದ್ದ ಕ್ಷಮಾದಾನ ಪತ್ರವನ್ನು ವಾರ್ಡನ್ ಜಿಮ್ಮಿಗೆ ನೀಡಿದರು. ಅದನ್ನು ದಣಿದವನಂತೆ ಆತ ತೆಗೆದುಕೊಂಡ.

ನಾಲ್ಕು ವರ್ಷಗಳ ಶಿಕ್ಷೆಯಲ್ಲಿ ಸುಮಾರು ಹತ್ತು ತಿಂಗಳನ್ನು ಅನುಭವಿಸಿ ಮುಗಿಸಿದ್ದ. ಜಿಮ್ಮಿ ತಾನು ಹೆಚ್ಚೆಂದರೆ ಮೂರು ತಿಂಗಳು ಅಲ್ಲಿರಬೇಕಾಗಬಹುದೆಂದು ಎಣಿಸಿದ್ದ.

"ವಾಲೆಂಟೀನ್," ವಾರ್ಡನ್ ಹೇಳಿದರು, "ಮುಂಜಾನೆ ನೀನು ಹೊರಗೆ ಹೋಗ್ತಿಯೇ. ಇನ್ನು ನೀನೂ ಒಬ್ಬ ಮನುಷ್ಯ ಆಗು. ಹೃದಯದಿಂದ ನೀನೇನೂ ಕೆಟ್ಟವನಲ್ಲ. ತಿಜೋರಿಗಳನ್ನು ಒಡೆಯುವುದನ್ನು ನಿಲ್ಲಿಸು. ನೇರವಾಗಿ ಬದುಕು."

"ನಾನು?" ಆಶ್ಚರ್ಯದಿಂದ ಹೇಳಿದ ಜಿಮ್ಮಿ. "ನಾನು ನನ್ನ ಜೀವಮಾನದಲ್ಲಿ ಒಂದು ತಿಜೋರೀನೂ ಒಡೀಲಿಲ್ಲ."

"ಹೌದಪ್ಪ." ನಕ್ಕರು ವಾರ್ಡನ್, "ಒಡೀಲಿಲ್ಲ ಸರಿ, ಹಾಗಿದ್ರೆ ಸ್ಪ್ರಿಂಗ್‌ಫೀಲ್ಡಿನ ಪ್ರಕರಣದಲ್ಲಿ ಹೇಗಪ್ಪ ಸಿಕ್ಕಿಕೊಂಡಿದ್ದೆ?"

"ನಾನೇ? ಯಾಕೆ ವಾರ್ಡನ್, ನನ್ನ ಜನ್ಮದಲ್ಲೇ ನಾನು ಸ್ಪ್ರಿಂಗ್‌ಫೀಲ್ಡಿನಲ್ಲಿರಲಿಲ್ಲ!" ಎಂದ ಜಿಮ್ಮಿ.

"ಅವನನ್ನು ವಾಪಸ್ ಕರೆದುಕೊಂಡು ಹೋಗು ಕ್ರೋನಿನ್" ವಾರ್ಡನ್, ನಕ್ಕು ಹೇಳಿದರು. "ಅವನಿಗೆ ಹೊರಹೋಗುವ ಬಟ್ಟೆ ಬರೆ ಕೊಡು. ಮುಂಜಾನೆ ಏಳು ಗಂಟೆಗೆ ಅವನನ್ನು ಹೊರಗೆ ಬಿಡು. ವಾಲೆಂಟೀನ್, ನನ್ನ ಹಿತವಚನದ ಬಗ್ಗೆ ಯೋಚಿಸು."

ಖಳನಾಯಕರಿಗೆ ಒಪ್ಪುವ ಸೂಟು, ಹೊರ ತೆರಳುವ 'ಕಡ್ಡಾಯ ಅತಿಥಿ'ಗಳಿಗೆ ಸರಕಾರವು ನೀಡುವ ಗಟ್ಟಿಯಾದ ಕಿರುಗುಟ್ಟುವ ಬೂಟುಗಳನ್ನು ಧರಿಸಿದ್ದ ಜಿಮ್ಮಿ ಮುಂಜಾನೆ ಏಳೂ ಕಾಲುಗಂಟೆಗೆ ವಾರ್ಡನ್‌ರ ಹೊರ ಕಚೇರಿಯಲ್ಲಿ ನಿಂತಿದ್ದ.

ಒಳ್ಳೆಯ ನಾಗರಿಕನಾಗಿ ಜೀವನ ನಡೆಸಲು

ಹಾಗೂ ಪುರೋಭಿವೃದ್ಧಿಯಾಗಲು ಸರಕಾರ ಕೊಡಮಾಡಿದ ಐದು ಡಾಲರು ನೋಟು ಹಾಗೂ ಒಂದು ರೈಲು ಟಿಕೇಟನ್ನು ಗುಮಾಸ್ತ ಅವನಿಗೆ ನೀಡಿದ. ವಾರ್ಡನ್ ಒಂದು ಸಿಗಾರು ನೀಡಿ ಕೈ ಕುಲುಕಿದರು.

೯೭೬೨ನೆ ನಂಬರಿನ ಈ ಕೈದಿ "ಗವರ್ನರರಿಂದ ಕ್ಷಮಿಸಲ್ಪಟ್ಟವರು" ಎಂಬ ಶಿರೋನಾಮೆಯ ದಾಖಲೆಯ ಪುಸ್ತಕದಲ್ಲಿ ದಾಖಲಾಗಿ, ಮಿ. ಜೇಮ್ಸ್ ವಾಲೆಂಟೀನ್ ಹೊರ ಬೆಳಕಿಗೆ ಬಿದ್ದ.

ಹಕ್ಕಿಗಳ ಹಾಡು. ಹಸಿರು ಮರಗಳ ತೊನೆದಾಟ, ಹೂಗಳ ಪರಿಮಳ ಇವುಗಳನ್ನೆಲ್ಲ ಅಲಕ್ಷಿಸಿ ಜಿಮ್ಮಿ ನೆಟ್ಟಗೆ ಒಂದು ರೆಸ್ಟೋರೆಂಟಿಗೆ ಹೋದ. ಅಲ್ಲಿ ಅವನು ಒಂದು ಬಾಯಿಲ್ಡ್ ಚಿಕನ್, ಒಂದು ಬಾಟಲು ಬಿಳಿ ವೈನು ಇವುಗಳ ರೂಪದಲ್ಲಿ ಸ್ವಾತಂತ್ರ್ಯದ ಮೊದಲ ಮಧುರ ಸುಖಾನುಭೂತಿಯ ರುಚಿ ಪಡೆದು, ವಾರ್ಡನ್ ತನಗೆ ನೀಡಿದ್ದ ಸಿಗಾರಿಗಿಂತ ಉತ್ತಮ ಮಟ್ಟದ ಒಂದು ಸಿಗಾರು ಎಳೆದ. ಅಲ್ಲಿಂದ ಅವನು ಆರಾಮವಾಗಿ ರೇಲ್ವೆ ಸ್ಟೇಶನ್ನಿಗೆ ನಡೆದ. ಬಾಗಿಲ ಬಳಿ ಕುಳಿತಿದ್ದ ಒಬ್ಬ ಕುರುಡನ ಹ್ಯಾಟಿಗೆ ಕಾಲು ಡಾಲರ್ ಚಿಮ್ಮಿ ತನ್ನ ರೈಲು ಹತ್ತಿ, ಮೂರು ತಾಸುಗಳಲ್ಲಿ ರಾಜ್ಯದ ಗಡಿಯ ಸಮೀಪದ ಒಂದು ಸಣ್ಣ ಪಟ್ಟಣದಲ್ಲಿಳಿದು ಮೈಕ್ ದೊಲಾನನ ಕೆಫೆಗೆ ಹೋದ. ಬಾರಿನಲ್ಲಿ ಒಂಟಿಯಾಗಿ ಕುಳಿತಿದ್ದ ಮೈಕನ ಕೈ ಕುಲುಕಿದ.



"ಇನ್ನೂ ಬೇಗ ನಿನ್ನನ್ನು ಬಿಡಲಿಕ್ಕಾಗಿಲ್ಲ ಜಿಮ್ಮಿ. ಸಾರಿ. ಸ್ಪ್ರಿಂಗ್‌ಫೀಲ್ಡಿನ ಪ್ರತಿರೋಧ ಎದುರಿಸಬೇಕಾಯ್ತು. ಗವರ್ನರು ತಿರಸ್ಕರಿಸಿಯೇ ಬಿಡೋದ್ರಲ್ಲಿದ್ರು. ಚೆನ್ನಾಗಿದ್ದೀಯಾ?"

"ಫೈನ್" ಎಂದ ಜಿಮ್ಮಿ. "ನನ್ನ ಬೀಗದ ಕೈ ಇದೆಯಾ?"

ತನ್ನ ಕೀಲಿ ಪಡೆದ ಜಿಮ್ಮಿ ಹಿಂದಿನ ಒಂದು ಕೋಣೆಯ ಬೀಗ ತೆಗೆದು ಮಹಡಿಯ ಮೇಲೆ ಹೋದ. ಪ್ರತಿಯೊಂದು ವಸ್ತುವೂ ಅವನು ಹೇಗೆ ಬಿಟ್ಟುಹೋಗಿದ್ದನೋ ಹಾಗೇ ಇತ್ತು. ಪತ್ತೇದಾರ ಬೆನ್ ಪ್ರೈಸ್ ಜಿಮ್ಮಿಯನ್ನು ಕೈದು ಮಾಡಲೆಂದು ತನ್ನ ವಶಕ್ಕೆ ತೆಗೆದುಕೊಳ್ಳುವಾಗ ಕಿತ್ತು ಹೋಗಿದ್ದ ಅವನ ಕಾಲರ್ ಗುಂಡಿ ಅಲ್ಲೇ ನೆಲದ ಮೇಲೆ ಬಿದ್ದಿತ್ತು. ಮಡಚು ಹಾಸಿಗೆಯೊಂದನ್ನು ಗೋಡೆಯಿಂದ ಹೊರಗೆಳೆದು. ಗೋಡೆಯಲ್ಲಿದ್ದ ಒಂದು ಅರೆಯಿಂದ ದೂಳು ಮುಚ್ಚಿದ್ದ ಒಂದು ಸೂಟ್‌ಕೇಸನ್ನು ಎಳೆದು ತೆಗೆದ. ಅದರ ಬಾಯಿ ತೆರೆದು ಪೂರ್ವಪ್ರಾಂತ್ಯದಲ್ಲೇ ಅತ್ಯುತ್ತಮವಾದ ಬೀಗ ಒಡೆಯುವ ಸಲಕರಣೆಗಳನ್ನು ಬಹಳ ಪ್ರೀತಿಯಿಂದ ದಿಟ್ಟಿಸಿದ. ವಿಶೇಷವಾಗಿ ಟೆಂಪರ್ ಕೊಟ್ಟ ಉಕ್ಕಿನಿಂದ ತಯಾರಿಸಿದ ಪರಿಪೂರ್ಣ ಸೆಟ್ಟಾಗಿತ್ತದು. ಬೈರಿಗೆ. ಪಂಚುಗಳು. ಬ್ರೇಸುಗಳು, ಬಿಟ್ಟುಗಳು, ಕ್ಲಾಂಪುಗಳು. ಆರ ಇವಲ್ಲದೆ ಎರಡು ಮೂರು ಉಪಕರಣಗಳು ಜಿಮ್ಮಿಯೇ ತಯಾರಿಸಿಕೊಂಡವು. ಅವುಗಳ ಕುರಿತಂತೂ ಅವನಿಗೆ ತುಂಬ ಹೆಮ್ಮೆ. ಈ ವೃತ್ತಿಗೆ ಬೇಕಾದಂಥ ಉಪಕರಣಗಳನ್ನು

ತಯಾರಿಸಿಕೊಳ್ಳಲು ಅವನಿಗೆ ಒಂಬೈನೂರು ಡಾಲರುಗಳಿಗಿಂತ ಹೆಚ್ಚು ಖರ್ಚಾಗಿತ್ತು.

ಅರ್ಧ ತಾಸಿನಲ್ಲಿ ಜಿಮ್ಮಿ ಕೆಳಗೆ ಕೆಫೆಗೆ ಬಂದ. ಈಗವನು ಒಳ್ಳೇ ಹೊಂದಿಕೆಯಾಗುವ ಉತ್ತಮ ಉಡುಪು ಧರಿಸಿದ್ದ. ಸ್ವಚ್ಛಗೊಳಿಸಿದ್ದ ಸೂಟ್ ಕೇಸನ್ನು ಕೈಯಲ್ಲಿ ಹಿಡಿದಿದ್ದ.

"ಏನಾದರೂ ಹಂಚಿಕೆಯಿದೆಯೇನಯ್ಯ?" ಮೈಕ್ ಡೋಲಾನ್ ಮೃದುವಾಗಿ ಕೇಳಿದ.

"ನನ್ನ ಕೇಳಿದೆಯಾ?" ಬೆರಗಿನ ದನಿಯಲ್ಲಿ ಕೇಳಿದ ಜಿಮ್ಮಿ. "ನನಗೆ ಅರ್ಥವಾಗಿಲ್ಲ, ನಾನು 'ದಿ ನ್ಯೂಯಾರ್ಕ್ ಅಮಾಲ್ಗಮೇಟೆಡ್ ಶಾರ್ಟ್ ಸ್ನ್ಯಾಪ್ ಬಿಸ್ಕಟ್ ಕ್ರ್ಯಾಕರ್ ಎಂಡ್ ಫ್ರ್ಯಾಜಲ್ಡ್ ವೀಟ್ ಕಂಪನಿ'ಯ ಪ್ರತಿನಿಧಿ" ಎಂದ.

ಈ ಹೇಳಿಕೆ ಮೈಕನಿಗೆ ಎಷ್ಟರ ಮಟ್ಟಿಗೆ ವಿನೋದ ನೀಡಿತೆಂದರೆ ತಟ್ಟನೆ ಅವನು ಒಂದು ಲೋಟ ಹಾಲು ಕುಡಿದುಬಿಟ್ಟ. ಯಾಕೆಂದರೆ, ಮೈಕ್ ಎಂದೂ ಅಮಲು ಪದಾರ್ಥ ಮುಟ್ಟಿದವನೇ ಅಲ್ಲ.

ವಾಲೆಂಟೀನ್ ಬಿಡುಗಡೆಯಾದ ಒಂದು ವಾರದ ನಂತರ ಇಂಡಿಯಾನಾದ ರಿಚ್‌ಮಂಡಿನಲ್ಲಿ ಒಂದು ನೀಟಾದ ತಿಜೋರಿ ದರೋಡೆ ನಡೆಯಿತು. ಸುಳಿವು ಸಿಗಲಿಲ್ಲ. ಕೇವಲ ಎಂಟು ನೂರು ಡಾಲರು ಮಾತ್ರ ದಕ್ಕಿದ್ದು. ಇದಾಗಿ ಎರಡು ವಾರಗಳಲ್ಲಿ ಲೋಗನ್ ಸ್ಪೋರ್ಟಿನಲ್ಲಿ, ಪೇಟೆಂಟ್ ಮಾಡಿದ್ದ, ಸುಧಾರಿತ, ದೋಚಲಾಗದ್ದೆಂದು ವರ್ಣಿಸಲ್ಪಟ್ಟ ತಿಜೋರಿಯನ್ನು ಬೆಣ್ಣೆಯಿಂದ ಕೊರೆದಂತೆ ತೆಗೆದಂತೆ ತೆಗೆಯಲಾಯಿತು. ಹದಿನೈದು ನೂರು ಡಾಲರು ನಗದು ಪತ್ರಗಳು ಬೆಳ್ಳಿ ಇವುಗಳನ್ನು ಮುಟ್ಟಿರಲಿಲ್ಲ. ಇದು ಘಟಿಂಗರನ್ನು ಹಿಡಿಯುವವರ ಆಸಕ್ತಿ ಕೆರಳಿಸತೊಡಗಿತು. ನಂತರ ಜೆಫರ್‌ಸನ್ ಸಿಟಿ ಬ್ಯಾಂಕಿನ ಒಂದು ಹಳೇ ಮಾದರಿಯ ತಿಜೋರಿ ಜಾಗೃತವಾಗಿ ತನ್ನೊಡಲೊಳಗಿಂದ ಐದು ಸಾವಿರ ಡಾಲರುಗಳ ನೋಟುಗಳನ್ನು ಹೊರ ಚೆಲ್ಲಿತ್ತು. ಈಗ ಲುಕ್ಸಾನಿನ ಮೊತ್ತ ಬೆನ್ ಪ್ರೈಸ್‌ರ ಶ್ರೇಣಿಯವರ ಮಟ್ಟಕ್ಕೆ ವಿಚಾರವನ್ನು ಏರಿಸಿತು. ಈ ಎಲ್ಲ ದರೋಡೆಗಳಲ್ಲಿ ತುಂಬ ಎದ್ದು ಕಾಣುವ ಸಾದೃಶ್ಯವಿದ್ದುದು ಗಮನಕ್ಕೆ ಬಂತು.

ದರೋಡೆಯ ತನಿಖೆ ಮಾಡಿದ ಬೆನ್ ಪ್ರೈಸ್ ಟೀಕಿಸಿದರು: "ಇದು ಜಿಮ್ಮಿ ವಾಲೆಂಟೀನನ ಸಂಕೇತ. ಅವನು ಪುನಃ ದಂಧೆ ಆರಂಭಿಸಿದ್ದಾನೆ. ಕಾಂಬಿನೇಶನ್ ಬಿರಡೆ ನೋಡಿ ಹಸೀ ನೆಲದಿಂದ ಮೂಲಂಗಿ ಕಿತ್ತಷ್ಟು ಸಲೀಸಾಗಿ ಎಗರಿಸಲಾಗಿದೆ. ಅದನ್ನು ಮಾಡುವ ಕ್ಲಾಂಪುಗಳು ಅವನ ಬಳಿ ಮಾತ್ರ ಇವೆ. ಎಷ್ಟು ಕ್ಲೀನಾಗಿ ಬೀಗ ಹಾರಿಸಲಾಗಿದೆ ನೋಡಿ! ಜಿಮ್ಮಿಗೆ ಈ ಕೆಲಸಕ್ಕಾಗಿ ಯಾವಾಗಲೂ ಒಂದಕ್ಕಿಂತ ಹೆಚ್ಚು ಡ್ರಿಲ್ ಮಾಡಬೇಕಾಗುವುದಿಲ್ಲ. ಹೌದು ಮಿ. ವಾಲೆಂಟೀನನನ್ನು ನಾನು ಹಿಡಿಯಬೇಕೆಂದು ಕಾಣುತ್ತೆ. ಈ ಸಾರಿ ಅವನು ಕ್ಷಮಾದಾನದ ತಪ್ಪಿನ ಲಾಭ ಪಡೆಯದೆ ಪೂರ್ಣ ಅವಧಿಯ ಸೆರೆಮನೆ ವಾಸ ಮಾಡುತ್ತಾನೆ."



ಜಿಮ್ಮಿಯ ಅಭ್ಯಾಸಗಳನ್ನು ಬೆನ್ ಪ್ರೈಸ್ ಅರಿತಿದ್ದರು. ಸ್ಪ್ರಿಂಗ್‌ಫೀಲ್ಡ್ ಕೇಸಿನ ಕೆಲಸ ಮಾಡುವಾಗ ಅವರು ಅವುಗಳನ್ನು ತಿಳಿದಿದ್ದರು. ದೂರದೂರಕ್ಕೆ ಹಾರುವುದು, ಬೇಗ ಸಾಪತ್ತೆಯಾಗುವುದು, ಕೆಲಸಕ್ಕೆ ಜೊತೆಗಾರರಿಲ್ಲದಿರುವುದು, ಮತ್ತು ಉತ್ತಮ ಸಮಾಜದ ಅಭಿರುಚಿ ಈ ಮಾರ್ಗಗಳು ಅವನವು. ಬೆನ್ ಪ್ರೈಸ್ ಈ ತಿಜೋರಿ ಭೇದಕನ ಬೆನ್ನು ಹತ್ತಿದ್ದಾರೆಂದು ಸುದ್ದಿಯಾಗಿ 'ಒಡೆಯಲಾಗದ ತಿಜೋರಿ'ಗಳುಳ್ಳ ಇತರರು ಸಮಾಧಾನದ ನಿಟ್ಟುಸಿರು ಬಿಟ್ಟರು.

ಒಂದು ಮಧ್ಯಾಹ್ನ ಜಿಮ್ಮಿ ವಾಲೆಂಟೀನ್ ಸೂಟ್‌ಕೇಸಿನೊಂದಿಗೆ ಅರ್ಕನ್ಸಾಸಿನ ರೈಲು ಮಾರ್ಗಕ್ಕೆ ಐದು ಮೈಲು ಹೊರಗಿದ್ದ ಚಿಕ್ಕ ಪಟ್ಟಣ ಎಲ್‌ಮೋರಿನಲ್ಲಿ ಬಂದಿಳಿದ. ಕಾಲೇಜಿನಿಂದ ಆಗಷ್ಟೇ ಮನೆಗೆ ಹಿಂದಿರುಗಿದ ಒಳ್ಳೇ ಆಟಗಾರನಂತೆ ಕಾಣುತ್ತಿದ್ದ ಜಿಮ್ಮಿ ಹೋಟೆಲಿನ ಕಡೆ ಹೆಜ್ಜೆ ಹಾಕಿದ.

ಯುವತಿಯೊಬ್ಬಳು ರಸ್ತೆ ದಾಟಿ, ಮೂಲೆಯಲ್ಲಿ ಅವನನ್ನು ದಾಟಿ ಹೋಗಿ 'ದಿ ಎಲ್‌ಮೋರ್ ಬ್ಯಾಂಕ್' ಎಂಬ ಫಲಕದ ಕೆಳಗಿದ್ದ ಬಾಗಿಲನ್ನು ಪ್ರವೇಶಿಸಿದಳು. ಜಿಮ್ಮಿ ವಾಲೆಂಟೀನ್ ಅವಳ ಕಣ್ಣುಗಳನ್ನು ದೃಷ್ಟಿಸಿದ. ತಾನು ಏನೆಂಬುದನ್ನು ಮರೆತ. ಬೇರೊಬ್ಬ ಮನುಷ್ಯನೇ ಆಗಿಬಿಟ್ಟ. ಅವಳು ತನ್ನ ದೃಷ್ಟಿಯನ್ನು ಕೆಳಗಿಳಿಸಿದಳು. ತುಸು ರಂಗೇರಿದಳು. ಜಿಮ್ಮಿಯಂಥ ಸ್ಟೈಲ್ ಹಾಗೂ ರೂಪಗಳಿದ್ದ ಯುವಕರು ಎಲ್ಮೋರಿನಲ್ಲಿ ವಿರಳವಾಗಿದ್ದರು.

ಬ್ಯಾಂಕಿನ ಮೆಟ್ಟಲುಗಳ ಮೇಲೆ, ಷೇರ್ ಹೋಲ್ಡರನ ಠೀವಿಯಲ್ಲಿ ಆರಾಮಾಗಿ ಹೊತ್ತು ಕಳೆಯುತ್ತಿದ್ದ ಒಬ್ಬ ಹುಡುಗನನ್ನು ಜಿಮ್ಮಿ ಬುಟ್ಟಿಗೆ ಹಾಕಿಕೊಂಡ. ಅವನಿಗೆ ಆಗಾಗ ಒಂದೊಂದು ನಾಣ್ಯವನ್ನು ತಳ್ಳುತ್ತ ನಗರದ ಬಗ್ಗೆ ಪ್ರಶ್ನೆ ಹಾಕತೊಡಗಿದ. ಅಷ್ಟರಲ್ಲೇ ಆ ಯುವತಿ ಹೊರಬಂದಳು. ಸೂಟ್‌ಕೇಸಿನ ತರುಣನನ್ನು ಗಮನಿಸದವಳಂತೆ ಗಾಂಭೀರ್ಯದಿಂದ ತನ್ನ ದಾರಿ ಹಿಡಿದು ಹೋದಳು.

"ಆ ಹುಡುಗಿ ಪಾಲಿ ಸಿಂಪಸನ್ ಅಲ್ಲವೇ?" ಜಿಮ್ಮಿ ಕೇಳಿದ.

"ಅಲ್ಲ ಅವಳು ಅನಾಬೆಲ್ ಆದಮ್ಸ್. ಅವಳಪ್ಪ ಈ ಬ್ಯಾಂಕಿನ ಯಜಮಾನ. ನೀವು ಎಲ್ಮೋರಿಗೆ ಯಾಕ್ರೀ ಬಂದ್ರಿ? ಈ ವಾಚಿನ ಚೈನು ಬಂಗಾರದ್ದಾ? ನಾನು ಒಂದು ಬುಲ್‌ಡಾಗ್ ತಗೊಳ್ತೀನೆ. ಇನ್ನೂ ಕಾಸಿದೆಯಾ?" ಕೇಳಿದ ಆ ಹುಡುಗ.

ಜಿಮ್ಮಿ, ಪ್ಲಾಂಟರ್ಸ್ ಹೋಟೆಲಿಗೆ ಹೋದ; ರಾಲ್ಫ್ ಡಿ. ಸ್ಪೆನ್ಸರ್ ಎಂದು ಹೆಸರು ಬರೆಸಿ ಒಂದು ಕೋಣೆ ಹಿಡಿದ. ಡೆಸ್ಕಿಗೆ ಒರಗಿ ನಿಂತು ತನ್ನ ಉದ್ದೇಶನ್ನು ವಿವರಿಸಿದ. ಬಿಸಿನೆಸ್ ಮಾಡಲು, ಒಂದು ಸ್ಥಳದ ಆಯ್ಕೆ ಮಾಡಲು ತಾನು ಎಲ್ಮೋರಿಗೆ ಬಂದಿದ್ದಾಗಿ ತಿಳಿಸಿದ. ಶೂ ವ್ಯವಹಾರ ಹೇಗಿದೆ ಟೌನಿನಲ್ಲಿ? ಶೂ ಬಿಸಿನೆಸ್ ಬಗ್ಗೆ ತಾನು ಯೋಚಿಸಿದ್ದೇನೆ. ಅವಕಾಶ ವಿದೆಯೋ ಹೇಗೆ?"

ಜಿಮ್ಮಿಯ ವೇಷ ಭೂಷಣ, ಅವನ ನಡಾವಳಿಗಳಿಂದ ಕ್ಲರ್ಕು ಪ್ರಭಾವಿತನಾದ. ಎಲ್ಮೋರಿನ ಷೋಕಿಯಿಲ್ಲದ ಯುವ ವಲಯದಲ್ಲಿ ತಾನೇ ಒಳ್ಳೇ ಫ್ಯಾಷನ್ನಿನವನೆಂದುಕೊಂಡಿದ್ದ ಆತ ಈಗ ತನ್ನಲ್ಲೇ ಕೊರತೆಯನ್ನು ಕಂಡ. ಜಿಮ್ಮಿಯನ್ನು ಕಣ್ಣಲ್ಲಿ ಅಳೆಯುತ್ತಲೇ ಆತ ಹಾರ್ದಿಕವಾಗಿ ಮಾಹಿತಿ ನೀಡಿದ.

"ಹಾಂ, ಶೂ ಬಿಸಿನೆಸ್ಸಿಗೆ ಒಳ್ಳೆಯ ಅವಕಾಶ ಇರಲೇ ಬೇಕು. ಪೇಟೆಯಲ್ಲಿ 'ಶೂ ಅಂಗಡಿ' ಯೆಂದು ಪ್ರತ್ಯೇಕವಾದ ಅಂಗಡಿಯೇ ಇಲ್ಲ. ಜನರಲ್ ಸ್ಟೋರುಗಳು, ಸ್ಟೇಶನರಿ ಅಂಗಡಿಗಳೇ ಶೂಗಳನ್ನು ಮಾರುತ್ತವೆ. ಎಲ್ಲಾ ಲೈನುಗಳಲ್ಲೂ ಬಿಸಿನೆಸ್ಸು ಚೆನ್ನಾಗಿಯೇ ಇದೆ. ಮಿ. ಸ್ಪೆನ್ಸರ್, ಎಲ್ಮೋರಿನಲ್ಲೇ ಅಂಗಡಿಯಿಡಿ ಎಂದು ನಾನು ಹಾರೈಸುತ್ತೇನೆ. ವಾಸಿಸಲು ಒಳ್ಳೆಯ ಪಟ್ಟಣ. ಜನ ಬಹಳ ಸಭ್ಯರು."

ಮಿ. ಸ್ಪೆನ್ಸರ್ ಕೆಲ ದಿನ ಟೌನಿನಲ್ಲೇ ಉಳಿದು

ಸಂದರ್ಭ ಸನ್ನಿವೇಶ ನೋಡಲು ಆಲೋಚಿಸಿದ್ದಾನೆ. ಬೇಡ. ಕ್ಲರ್ಕು ಹುಡುಗನನ್ನೇನೂ ಕರೆಯುವುದು ಬೇಡ. ತಾನೇ ತನ್ನ ಸೂಟ್ ಕೇಸನ್ನು ಎತ್ತಿಕೊಂಡು ಹೋಗುತ್ತಾನೆ; ಅದರ ಭಾರ ತುಸು ಜಾಸ್ತಿ.

ಮಿ. ರಾಲ್ಫ್ ಸ್ಪೆನ್ಸರ್, ಜಿಮ್ಮಿ ವಾಲೆಂಟೀನನ ಬೂದಿಯಿಂದ—ಥಟ್ಟನೆ ಎರಗಿದ ಪ್ರೇಮ ಜ್ವಾಲೆ ಉಳಿಸಿದ ಬೂದಿಯಿಂದ—ಎದ್ದು ಬಂದ ಫೀನಿಕ್ಸ್, ಎಲ್ಮೋರಿನಲ್ಲೇ ಉಳಿದ ಮೇಲೆ ಬಂದ ಅವನು ಒಂದು ಶೂ ಅಂಗಡಿ ತೆರೆದ; ಒಳ್ಳೆಯ ಬಿಸಿನೆಸ್ ಗಳಿಸಿದ.

ಸಾಮಾಜಿಕವಾಗಿ ಕೂಡ ಅವನು ಯಶಸ್ವಿಯಾದ. ಅನೇಕ ಸ್ನೇಹಿತರನ್ನು ಗಳಿಸಿದ. ತನ್ನ ಆಕಾಂಕ್ಷೆಯನ್ನೂ ಈಡೇರಿಸಿಕೊಂಡ. ಮಿಸ್. ಅನಾಬೆಲ್ ಆದಮ್ಸಳನ್ನು ಭೇಟಿಯಾದ. ಅವಳ ಲಾವಣ್ಯಕ್ಕೆ ಹೆಚ್ಚು ಹೆಚ್ಚು ಮಾರು ಹೋದ.

ಒಂದು ವರ್ಷದ ಕೊನೆಯಲ್ಲಿ ಮಿ. ರಾಲ್ಫ್ ಸ್ಪೆನ್ಸರನ ಸ್ಥಿತಿ ಹೀಗಿತ್ತು: ಅವನು ಅಲ್ಲಿಯ ಸಮಾಜದಲ್ಲಿ ಪ್ರತಿಷ್ಠೆ ಗಳಿಸಿದ್ದ. ಅವನ ಶೂ ಅಂಗಡಿ ಒಳ್ಳೇ ಉಚ್ಛ್ರಾಯದಲ್ಲಿತ್ತು. ಅನಾಬೆಲ್ಲಳೊಂದಿಗೆ ಅವನ ವಿವಾಹ ನಿಶ್ಚಿತವಾಗಿತ್ತು. ಇನ್ನೆರಡು ವಾರಗಳಲ್ಲಿ ಅವರ ವಿವಾಹ ನಡೆಯಲಿತ್ತು. ಮಿ. ಆದಮ್ಸ ಸ್ಪೆನ್ಸರನನ್ನು ಒಪ್ಪಿಕೊಂಡಿದ್ದರು. ಅವನಲ್ಲಿ ಅನಾಬೆಲ್ಲಳ ಪ್ರೇಮ ಹಾಗೂ ಮೆಚ್ಚುಗೆ ಸಮಸಮವಾಗಿತ್ತು. ಮಿ. ಆದಮ್ಸರ ಕುಟುಂಬದ ಹಳೆಯ ಸದಸ್ಯನೋ ಎಂಬಷ್ಟು ಸಲುಗೆಯಿತ್ತು, ಅವನಿಗೆ ಅವರ ಮನೆಯಲ್ಲಿ; ಅನಾಬೆಲ್ಲಳ ವಿವಾಹಿತ ಅಕ್ಕನಲ್ಲಿ ಕೂಡ.

ಒಂದು ದಿನ ಸ್ಪೆನ್ಸರ್ ತನ್ನ ಕೋಣೆಯಲ್ಲಿ ಕುಳಿತು ಈ ಕೆಳಗಿನ ಒಕ್ಕಣೆಯ ಪತ್ರ ಬರೆದು ಅದನ್ನು ಸೇಂಟ್ ಲೂಯಿಯ ತನ್ನ ಹಳೆಯ ಗೆಳೆಯನೊಬ್ಬನ ವಿಳಾಸಕ್ಕೆ ರವಾನಿಸಿದ.

"ಪ್ರಿಯ ಗೆಳೆಯ,

ಲಿಟ್ಲ್ ರಾಕಿನ ಸುಲಿವಾನನ ಜಾಗಕ್ಕೆ ಮುಂದಿನ ಬುಧವಾರ ರಾತ್ರಿ ಒಂಭತ್ತು ಗಂಟೆಗೆ ನೀನು ಬರಬೇಕೆಂಬುದು ನನ್ನ ಅಪೇಕ್ಷೆ.

ನನಗಾಗಿ ನೀನು ಕೆಲ ಚಿಕ್ಕ ಪುಟ್ಟ ಕೆಲಸಗಳನ್ನು ಮುಗಿಸಿಕೊಡಬೇಕು. ಅಲ್ಲದೆ ನಾನು ನಿನಗೆ ನನ್ನ ಉಪಕರಣಗಳ ಪೆಟ್ಟಿಗೆಯನ್ನು ಉಡುಗೊರೆಯಾಗಿ ನೀಡಬೇಕೆಂದಿದ್ದೇನೆ. ಅದನ್ನು ಪಡೆಯಲು ನೀನು ಸಂತೋಷದಿಂದ ಒಪ್ಪುವೆಯೆಂಬುದನ್ನು ನಾನು ಬಲ್ಲೆ. ಸಾವಿರ ಡಾಲರು ಖರ್ಚುಮಾಡಲು ನೀನು ಅವುಗಳನ್ನು ನಕಲು ಮಾಡಲಾರೆ. ಬಿಲ್ಲಿ, ನಾನು ನನ್ನ ಹಳೇ ಧಂದೆಯನ್ನು ಬಿಟ್ಟುಬಿಟ್ಟೆನಯ್ಯ—ಒಂದು ವರ್ಷದ ಹಿಂದೆಯೇ. ನನಗೀಗ ಒಂದು ಒಳ್ಳೆಯ ಅಂಗಡಿಯಿದೆ. ಪ್ರಾಮಾಣಿಕ ಜೀವನ ಮಾಡುತ್ತಿದ್ದೇನೆ.

ಇಂದಿನಿಂದ ಎರಡು ವಾರಗಳಲ್ಲಿ ಪ್ರಪಂಚದಲ್ಲೇ ಉತ್ತಮಳಾದ ಹುಡುಗಿಯನ್ನು ಮದುವೆ



ಯಾಗುವವನಿದ್ದೇನೆ. ನೇರವಾದ ಬದುಕು—ಇದೇ ಜೀವನ ಕಣಯ್ಯ, ಬಿಲ್ಲಿ. ಇಂದು ನಾನು ಮಿಲಿಯ ಡಾಲರು ಕೊಡುತ್ತೇನೆಂದರೂ ಇನ್ನೊಬ್ಬನ ಒಂದು ಡಾಲರನ್ನೂ ಮುಟ್ಟ-ಲಾರೆ. ಮದುವೆಯಾದ ನಂತರ ಎಲ್ಲ ಮಾರಿಬಿಟ್ಟು ಪಶ್ಚಿಮದ ಕಡೆ ಹೊರಟು ಹೋಗುತ್ತೇವೆ. ಅಲ್ಲಿ ನನ್ನ ಮೇಲೆ ಹಳೆಯ ದಾಖಲೆಗಳನ್ನು ಎತ್ತಿ ಪ್ರಕರಣಗಳನ್ನು ಮಗುಚಿ ಹಾಕುವ ಅಪಾಯ ಅಷ್ಟಾಗಿರುವುದಿಲ್ಲ. ನಂಬು ಬಿಲ್ಲಿ, ಅವಳೊಬ್ಬ ದೇವತೆ ಕಣಯ್ಯ. ಅವಳು ನನ್ನಲ್ಲಿ ನಂಬುಗೆಯಿಟ್ಟಿದ್ದಾಳೆ. ಇಡೀ ಪ್ರಪಂಚಕ್ಕಾಗಿಯೂ ನಾನು ನನ್ನ ಜನ್ಮದಲ್ಲೇ ಇನ್ನೊಂದು ಕೇಡಿ ಕೆಲಸ ಮಾಡಲಾರೆ. ಖಂಡಿತ ಸುಲಿವಾನನಲ್ಲಿಗೆ ಬಾ. ನಾನು ನಿನ್ನನ್ನು ನೋಡಲೇ ಬೇಕು. ಉಪಕರಣಗಳ ಪೆಟ್ಟಿಗೆಯನ್ನು ನಾನು ನನ್ನೊಂದಿಗೇ ತರುವೆ.

ನಿನ್ನ ಹಳೆಯ ಗೆಳೆಯ
ಜಿಮ್ಮಿ.

ಜಿಮ್ಮಿ ಈ ಪತ್ರ ಬರೆದ ದಿನದ ಮುಂದಿನ ಸೋಮವಾರ ರಾತ್ರಿ ಬೆನ್ ಪ್ರೈಸ್ ಎಲ್ಮೋರಿಗೆ ಮೆತ್ತಗೆ ಬಂದು ಸೇರಿದರು. ತಾವು ತಿಳಿಯ ಬೇಕಾದ್ದನ್ನು ಪತ್ತೆ ಮಾಡುವ ವರೆಗೂ ತಮ್ಮದೇ ಆದ ಶಾಂತ ರೀತಿಯಲ್ಲಿ ಪೇಟೆಯನ್ನು ಸುತ್ತಿ-ದ್ದರು. ಸ್ಪೆನ್ಸರನ ಶೂ ಅಂಗಡಿಯ ರಸ್ತೆಯ ಆಚೆ ಬದಿಯ ಔಷಧಿ ಅಂಗಡಿಯಿಂದ ರಾಲ್ಫ್ ಡಿ. ಸ್ಪೆನ್ಸರನನ್ನು ಚೆನ್ನಾಗಿ ದೃಷ್ಟಿಸಿ ನೋಡಿದರು.

'ಬ್ಯಾಂಕರನ ಮಗಳನ್ನು ಮದುವೆ-ಯಾಗ್ತೀಯಾ, ಅಲ್ವಾ ಜಿಮ್ಮಿ?' ಬೆನ್ ತಮ್ಮಷ್ಟಕ್ಕೇ ಹೇಳಿಕೊಂಡರು. 'ಏನೋಪ್ಪ—ನನಗೆ ಭರವಸೆಯಿಲ್ಲ!'

ಮರುದಿನ ಮುಂಜಾನೆ ಜಿಮ್ಮಿ ಆದಮ್ಸ್ ಅವರಲ್ಲಿ ಉಪಾಹಾರ ಮುಗಿಸಿದ. ಅಂದು ಅವನು ಮದುವೆಯ ಸೂಟಿಗೆ ಆರ್ಡರ್ ಮಾಡಿ ಅನಾಬೆಲ್ಲಳಿಗೆ ಏನಾದರೂ ಉಡುಗರೆಯನ್ನು ಖರೀದಿ ಮಾಡಲು ಲಿಟ್ಲ್‌ರಾಕ್‌ಗೆ ಹೋಗುವವನಿದ್ದ. ಇದೇ ಅವನು ಎಲ್ಮೋರಿಗೆ ಬಂದ ಮೇಲೆ ಮೊದಲ ಬಾರಿಗೆ ಊರನ್ನು ಬಿಡುವುದಾಗಿತ್ತು. ಕೊನೆಯ 'ವೃತ್ತಿ ಕಾರ್ಯ'ವನ್ನೆಸಗಿ ಆಗಲೇ ಒಂದು ವರ್ಷವಾಗಿದ್ದರಿಂದ ಹೊರಗೆ ಸುರಕ್ಷಿತವಾಗಿ ಹೋಗಬಹುದೆಂದೆಣಿಸಿದ ಆತ.

ಉಪಾಹಾರದ ನಂತರ ಒಂದು ಕುಟುಂಬದ ಪಾರ್ಟಿಯೇ ಪೇಟೆ ಕಡೆ ಹೊರಟಿತು– ಮಿ. ಆದಮ್ಸ್, ಅನಾಬೆಲ್, ಜಿಮ್ಮಿ, ಅನಾಬೆಲ್ಲಳ ಅಕ್ಕ ಮತ್ತು ಅವಳ ಐದು ಹಾಗೂ ಒಂಬತ್ತು ವರ್ಷದ ಇಬ್ಬರು ಚಿಕ್ಕ ಹೆಣ್ಣು ಮಕ್ಕಳು. ಅವರು, ಅವನು ಇನ್ನೂ ಉಳಿದುಕೊಂಡಿದ್ದ ಹೊಟೆಲಿನ ವರೆಗೂ ಬಂದರು. ಅವನು ತನ್ನ ರೂಮಿಗೆ ಓಡಿ ಹೋಗಿ ತನ್ನ ಸೂಟ್‌ಕೇಸನ್ನು ತಂದ. ಅಲ್ಲಿಂದ ಅವರು ಬ್ಯಾಂಕಿಗೆ ಹೋದರು. ಅಲ್ಲಿ ಜಿಮ್ಮಿಗಾಗಿ ಕುದುರೆ ಸಾರೋಟು ಸಿದ್ಧವಾಗಿತ್ತು. ಅವನನ್ನು ರೇಲ್ವೆ ಸ್ಟೇಶನ್ನಿಗೆ ಬಿಟ್ಟು ಬರಲು ಡಾಲ್ಫ್ ಗಿಬ್ಸನ್ ಸಿದ್ಧವಾಗಿ ನಿಂತಿದ್ದ.

ಎಲ್ಲರೂ ಬ್ಯಾಂಕಿನೊಳಗೆ ನಡೆದರು, ಏಕೆಂದರೆ ಮಿ. ಆದಮ್ಸರ ಭಾವೀ ಅಳಿಯನಿಗೆ ಎಲ್ಲ ಕಡೆ ಪ್ರವೇಶವಿತ್ತು. ಮಿಸ್ ಅನಾಬೆಲ್ಲಳನ್ನು ವಿವಾಹವಾಗಲಿರುವ ಸ್ಫುರದ್ರೂಪೀ ಲಕ್ಷಣವಂತ ತರುಣನಿಂದ ಅಭಿವಾದನವನ್ನು ಸ್ವೀಕರಿಸುವುದು ಕ್ಲರ್ಕುಗಳಿಗೆ ತುಂಬ ಖುಷಿ ಕೊಟ್ಟಿತು. ಜಿಮ್ಮಿ ತನ್ನ ಸೂಟ್‌ಕೇಸನ್ನು ಕೆಳಗಿಟ್ಟ. ಹೃದಯ ತುಂಬ ಸಂತೋಷ ತುಂಬಿದ, ತಾರುಣ್ಯ ಚಿಮ್ಮುತ್ತಿದ್ದ ಅನಾಬೆಲ್ ಜಿಮ್ಮಿಯ ಹ್ಯಾಟ್ ಹಾಕಿಕೊಂಡು ಸೂಟ್‌ಕೇಸನ್ನು ಎತ್ತಿಕೊಂಡಳು. "ಒಳ್ಳೇ ಡೋಲು ಬಾರಿಸುವವರಂತಿಲ್ವಾ ನಾನು?" ಎಂದ ಅನಾಬೆಲ್, "ಆ! ರಾಲ್ಫ್, ಎಷ್ಟು ಒಜ್ಜೆಯಪ್ಪಾ ಇದು! ಇದರ ತುಂಬಾ ಚಿನ್ನದ ಗಟ್ಟಿ ತುಂಬಿದ ಹಾಗಿದೆ."

ಎಂದಾಗ "ಅದರ ತುಂಬ ನಿಕ್ಕಲ್ ಪ್ಲೇಟಿಂಗ್ ಮಾಡಿದ ಲಾಳಗಳಿವೆ." ತಣ್ಣಗೆ ಹೇಳಿದ ಜಿಮ್ಮಿ, "ಅವನ್ನೆಲ್ಲ ವಾಪಸು ಮಾಡುತ್ತಿದ್ದೇನೆ. ಅವನ್ನು ತೆಗೆದುಕೊಂಡು ಹೋದರೆ ರೈಲು ಖರ್ಚಾದರೂ ಗಿಟ್ಟುತ್ತದೆ ಅಂತ ಅಂದ್ಕೊಂಡೆ. ತುಂಬ ಉಳಿ ತಾಯ ಕಲೀತಾ ಇದ್ದೇನೆ." ಎಂದೂ ಸೇರಿಸಿದ.

ಎಲ್ಮೋರ್ ಬ್ಯಾಂಕಿಗೆ ಹೊಸದಾಗಿ ಒಂದು ತಿಜೋರಿ ತಂದಿದ್ದರು. ಮಿ. ಆದಮ್ಸರಿಗೆ ಆ ಬಗ್ಗೆ ತುಂಬ ಹೆಮ್ಮೆ. ಬಂದವರೆಲ್ಲ ಅದನ್ನು ನೋಡಬೇಕೆಂಬ ಹಂಬಲ ಅವರಿಗೆ. ತಿಜೋರಿ ಚಿಕ್ಕದು. ಆದರೆ ಅದಕ್ಕೆ ಪೇಟೆಂಟ್ ಮಾಡಿದ ಬಾಗಿಲಿತ್ತು. ಒಂದು ಹಿಡಿಕೆಯನ್ನು ತಿರುಗಿಸಿದರೆ ಒಂದೇ ಬಾರಿಗೆ ಮೂರು ಗಟ್ಟಿಯಾದ ಉಕ್ಕಿನ ಬೋಲ್ಟುಗಳು ಹಾಕಿಕೊಳ್ಳುತ್ತಿದ್ದವು. ಅದರ ಮೇಲಿಂದ ಕಾಂಬಿನೇಷನ್ ಬೀಗ ಹಾಗೂ ಒಂದು ಟೈಂ ಲಾಂಕ್ ಇತ್ತು. ಅಳವಡಿಸಿದ ಗಡಿಯಾರಕ್ಕೆ ಕೀಲಿ ಕೊಟ್ಟು ಟೈಂ ಇಟ್ಟರೆ ಆ ವೇಳೆಗೆ ಮಾತ್ರ ಬೀಗ ತೆರೆಯಲು



ಸಾಧ್ಯವಾಗುವಂತಿತ್ತು. ಮಿ. ಆದವ್ಸ್ ಒಳ್ಳೇ ಹೆಮ್ಮೆಯಿಂದ ಬೀಗುತ್ತ ತಿಜೋರಿಯ ಕಾರ್ಯ ವಿಧಾನವನ್ನು ಮಿ. ಸ್ಪೆನ್ಸರ್‌ಗೆ ವಿವರಿಸಿದರು. ಸ್ಪೆನ್ಸರ್ ಸೌಜನ್ಯದಿಂದ ಅದನ್ನು ಕೇಳುತ್ತಿದ್ದ ನಾದರೂ ಅಂತಹ ಕುತೂಹಲವನ್ನೇನೂ ತೋರಲಿಲ್ಲ. ಇಬ್ಬರು ಚಿಕ್ಕ ಮಕ್ಕಳು, ಮೇ ಹಾಗೂ ಅಗಾಥಾ, ಹೊಳೆಯುತ್ತಿದ್ದ ತಿಜೋರಿಯ ಹಿಡಿಕೆಗಳು, ತಮಾಷೆಯಾಗಿ ಕಾಣುತ್ತಿದ್ದ ಗಡಿಯಾರ ಹಾಗೂ ಗುಂಡಿಗಳನ್ನು ನೋಡು ವುದರಲ್ಲಿ ತುಂಬ ಖುಷಿ ಕಂಡರು.

ಇವರೆಲ್ಲ ಹೀಗೆ ಕಾರ್ಯನಿರತರಾಗಿದ್ದಾಗ ಬೆನ್ ಪ್ರೈಸ್ ನಿಧಾನವಾಗಿ ಬ್ಯಾಂಕಿನ ಒಳ ಬಂದು ತಮ್ಮ ಮೊಳಕೈಯೂರಿ ಒರಗಿ ನಿಂತು ಲೋಕಾಭಿರಾಮವಾಗಿ ಒಳಗೆ ನೋಡುತ್ತ ನಿಂತರು. ಬ್ಯಾಂಕ್ ನೌಕರನೊಬ್ಬನ ಪ್ರಶ್ನೆಗೆ ತಮಗೇನೂ ಆಗಬೇಕಾಗಿಲ್ಲವೆಂದೂ, ತಮಗೆ ಗೊತ್ತಿರುವವರೊಬ್ಬರಿಗಾಗಿ ಕಾಯುತ್ತಿರುವು ದಾಗಿಯೂ ಹೇಳಿದರು.

ಇದ್ದಕ್ಕಿದ್ದಂತೆ ಹೆಂಗಸರ ಕಡೆಯಿಂದ ಚೀರಾಟ ಕೇಳಿಸಿತು. ಗಡಿಬಿಡಿಯಾಯಿತು. ದೊಡ್ಡವರು ನೋಡದಿರುವಾಗ ಒಂಬತ್ತು ವರ್ಷದ ಹುಡುಗಿ ಮೇ, ಹುಡುಗಾಟಿಕೆಯಿಂದ ಅಗಾಥಾಳನ್ನು ತಿಜೋರಿಯೊಳಗೆ ಕಳಿಸಿ ಬಾಗಿಲು ಹಾಕಿಬಿಟ್ಟಿ ದ್ದಳು. ನಂತರ ಬೋಲ್ಟುಗಳನ್ನು ಹಾಕಿ ಮಿ. ಆದವ್ಸ್ ಮಾಡುತ್ತಿದ್ದಂತೆ ಕಾಂಬಿನೇಷನ್ ಬೀಗದ ಹಿಡಿಕೆ ತಿರುವಿಬಿಟ್ಟಿದ್ದಳು.

ಮಿ. ಆದವ್ಸ್ ಜಿಗಿದು ಹಾರಿ ಹಿಡಿಕೆಯನ್ನು ಕ್ಷಣಕಾಲ ಜಗ್ಗಿ ನೋಡಿದರು. "ಬಾಗಿಲು ತೆರೆ ಯಲು ಸಾಧ್ಯವಿಲ್ಲ, ಟೈಂ ಲಾಕಿನ ಗಡಿಯಾರಕ್ಕೆ ಕೀಲಿ ಕೊಟ್ಟಿಲ್ಲ. ಕಾಂಬಿನೇಷನ್ ಕೂಡ ಕೂರಿಸಿಲ್ಲ." ಎಂದು ಅವರು ಪೇಚಾಡಿದರು.

ಅಗಾಥಾಳ ತಾಯಿ ಮತ್ತೆ ಚೀರಿದಳು– ಮಿ. ಆಡವ್ಸ್ ನಡುಗುತ್ತಿದ್ದ ತಮ್ಮ ಕೈಗಳನ್ನು ಎತ್ತಿ ಹೇಳಿದರು. "ಎಲ್ಲರೂ ಒಂದು ಗಳಿಗೆ ಸುಮ್ಮನಿರಿ, ಅಗಾಥಾ!" ತಮಗೆ ಸಾಧ್ಯ ವಾದಷ್ಟು ಗಟ್ಟಿಯಾಗಿ ಕೂಗಿ ಹೇಳಿದರು. "ನಾನು ಹೇಳೋದನ್ನು ಕೇಳು ಅಗಾಥಾ!" ನಂತರದ ನೀರವ ಕ್ಷಣದಲ್ಲಿ ತಿಜೋರಿಯೊಳಗಿನ ಗಾಢಾಂಧಕಾರದಲ್ಲಿ ಮಹಾಭೀತಿಯಿಂದ ತತ್ತರಿಸಿ ಮಗು ಚೀರುತ್ತಿದ್ದುದು ಅಸ್ಪಷ್ಟವಾಗಿ ಕೇಳುತ್ತಿತ್ತು.

"ನನ್ನ ಮುದ್ದು ಮಗಳೇ!" ತಾಯಿ ಗೋಳಾಡಿದಳು.

"ಹೆದರಿಕೆಯಿಂದ ಅವಳು ಸತ್ಹೋಗ್ತಾಳೆ! ಬಾಗಿಲು ತೆಗೀರಿ! ಓಹ್, ಬಾಗಿಲು ಒಡೆದು ತೆಗೀರಪ್ಪಾ! ಇಷ್ಟು ಜನ ಗಂಡಸ್ರಿದೀರಿ ಏನಾದ್ರೂ ಮಾಡೋಕಾಗೋಲ್ವಾ?"

"ಆ ಬಾಗಿಲು ತೆರೆಯೋ ಅಂಥವರು ಈ ಆಸುಪಾಸಿನಲ್ಲೆಲ್ಲೂ ಇಲ್ಲ- ಲಿಟ್ಲ್‌ರಾಕಿನಲ್ಲಿರ ಬಹುದು ಅಷ್ಟೆ." ಮಿ. ಆದವ್ಸ್ ನಡುಗು ತ್ತಿದ್ದ ಧ್ವನಿಯಲ್ಲಿ ಹೇಳಿದರು.

"ದೇವರೇ! ಏನ್ಮಾಡೋಣ ಈಗ? ಆ ಮಗು ಹೆಚ್ಚು ಹೊತ್ತು ತಡ್ಕೊಳ್ಳೋ ಕಾಗೋಲ್ಲ. ಒಳಗಡೆ ಸಾಕಷ್ಟು ಗಾಳಿಯಿಲ್ಲ. ಅಲ್ಲದೇ ಭಯದಿಂದ ಎಚ್ಚರ ತಪ್ಪುತ್ತೆ ಅವಳಿಗೆ!"

ಅಗಾಥಾಳ ತಾಯಿ ಹುಚ್ಚಿಯಂತೆ ತಿಜೋ ರಿಯ ಬಾಗಿಲನ್ನು ಕೈಗಳಿಂದ ಬಡಿಯುತ್ತಿದ್ದಳು. ಯಾರೋ ಒಬ್ಬರು ಡೈನಮೈಟ್ ಹಾಕಬಹು ದೆಂದು ಸೂಚಿಸಿದರು. ಅನಾಬೆಲ್ ಜಿಮ್ಮಿಯ ಕಡೆ ತಿರುಗಿದಳು. ಅವಳ ದೊಡ್ಡ ಕಣ್ಣುಗಳು ತುಂಬ ಹೆದರಿದಂತಿದ್ದರೂ ನಿರಾಶೆ ತೋರುತ್ತಿರ ಲಿಲ್ಲ. ಒಬ್ಬ ಸ್ತ್ರೀ ತಾನು ಆರಾಧಿಸುವ ಪುರುಷ ನಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದೇ ಅಂದುಕೊಳ್ಳುತ್ತಾಳೆ.

"ನೀನೇನಾದ್ರೂ ಮಾಡಲಾರೆಯಾ ರಾಲ್ಫ್? ಪ್ರಯತ್ನ, ಪ್ರಯತ್ನಾನಾದ್ರೂ ಮಾಡ್ಬಹು ದಲ್ವಾ?"

ಅವನು ಅವಳ ಕಡೆ, ತುಟಿಗಳಲ್ಲಿ, ಚುರು ಕಾದ ಕಣ್ಣುಗಳಲ್ಲಿ, ವಿಶಿಷ್ಟವಾದ ಕಿರುನಗೆ

ಬೀರುತ್ತ ನೋಡಿದ.

"ಅನಾಬೆಲ್, ನೀನು ಸಿಕ್ಕಿಸಿಕೊಂಡಿರೋ ಆ ಗುಲಾಬಿ ಹೂ ನನಗೆ ಕೊಡು, ಕೊಡ್ತಿಯಾ?" ಎಂದು ಕೇಳಿದ ಜಿಮ್ಮಿ.

ಅವನು ಹಾಗೇ ಹೇಳಿದ, ತಾನು ಸರಿಯಾಗಿ ಕೇಳಿದೆ ಎಂದು ನಂಬುಗೆಯೇ ಬಾರದಿದ್ದರೂ, ಅವಳು ತನ್ನ ಡ್ರೆಸ್ಸಿನ ಎದೆ ಭಾಗದಲ್ಲಿ ಧರಿಸಿದ್ದ ಗುಲಾಬಿ ಮೊಗ್ಗನ್ನು ತೆಗೆದು ಅವನ ಕೈಗಳಲ್ಲಿ ಇಟ್ಟಳು.

ಜಿಮ್ಮಿ ಅದನ್ನು ತನ್ನ ಒಳಕೋಟಿನ ಮೇಲು ಜೇಬಿಗೆ ಹಾಕಿಕೊಂಡ! ತನ್ನ ಕೋಟು ಕಳಚಿ ಒಗೆದ. ಅಂಗಿಯ ತೋಳುಗಳನ್ನು ಮೇಲೆ ಮಡಚಿದ. ಇಷ್ಟು ಮಾಡಿದೊಡನೆಯೇ ರಾಲ್ಫ್ ಡಿಸ್ಪೆನ್ಸರ್ ತೀರಿ ಹೋದ. ಜಿಮ್ಮಿ ವಾಲೆಂಟೀನ್ ಅವನ ಜಾಗದಲ್ಲಿ ಬಂದ.

"ಎಲ್ಲರೂ ಬಾಗಿಲಿನಿಂದ ದೂರ ಹೋಗಿ, ಎಲ್ಲರೂ," ಅವನು ಆಜ್ಞೆ ಮಾಡಿದ ಚುಟುಕಾಗಿ.

ಅವನು ತನ್ನ ಸೂಟ್‌ಕೇಸನ್ನು ಮೇಜಿನ ಮೇಲಿಟ್ಟ. ಅದರ ಬಾಗಿಲು ತೆರೆದು ಹರಡಿದ. ಆ ಕ್ಷಣದಿಂದ ಅಲ್ಲಿ ಬೇರೆ ಜನರಿರುವುದರ ಪರಿವೆಯೇ ಇಲ್ಲದಂತೆ ಕಂಡು ಬಂದ, ಕೆಲಸ ಮಾಡುತ್ತಿದ್ದಾಗಲೆಲ್ಲ ತನ್ನಷ್ಟಕ್ಕೆ ಸಣ್ಣದಾಗಿ ಶಿಳ್ಳೆ ಹೊಡೆಯುತ್ತ, ಹೊಳೆಯುತ್ತಿದ್ದ ವಿಚಿತ್ರವಾದ ಸಲಕರಣೆಗಳನ್ನು ಸರಸರನೆ ಒಂದು ಕ್ರಮದಲ್ಲಿ ಇಡುತ್ತ ಬಂದ. ಉಳಿದವರೆಲ್ಲ ಮಂತ್ರಮುಗ್ಧರಂತೆ ಗಾಢ ಮೌನದಲ್ಲಿ ಅಲುಗಾಡಲೂ ಆಗದೆ ಅವನನ್ನೇ ನೋಡುತ್ತಿದ್ದರು.

ಒಂದೇ ನಿಮಿಷದಲ್ಲಿ ಜಿಮ್ಮಿಯ ಪ್ರೀತಿಯ ಬೈರಿಗೆ ಉಕ್ಕಿನ ಬಾಗಿಲಿನೊಳಗೆ ಮೆತ್ತಗೆ ಇಳಿಯುತ್ತಿತ್ತು. ಹತ್ತು ನಿಮಿಷಗಳಲ್ಲಿ — ತಿಜೋರಿ ಭೇದನದ ತನ್ನ ಹಿಂದಿನ ಎಲ್ಲ ದಾಖಲೆಗಳನ್ನು ಮುರಿದು—ಅವನು ಬೋಲ್ಟುಗಳನ್ನು ಹಿಂದೊಗೆದು ಬಾಗಿಲು ತೆರೆದು ಬಿಟ್ಟ.

### ಕಾಲಾಂತಕ

ಎಲಾ ಅಗಸ !
ಊರಿನ ಜನರ ಬಟ್ಟೆ ತೊಳೆದು
ಉಳಿದ ಕೊಳೆಯನ್ನು
ರಘುರಾಮನ ಸಂಸಾರದಲ್ಲಿ
ಹಿಂಡಿದೆಯಾ ?

-ಯಶವಂತ ಸರದೇಶಪಾಂಡೆ

ಅರೆಜೀವಾವಸ್ಥೆಯಲ್ಲಿದ್ದರೂ ಸುರಕ್ಷಿತಳಾಗಿದ್ದ ಅಗಾಥಾ ತಾಯಿಯ ತೋಳ್ತೆಕ್ಕೆ ಸೇರಿದಳು.

ಜಿಮ್ಮಿ ವಾಲೆಂಟೀನ್ ತನ್ನ ಕೋಟು ಹಾಕಿಕೊಂಡ. ಆ ಕೊಠಡಿಯ ಹೊರ ನಡೆದು ಮುಂಬಾಗಿಲ ಕಡೆ ನಡೆದ. ನಡೆಯುತ್ತಿದ್ದಂತೆ ತನಗೆ ಒಂದು ಕಾಲದಲ್ಲಿ ಪರಿಚಿತವಾಗಿದ್ದ ಧ್ವನಿಯೊಂದು ದೂರದಿಂದ "ರಾಲ್ಫ್!" ಎಂದು ಕರೆದಂತೆ ಅವನಿಗೆ ಭಾಸವಾಯಿತು. ಆದರೆ ಅವನು ಹಿಂಜರಿಯಲಿಲ್ಲ.

ಬಾಗಿಲಿನಲ್ಲಿ ಒಬ್ಬ ಧಡೂತಿ ಆಸಾಮಿ ಸುಮಾರಾಗಿ ಅವನ ದಾರಿಗೆ ಅಡ್ಡವಾಗಿಯೇ ನಿಂತಿದ್ದರು.

"ಹಲೋ, ಬೆನ್!" ಇನ್ನೂ ಒಂದು ಥರಾ ಮುಗುಳ್ನಗುತ್ತ ಜಿಮ್ಮಿ ಹೇಳಿದ. "ಅಂತೂ ಕೊನೆಗೂ ಹಿಡಿದು ಬಿಟ್ಟೆ ಅಲ್ಲ? ಸರಿ, ಹೋಗೋಣ. ನನಗೆ ಈಗ ಅಂತಹ ವ್ಯತ್ಯಾಸ ಕಾಣೋಲ್ಲ."

ಆಗ ಬೆನ್ ಪ್ರೈಸ್ ವಿಚಿತ್ರವೆಂಬಂತೆ ವರ್ತಿಸಿ-ದರು. "ನೀವು ತಪ್ಪು ತಿಳ್ಕೊಂಡಿದೀರೀಂತ ಕಾಣುತ್ತೆ ಮಿ. ಸ್ಪೆನ್ಸರ್," ಅವರೆಂದರು, "ನಾನು ನಿಮ್ಮನ್ನು ಗುರುತಿಸಿದೆನೆಂದು ನಂಬಬೇಡಿ. ನಿಮ್ಮ ಜೋಡಿ ನಿಮಗಾಗಿ ಕಾಯ್ತಾ ಇದಾರೆ ಅಲ್ವಾ?"

ಇಷ್ಟು ಹೇಳಿದವರೇ ಬೆನ್ ಪ್ರೈಸ್ ತಿರುಗಿದರು— ರಸ್ತೆಗಿಳಿದು ನಡೆದೇಬಿಟ್ಟರು. 

೮೭

## ಶ್ರೀ ಮತ್ತು ಲಕ್ಷ್ಮೀ

ಹಿಂದುಗಳು ಸಕಲ ಕಾರ್ಯಗಳನ್ನು ಶ್ರೀಕಾರದಿಂದ ಆರಂಭಿಸುತ್ತಾರೆ. ಶ್ರೀರಾಮ, ಶ್ರೀಕೃಷ್ಣ ಇತ್ಯಾದಿಯಾಗಿ ಭಕ್ತಿ ಗೌರವ ಸೂಚಿಸುವುದರೊಡನೆ ಶುಭ ಸೂಚಕವಾಗಿಯೂ ಶ್ರೀಕಾರ ಪ್ರಯೋಗ ನಿತ್ಯಜೀವನದಲ್ಲಿ ಆಗುತ್ತದೆ. ಶ್ರೀ ಪದ ಋಗ್‌ವೇದದಷ್ಟು ಹಳೆಯದು. ಗ್ರೀಕ್, ಲ್ಯಾಟಿನ್, ಲಿಥುವೇನಿಯನ್, ಜರ್ಮನ್ ಮೊದಲಾದ ಭಾಷೆಗಳಲ್ಲಿ ಅದಕ್ಕೆ ಸಂವಾದಿ ಪದಗಳಿವೆ. ಮೂಲತಃ ಆನು, ಆನಿಸು, ಅವಲಂಬಿಸು, ಹೊದ್ದು, ಹೊಂದು ಇತ್ಯಾದಿ ಅರ್ಥಗಳು ಶ್ರೀ ಧಾತುವಿಗೆ ಇದ್ದು ಪ್ರಕಾಶಿಸು, ಬೆಳಗು ಎಂಬರ್ಥವನ್ನೂ ಅದು ಪಡೆಯಿತು. ವೇದಗಳಲ್ಲಿ ಶ್ರೀ-ರ, ಅವೆಸ್ತನ್ (ಪಾರಸಿಗಳ ವೇದ) ಭಾಷೆಯಲ್ಲಿ ಸ್ರೀ-ರ ಎಂಬ ಪದ ಸಂಪತ್ತುಳ್ಳ ಎಂಬರ್ಥದಲ್ಲಿ ಪ್ರಯೋಗವಾಗಿದ್ದು ಕಾಣುತ್ತದೆ. ಋಗ್ವೇದದಲ್ಲಿ ಒಳ್ಳೇ ಲಕ್ಷಣವುಳ್ಳ ಆಡುಗಳಿಗೆ "ಶ್ರೀಯಃ ಪತ್ನ್ಯಾಃ" ಎಂಬ ಪ್ರೀತಿಯ ವರ್ಣನೆ ಸಿಗುತ್ತದೆ.

ಆಶ್ರಯ ಕೊಡತಕ್ಕದ್ದು ಸಂಪನ್ನವಿರಬೇಕು, ಸಂಪನ್ನವಿರುವುದು ಸುಂದರವಿರಬೇಕು, ಪ್ರಕಾಶಮಾನವಿರಬೇಕು. ಪ್ರಕಾಶಮಾನವಾದದ್ದು ಶುಭಕರವಿರಬೇಕು (ಶುಭವೆಂದರೂ ಬೆಳಗ ತಕ್ಕದ್ದೇ). ಹೀಗೆ ಈ ಶಬ್ದ ಒಳ್ಳೇ ಅರ್ಥಗಳನ್ನು ಹೇಗೆ ಬೆಳಸುತ್ತ ಹೋಯಿತೆಂದರೆ ವೈದಿಕ ಆಶೀರ್ವಾದ ಮಂತ್ರಗಳು "ಶ್ರಿಯೇಜಾತಃ ಶ್ರಿಯ ಆನಿರಿಯಾಯ ಶ್ರಿಯಂ ವಯೋ..." ಎಂದಿತ್ಯಾದಿಯಾಗಿ ಶ್ರೀಕಾರಮಯವಾಗಿವೆ. ಕೊನೆಗೆ ಶ್ರೀಯೇ ಒಬ್ಬ ದೇವತೆಯಾಗಿ ವಿಷ್ಣು ಪತ್ನಿಯೂ ಆದಳು. ಋಗ್ವೇದದ ಖಿಲಭಾಗದಲ್ಲಿ ಶ್ರೀ ಸೂಕ್ತ ಎಂಬ ಒಂದು ದೀರ್ಘ ಸೂಕ್ತವೇ ಇದೆ. ಅದರಲ್ಲಿ "ಶ್ರಿಯಂ ದೇವೀಮುಪಹ್ವಯೇ" ಎಂದು ಶ್ರೀದೇವಿಯನ್ನು ಹತ್ತಿರ ಕರೆಯು-ವುದು ಕಾಣಿಸುತ್ತದೆ. ಈ ದೇವತೆಯನ್ನು ಕಾಮದೇವನ ತಾಯಿಯೆಂದು ಭಾವಿಸಿದ್ದಾಯಿತು. ಕಾಮ ಎಂದರೆ ಬಯಕೆ. ಕಾಮನಿಗೆ ತಾಯಿಯಾದವಳು ನಮ್ಮ ಬಯಕೆಗಳನ್ನು ಪೂರೈಸದೆ ಇದ್ದಾಳೋ? ನಾವು ಹಿರಣ್ಯ(ಚಿನ್ನ)ವನ್ನೂ ಗೋವುಗಳನ್ನೂ ಅಶ್ವಗಳನ್ನೂ ಪುರುಷ(ದಾಸ)ರನ್ನೂ ಅವಳ(ಆಶ್ರಯದ)ಲ್ಲಿ ಹೊಂದುತ್ತೇವೆ.

ವೈದಿಕ ಧರ್ಮದಿಂದ ಈ ಶ್ರೀದೇವಿ ಬೌದ್ಧ ಧರ್ಮಕ್ಕೂ ದಾಟಿದ್ದಾಳೆ. ಶ್ರೀ ಸೂಕ್ತದಲ್ಲಿ "ಶ್ರೀರ್ಮಾದೇವೀರ್ಜುಷತಾಂ" (ಶ್ರೀ ಮಾದೇವಿ ನೆಲಸಲಿ) ಎಂಬ ಮಾತು ಇದೆ. ಈ ಶ್ರೀ ಮಾದೇವಿ ಬೌದ್ಧ ಪ್ರಾಕೃತ ಭಾಷೆಯಲ್ಲಿ ಸಿರಿಮಾ ಆಗಿ ಬೌದ್ಧ ನಾಡುಗಳಲ್ಲೆಲ್ಲ ಪರಿಚಿತಳಾಗಿದ್ದಾಳೆ. ಶ್ರೀಲಂಕೆಯ ಹಿಂದಿನ ಪ್ರಧಾನಿಯ ಹೆಸರೇ ಸಿರಿಮಾ.

ಶುಭಪ್ರದಳಾದ ಅವಳ ಹೆಸರು ಬರೆದೇ ನಾವು ವಿದ್ಯಾರಂಭಮಾಡುತ್ತೇವೆ; ಮನೆಯ ಮುಂದೆ ಅವಳ ಹೆಸರು ಬರೆಯುತ್ತೇವೆ; ದೇವತೆಗಳ ಹೆಸರುಗಳ ಮುಂಚೆ ಶ್ರೀಕಾರ ಸೇರಿಸುತ್ತೇವೆ; ಗೌರವಾರ್ಹ ವ್ಯಕ್ತಿಗಳಿಗೆ ಶ್ರೀಮಾನ್, ಶ್ರೀಮತಿ ಎನ್ನುತ್ತೇವೆ; ಬಂಗಾಲಿಗಳಂತೂ ತಾವೇ ತಮ್ಮ ಹೆಸರು ಬರೆಯುವಾಗ "ಶ್ರೀ ರವೀಂದ್ರ ನಾಥ" ಇತ್ಯಾದಿಯಾಗಿ ಬರೆದುಕೊಳ್ಳುತ್ತಾರೆ.

ಸೌಂದರ್ಯಕ್ಕಿಂತಲೂ ಮಿಗಿಲಾದ ಶೋಭೆ ಇರುವಲ್ಲೆಲ್ಲ ಶ್ರೀಯನ್ನು ನಾವು ಗುರುತಿಸುತ್ತೇವೆ. ಮುಖಶ್ರೀ (ಮೊಗಸಿರಿ), ಕಾವ್ಯಶ್ರೀ, ವನಶ್ರೀ, ಹೃದಯ ಶ್ರೀಮಂತಿಕೆ ಇತ್ಯಾದಿ.

ಮುಖಶ್ರೀ ಆಯಿತು; ಪಾದಕ್ಕೂ ಶ್ರೀ ತಗಲುತ್ತದೆ. ಸ್ವಾಮಿ-ಸಂನ್ಯಾಸಿಗಳನ್ನು **ಶ್ರೀಪಾದಂಗಳು** ಎನ್ನುತ್ತೇವೆ. ಸಂಕ್ಷೇಪದಲ್ಲಿ ಸ್ವಾಮಿಗಳು ಶ್ರೀಗಳಾಗುತ್ತಾರೆ. ಲಕ್ಷ್ಮಿಯನ್ನು ಎದೆಯಲ್ಲೇ ತಳೆದ ವಿಷ್ಣು ಶ್ರೀನಿವಾಸನಾಗುತ್ತಾನೆ. ಶಿವನು ಲಕ್ಷ್ಮೀ ವಲ್ಲಭನಲ್ಲದಿದದ್ದರೂ ಶ್ರೀಕಂಠ. ಗಂಧದ ಮರ ಶ್ರೀಖಂಡ, ಬಿಲ್ವ ಶ್ರೀಫಲ. ಅರಸರು ಕಳಿಸುವ ಆಜ್ಞಾಪತ್ರ **ಶ್ರೀಮುಖ**; ಸ್ವಾಮಿಗಳ ರಾಯಸವೂ ಶ್ರೀಮುಖವೇ— ಯಾಕಂದರೆ ಅದು ಮೇಲೆ ಅಥವಾ ಪ್ರಾರಂಭದಲ್ಲಿ ಶ್ರೀ ಎಂಬಕ್ಷರವನ್ನು ಹೊತ್ತಿರುತ್ತದೆ. ಅದು ಹೋಗಲಿ, ಅಪರಾಧಿಗೆ ತಲೆದಂಡ ವಿಧಿಸಿದಾಗ ಉಪಯೋಗಿಸುವ ಖಡ್ಗ ಕೂಡ ಶ್ರೀಗರ್ಭ ಎಂದು ಮಹಾಭಾರತ ಹೇಳುತ್ತದೆ. ಶ್ರೀಗರ್ಭ ಎಂದರೆ ಮಂಗಲವನ್ನು ಅಂತರ್ಯದಲ್ಲಿ ಹೊಂದಿದ್ದು. ಅಮಂಗಲವನ್ನು ಮಂಗಲ ವೆಂದು ಕರೆದು ಅದರ ದುಷ್ಟ ಪ್ರಭಾವವನ್ನು ಕಳೆಯಬಹುದೆಂಬ ಪ್ರಾಚೀನ ನಂಬಿಕೆಗೆ ಇದು ಒಂದು ಉದಾಹರಣೆ.

ದ್ರಾವಿಡ ಭಾಷೆಗಳನ್ನು ಪ್ರವೇಶಿಸುವಾಗ ಶ್ರೀ ತಿರು ಎಂದು ರೂಪಾಂತರ ಹೊಂದಿತು. (ಳ, ಚ, ತ-ಗಳು ಒಂದಕ್ಕೊಂದು ಸಮೀಪದ ಧ್ವನಿಗಳು) ಹೀಗೆ ತಿರುವೆಂಕಟ, ತಿರು ನಾರಾಯಣ, ತಿರುಪತಿ, ತಿರುನೀಲಕಂಠ, ಮಾತ್ರವಲ್ಲ; ತಿರುನಾಳ್ (ಶುಭದಿನ), ತಿರುವಾಯ್ ಮೊಳಿ (ಶುಭ ಮುಖದನುಡಿ) ಇತ್ಯಾದಿಗಳು, ನಾವು ಶ್ರೀ ಎಂದು ವ್ಯಕ್ತಿಗಳ ಹೆಸರುಗಳ ಹಿಂದೆ ಸೇರಿಸುವಂತೆ ತಮಿಳರು "ತಿರು" ವನ್ನು ಸೇರಿಸಿ ತಿರು ರಾಮಚಂದ್ರನ್ ಎನ್ನುತ್ತಾರೆ. ಬಹುಶಃ ಶ್ರೀಕಾರದಷ್ಟು ವ್ಯಾಪ್ತಿಯುಳ್ಳ ಒಂದು ಬೇರೆ ಶಬ್ದ ಇಲ್ಲವೇನೋ— ಹಿಂದೂ ಅಂತರಂಗದಲ್ಲಿ ಇಷ್ಟುಮಟ್ಟಿಗೆ ನಟ್ಟದ್ದು.

ಶ್ರೀಯೆಂದರೂ ಲಕ್ಷ್ಮಿ ಎಂದರೂ ಅವಳೇ ಎಂದು ಭಾವಿಸುತ್ತಿದ್ದೇವೆ. ಭಾಷೆಯಲ್ಲಿ ಲಕ್ಷ್ಮಿಗೆ ಶ್ರೀಯಂಥ ವೈವಿಧ್ಯವಿಲ್ಲವಾದರೂ ಅವಳ ಇತಿಹಾಸ ಕಡಿಮೆ ಕುತೂಹಲಕರವಲ್ಲ. ಲಕ್ಷ್ಮೀ ಶಬ್ದಕ್ಕೆ ಮೂಲ ಲಕ್ಷ್ ಧಾತು. ಲಕ್ಷ್ ಧಾತುವೂ ಲಕ್ಷ್ಮಿಯೂ ಋಗ್ವೇದದಷ್ಟು ಪುರಾತನ. "ಲಕ್ಷ್" ಎಂದರೆ ಗುರುತಿಸು, ಕಾಣು, ಗುರಿಯಿಡು, "ಲಕ್ಷ್"ಎಂದರೆ ತಗಲಿದ್ದು, ಗುರುತು, ಕುರುಹು, ಗುರಿ ಲಕ್ಷಣ ಎಂದರೆ ಯಾವುದರಿಂದ ಗುರುತು ಹಿಡಿಯಬಹುದೋ ಅದು. ಈ ಗುರುತನ್ನು ನೋಡಿ ಇದು ನಮಗೆ ಹಿತತರುವ ಪದಾರ್ಥವೋ ಅಹಿತಕರವೋ ಎಂದು ತಿಳಿದುಕೊಳ್ಳಬಹುದು. ಆದ್ದರಿಂದ ಲಕ್ಷಣ ವೆಂದರೆ ಒಳ್ಳೇ ಕುರುಹೂ ಹೌದು. ಒಳ್ಳೇ ಕುರುಹುಗಳದ್ದು ಸುಂದರ. ಆದ್ದರಿಂದ ಲಕ್ಷಣವಾದ ಹುಡುಗಿ. ಹಾಗಿದ್ದದ್ದು ಲಕ್ಷಣ "ಸರ್ವ ಲಕ್ಷಣ ಲಕ್ಷಣ್ಯೇ ಶಿವೇ" ಎಂದು ಗೌರೀದೇವಿಗೆ ಪ್ರಾರ್ಥನೆ. ಶುಭಲಕ್ಷಣವುಳ್ಳವನು ಲಕ್ಷ್ಮಣ. ಶುಭಲಕ್ಷಣಗಳುಳ್ಳವಳು ಲಕ್ಷ್ಮಿ. ವೇದಗಳಲ್ಲಿ ಶುಭವನ್ನು, ಸೌಭಾಗ್ಯವನ್ನು, ಸಂಪತ್ತನ್ನು ತರುವ ಲಕ್ಷ್ಮಿ ಇರುವಂತೆ ಅಶುಭ ಕಾರಿಣಿ ಲಕ್ಷ್ಮಿಯೂ ಒಬ್ಬಳಿದ್ದಾಳೆ. ಅವಳು ಪುಣ್ಯಲಕ್ಷ್ಮಿ. ಇವಳು ಪಾಪಲಕ್ಷ್ಮಿ. ನಿಜ ಕೇಳಿದರೆ ಪಾಪ ಲಕ್ಷ್ಮಿಯೇ ಹಿರಿಯಳು. ಜ್ಯೇಷ್ಠಾಲಕ್ಷ್ಮಿಯೆಂದು ಈಗಲೂ ಅವಳು ನಮಗೆ ಪರಿಚಿತಳು. ಜ್ಯೇಷ್ಠಾ ಎಂದರೂ ಸಾಕು. "ಅಲಕ್ಷ್ಮೀರ್ಮೇ ನಶ್ಯತಾಂ" (ಅಲಕ್ಷ್ಮಿ ನಾಶವಾಗಲಿ) ಎಂದು ತಂಗೀ ಲಕ್ಷ್ಮಿಯನ್ನು ಶ್ರೀ-ಸೂಕ್ತ ಪ್ರಾರ್ಥಿಸುತ್ತದೆ. ದೇವಾಸುರರು ಸಮುದ್ರವನ್ನು ಕಡದಾಗ ಅಮೃತ ಕುಂಭದೊಡನೆ ಎದ್ದು ಬಂದ ಲಕ್ಷ್ಮಿ ವಿಷ್ಣುವನ್ನು ವರಿಸಿದಳು. ಸಮುದ್ರದಿಂದ ಹುಟ್ಟಿದವಳು ಲಕ್ಷ್ಮಿ; ಆದ್ದರಿಂದ ಸಮುದ್ರದಲ್ಲಿ ಹುಟ್ಟಿದ ಮುತ್ತು ಲಕ್ಷ್ಮೀದ್ರವ್ಯ.

ಬಹುಶಃ ಬಾಣ ಹೊಡೆಯುವ ಸಾಧನೆಗಾಗಿ ಹಾಕಿಕೊಂಡ ಗುರುತು ಅಥವಾ ಚುಕ್ಕಿ ಯಾಗಿದ್ದದ್ದು ಲಕ್ಷ ಅಥವಾ ಲಕ್ಷ್ಮ. ಈ ಮೂಲದಿಂದ ಹೊರಟ ಶಬ್ದವೊಂದು ದೇವತಾ ಪಟ್ಟಕ್ಕೆ ಏರಿತು. ಒಂದು ಕುರುಹು, ಚುಕ್ಕಿ ಶುಭಾ ಶುಭಕರವಾಗಿರಬಹುದೆಂಬ ನಮ್ಮ ಪೂರ್ವಜರ ವಿಶ್ವಾಸ ವಿಶ್ವರೂಪತಾಳಿದ ಉದಾಹರಣೆ ಲಕ್ಷ್ಮಿ.

**–ಸಾ. ವೆಂ.**

# ಕೆಲವು ವೈಜ್ಞಾನಿಕ ತಥ್ಯಗಳು

ಎಂ ಆರ್. ನವರತ್ನ

❁ ಸಾಧಾರಣವಾಗಿ ಸರಾಸರಿ ಒಬ್ಬ ಮನುಷ್ಯನ ಶರೀರದಲ್ಲಿ ಅವನ ತೂಕದ ಸೇಕಡಾ ೬೦ ರಷ್ಟು ಭಾಗ ನೀರಿನದಾಗಿರುತ್ತದೆ. ಉದಾ: ೧೪೫ ಪೌಂಡ್ (೬೬ ಕಿಲೋಗ್ರಾಮ್) ತೂಕದ ಮನುಷ್ಯನಲ್ಲಿ ೯ ಗ್ಯಾಲನ್ನಿನಷ್ಟು (೪೦ ಲೀಟರು) ನೀರು ಇರುತ್ತದೆ.

❁ ಪ್ರೋಟೀನುಗಳು ಅಮೈನೋ ಆ್ಯಸಿಡ್ಡಿನ ಸಂಯೋಜನೆಯಿಂದಾಗಿ ತಯಾರಾಗುತ್ತವೆ. ಮನುಷ್ಯನಲ್ಲಿರುವ ೨೩ ವಿವಿಧ ಅಮೈನೋ ಆ್ಯಸಿಡ್‌ಗಳಲ್ಲಿ ೧೦ನ್ನು ಮಾತ್ರ ಶರೀರದಲ್ಲಿರುವ ಜೀವಕೋಶಗಳು ತಯಾರಿಸುವುದಿಲ್ಲ. ಈ ೧೦ ಅಮೈನೋ ಆ್ಯಸಿಡ್ಡುಗಳನ್ನು ದಿನ ನಿತ್ಯದ ಆಹಾರ ವಸ್ತುಗಳಲ್ಲಿರುವ ಪ್ರೋಟೀನುಗಳಿಂದ ಭರಿಸಿಕೊಳ್ಳಬೇಕಾಗುವುದು.

❁ ಡಿ ಆಕ್ಸಿರೀಬೋಸ್ ನ್ಯೂಕ್ಲಿಯಿಕ್ ಆ್ಯಸಿಡ್(DNA)ನಿಂದ ರಸಾಯನಿಕ ಸಂಜ್ಞೆಯನ್ನು ಪ್ರತಿ ಮಾಡಿದ ನಂತರ ರೈಬೋಸ್ ನ್ಯೂಕ್ಲಿಯಿಕ್ ಆ್ಯಸಿಡ್ಡು (RNA), ಅಮೈನೋ ಆ್ಯಸಿಡ್ಡುಗಳನ್ನು ಸಂಯೋಜಿಸಿ ಪ್ರೋಟೀನನ್ನು ತಯಾರಿಸುತ್ತದೆ.

❁ ಮಾತಾಪಿತರಿಬ್ಬರೂ ನಸುಗಪ್ಪಿನ ಕಣ್ಣುಳ್ಳವರಾಗಿದ್ದರೆ ನಸುಗಪ್ಪಿನ ಕಣ್ಣುಳ್ಳ ಮಕ್ಕಳನ್ನೇ ಪಡೆಯುತ್ತಾರೆನ್ನುವುದು ಸುಳ್ಳು. ದಂಪತಿಗಳಿಬ್ಬರೂ ರಿಸೆಸಿವ್ ನೀಲಿ ಕಣ್ಣುಳ್ಳವರಾಗಿದ್ದರೆ ಅವರಲ್ಲಿ ಸಹ ೪ರಲ್ಲಿ ೧ ನೀಲಿ ಕಣ್ಣುಳ್ಳ ಮಗು ಜನಿಸುವ ಸಂಭವವಿದೆ.

❁ XO ಕ್ರೊಮೋಸೋಂ (ವರ್ಣರೇಷೆ) ಇರುವ ಸ್ತ್ರೀಯರಲ್ಲಿ ತೋರಿಕೆಗೆ ಹೊರಭಾಗದ ಸ್ತ್ರೀ ಜನನೇಂದ್ರಿಯಗಳಿದ್ದರೂ ಶರೀರಾಂತರ್ಗತ ಜನನೇಂದ್ರಿಯಗಳಿರುವುದಿಲ್ಲ. ಈ ಸ್ಥಿತಿಗೆ ಟರ್ನರನ ಸಿಂಡ್ರೋಮ್ ಎಂದು ಕರೆಯುಲಾಗಿದೆ. XXY ಕ್ರೊಮೋಸೋಂ ಅಂದರೆ ಕ್ಲೈನ್‌ಫೆಲ್ಟರನ ಸಿಂಡ್ರೋಮ್ ಇರುವ ಪುರುಷರು ಶರೀರದ ಒಳಭಾಗದಲ್ಲಿಯ ಪುರುಷ ಜನನೇಂದ್ರಿಯದ ಅಪೂರ್ಣ ಬೆಳವಣಿಗೆಯಿಂದಾಗಿ ನಪುಂಸಕರಾಗಿರುವರು. ಇವರ ಜನನೇಂದ್ರಿಯಗಳ ಕುಂಠಿತ ಬೆಳವಣಿಗೆಯಿಂದಾಗಿ ಕೆಲ ಸ್ತ್ರೀಸಹಜ ಲೈಂಗಿಕತೆಗಳೂ ತೋರಿಬರುವ ಸಾಧ್ಯತೆಯೂ ಇದೆ.

❁ ಲೈಂಗಿಕ ಜೀವಕೋಶವು ೨೩ ಜೊತೆ ಕ್ರೊಮೋಸೋಮಿನಿಂದಾಗಿರುವದಿಲ್ಲ, ಆದರೆ ಆ ಜೀವಕೋಶಗಳು ಮಿಯೊಸಿಸ್ ಎಂಬ ವಿಭಜನೆಯಿಂದ ಉಂಟಾದ ೨೩ ಒಂಟಿ ಕ್ರೊಮೋಸೋಮುಗಳನ್ನು ಹೊಂದಿರುತ್ತವೆ.

❁ ಸ್ತ್ರೀಯ ಶರೀರವನ್ನು ಪ್ರವೇಶಿಸಿದ ನಂತರ ಪುರುಷನ ವೀರ್ಯಾಣುಗಳು ೨೪ ರಿಂದ ೪೮ ಗಂಟೆಗಳ ವರೆಗೆ ಸಕ್ರಿಯವಾಗಿರುತ್ತವೆ. ಈ ಸ್ಥಿತಿಯಲ್ಲಿಯೇ ಗರ್ಭಧಾರಣೆಯಾಗುವ ಸಂಭವ ಇರುತ್ತದೆ.

❁ ಹೆಚ್ಚಿನ ಪ್ರಮಾಣದಲ್ಲಿ ಗಂಡು ಶಿಶುವಾಗುವ ಸಂದರ್ಭಗಳಿದ್ದರೂ ಗರ್ಭಕೋಶದಲ್ಲಿ ಅವು ಜೀವಿಸಲಿಕ್ಕೆ ಶಕ್ಯವಾಗದ ಸಂದರ್ಭಗಳೇ ಹೆಚ್ಚಿಗಿದ್ದರಿಂದ ಹೆಣ್ಣು ಹಾಗು ಗಂಡು ಶಿಶು

ಗಳ ಜನನ ಪ್ರಮಾಣವು ಒಂದೇ ಪ್ರಮಾಣದಲ್ಲಿ ಇರುತ್ತದೆ.

❁ ಮನುಷ್ಯನು ಜನನ ಕಾಲದಲ್ಲಿ ಶಿಶುವಾಗಿದ್ದಾಗ ೨೦೦ ಅಸ್ಥಿಗಳನ್ನು ಹೊಂದಿದ್ದು ಕ್ರಮೇಣ ಅವುಗಳಲ್ಲಿ ಕೆಲವೊಂದು ಬೆಸುಗೆ ಹೊಂದಿ ಪ್ರಬುದ್ಧನಾದ ಮಾನವನಲ್ಲಿ ೨೦೬ ಅಸ್ಥಿಗಳಿರುವವು.

❁ ವಿಶಿಷ್ಟ ಪ್ರಕಾರದ ಅಸ್ಥಿಯಾದ ತೊಡೆಯೆಲವು ಕ್ಲಿಷ್ಟವಾದ ರಚನೆಗಳೊಂದಿಗೆ ಸೃಜಿಸಲ್ಪಟ್ಟಿದೆ. ಅಸ್ಥಿಮಜ್ಜೆಯು ಅಸ್ಥಿತಂತುಗಳು ಕ್ಯಾಲ್ಸಿಯಂ ಹಾಗೂ ಇತರ ಲವಣಾಂಶಗಳೊಂದಿಗೆ ಕಲೆತು ಬಹಳ ಗಟ್ಟಿಮುಟ್ಟಾಗಿರುವುದು. ನಡೆಯುವಾಗ ಪ್ರತಿ ಚದರ ಸೆಂಟಿಮೀಟರಿಗೆ ೮೫ ಕಿಲೋಗ್ರಾಮಿನಷ್ಟು ಭಾರವನ್ನು ತಡೆದುಕೊಳ್ಳುವ ಸಾಮರ್ಥ್ಯ ಕೂಡ ಈ ಮೂಳೆಗಳಿಗಿರುತ್ತವೆ.

❁ ಕೆರಾಟಿನ್ ಎಂಬ ವಸ್ತುವು ಚರ್ಮದಲ್ಲಿರುವುದರಿಂದ ನೀರು ಚರ್ಮದ ಮೂಲಕ ಒಳಹೋಗಲಾರದು. ಚರ್ಮದ ಮೇಲೆ ನೀರು ಬಹಳ ವೇಳೆಯವರೆಗಿದ್ದರೆ ಕೆರಾಟಿನ್ನಿನಿಂದಾಗಿರುವ ತಡೆಯನ್ನು ಭೇದಿಸಿ ಚರ್ಮವು ಸುಕ್ಕುಗಟ್ಟುತ್ತದೆ.

❁ ಮೇಲಾನಿನ್ ಎಂಬ ವರ್ಣ ದ್ರವ್ಯವು ಮೆಲಾನೋಸೈಟ್ಸ್ ಎಂಬ ಜೀವಕೋಶಗಳಿಂದ ತಯಾರಿಸಲ್ಪಟ್ಟಿರುತ್ತದೆ. ಕರಿಯ ಹಾಗೂ ಬಿಳಿಯ ಬಣ್ಣದ ಜನರಲ್ಲಿ ಮೆಲಾನೋಸೈಟ್ಸ್‌ಗಳ ಸಂಖ್ಯೆ ಅಷ್ಟೇ ಇದ್ದರೂ ಅವುಗಳನ್ನು ರಚಿಸುವ ಕರ್ತೃತ್ವ ಶಕ್ತಿ ಬೇರೆ ಬೇರೆಯಾಗಿರುತ್ತದೆ.

❁ ಮನುಷ್ಯನ ತಲೆಗೂದಲುಗಳ ಸರಾಸರಿ ಸಂಖ್ಯೆ ಸುಮಾರು ಒಂದು ಲಕ್ಷ ಇರಬಹುದು. ಪ್ರತಿಯೊಂದು ತಲೆಗೂದಲು ಸುಮಾರ ೩ ವರುಷಗಳ ಕಾಲ ಬೆಳೆಯುತ್ತದೆ. ಬೆಳೆಯುವ ಪ್ರಮಾಣ ೩ ದಿನಗಳಲ್ಲಿ ಒಂದು ಮಿಲಿಮೀಟರಿನಷ್ಟು, ಅಥವಾ ೧ ವರ್ಷಕ್ಕೆ ಸುಮಾರು ೫ ಇಂಚುಗಳಷ್ಟು.

❁ ಹೃದಯದ ಬಡಿತದಿಂದಾಗಿ ದಿನವಿಡೀ ಆಗುವ ರಕ್ತ ಪರಿಚಲನೆಯ ಪ್ರಮಾಣ ೯೦೦೦ ಲೀಟರಿನಷ್ಟು ಅಂದರೆ ೨೦೦೦ ಗ್ಯಾಲನ್ನುಗಳಷ್ಟು.

❁ ಸಾಮಾನ್ಯವಾದ ಸದೃಢ ಹೃದಯಗಳಲ್ಲಿ ಮರ್‌ಮರ್ ಶಬ್ದ ಕೇಳಿಬರುತ್ತದೆ. ಇದು ಯಾವುದೇ ಅಸಾಧಾರಣ ಸ್ಥಿತಿಯಿಂದಲ್ಲ. ಕೆಲವು ಬಾರಿ ಇವುಗಳಿಗೆ ಮುಗ್ಧ (ನಿರಪಾಯಕರ) ಮರ್ ಮರ್ ಅನ್ನುತ್ತಾರೆ.

❁ ಸುಮಾರಾಗಿ ಕ್ರೀಡಾಪಟುಗಳಲ್ಲಿ ಸ್ವಸ್ಥ ಹೃದಯ ಸ್ಪಂದನೆಯ ಪ್ರಮಾಣ ಒಂದು ನಿಮಿಷದಲ್ಲಿ ೪೫ ಅದಕ್ಕೂ ಕಡಿಮೆಯಿದ್ದು ಇದು ಅವನ ಶರೀರದ ಸುಸ್ಥಿತಿಯನ್ನವಲಂಬಿಸಿದೆ.

❁ ೧೯೬೩ ರಿಂದ ೧೯೭೩ರ ವರೆಗೆ ಗಣನೆ ಮಾಡಲಾದ ೩೫-೭೫ ವರುಷಗಳ ವಯಸ್ಸಿನ ಅಮೇರಿಕನ್ ಜನರಲ್ಲಿ ಕೊರೊನರಿ ಹೃದಯಾಘಾತದಿಂದ ಮರಣಹೊಂದಿದವರ ಸಂಖ್ಯೆಯಲ್ಲಿ ೧೦೦ಕ್ಕೆ ೨೫ ರಷ್ಟು ಕಡಿಮೆಯಾಗಿದೆ. ಇದಕ್ಕೆ ಧೂಮಪಾನ ಕಡಿತ ಹಾಗೂ ಸಂತೃಪ್ತ ಜೈವಿಕ ಕೊಬ್ಬನ್ನು ಮೊದಲಿಗಿಂತ ಕಡಿಮೆಯಾಗಿ ಸೇವಿಸುತ್ತಿರುವುದು ಕಾರಣವಾಗಿದೆ.

❁ ಮನುಷ್ಯನ ಮಿದುಳು ಸಾಮಾನ್ಯವಾಗಿ ೩ ಪೌಂಡು. ಅಂದರೆ ೧.೪ ಕಿಲೋಗ್ರಾಮಿನಷ್ಟಿರುತ್ತದೆ. ಅದೇ ಗೋರಿಲ್ಲಾದಲ್ಲಿರುವ ಮಿದುಳಿನ ಸರಾಸರಿ ತೂಕವು ೧ ಪೌಂಡ್ ಅಂದರೆ ೦.೪೫ ಕಿಲೋಗ್ರಾಮಿನಷ್ಟು.

❁ ಕಣ್ಣುಗಳು ಮುಚ್ಚಿರುವ ಸ್ಥಿತಿಯಲ್ಲಿದ್ದಾಗ ಮಿದುಳಿನಲ್ಲಿ ಆಲ್ಫಾ ತೆರೆಗಳುಂಟಾಗುತ್ತವೆ. ಅನುಭವಿಕ ಯೋಗಿಗಳು ಮಿದುಳಿನ ಈ ಕ್ರಿಯೆಯು ಕಣ್ಣುಗಳು ತೆರೆದಿರುವಾಗಿನ ಅವಸ್ಥೆಯಲ್ಲಿಯೇ ಆಗುವಂತೆ ಮಾಡಬಲ್ಲರು.

❁ ಥೈರಾಯಿಡ್ ಪ್ರಚೋದನ ಹಾರ್ಮೋನು, ಪಿಟ್ಯುಟರಿ ಗ್ರಂಥಿಗಳಿಂದ ಒಸರುತ್ತದೆ. ಈ ಹಾರ್ಮೋನು ಪಿಟ್ಯುಟರಿ ಗ್ರಂಥಿಯೊಳಗಿಂದ ದ್ರವಿಸುತ್ತಿರುವ ೧೦ ಹಾರ್ಮೋನುಗಳಲ್ಲಿ ಒಂದಾಗಿದ್ದು ಗ್ರಂಥಿಯ ಮುಂಭಾಗದಿಂದ ಬರುತ್ತದೆ.

❁ ಪ್ರೊಲಾಕ್ಟಿನ್ ಎಂಬ ಸೇಂದ್ರಿಯ ವಸ್ತುವು ಶರೀರದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತಯಾರಾದಾಗ ಮಹಿಳೆಯರಲ್ಲಿ ಬಂಜೆಯಾಗುವ ಸ್ಥಿತಿ ಒದಗುತ್ತದೆ. ಈ ಹೆಚ್ಚಿನ ಪ್ರೊಲಾಕ್ಟಿನ್

ತಯಾರಾಗುವ ಸ್ಥಿತಿಯನ್ನು ಬದಲಾಯಿಸಲು ರೊಪೋ ಕ್ಲಿಪ್‌ಟಿನ್ ಎಂಬ ಔಷಧಿಯನ್ನು ಉಪಯೋಗಿಸುವರು. ಇದರಿಂದ ಪ್ರೊಲಾಕ್ಟಿನ್ ತಯಾರಿಸುವ ಕ್ರಿಯೆಗೆ ಅಡ್ಡಿಯಾಗುವದು.

❁ ಅದೇ ಜನಿಸಿದ ಶಿಶುವು ಸಾಧಾರಣವಾಗಿ ದಿನದಲ್ಲಿ ೧೬ ತಾಸಿನ ವರೆಗೆ ನಿದ್ರಿಸಿರುತ್ತದೆ. ನಿದ್ದೆ ಮಾಡುವ ಅವಶ್ಯಕತೆಯು ವಯಸ್ಸಿನ ಬೆಳವಣಿಗೆ ಆದಂತೆ ಕಡಿಮೆ ಆಗುತ್ತಹೋಗಿ ಪ್ರೌಢ ವಯಸ್ಸಿನ ಮನುಷ್ಯ ದಿನಕ್ಕೆ ಸರಾಸರಿ ೭½ ತಾಸಿನ ನಿದ್ದೆಯನ್ನು ಮಾಡುತ್ತಾನೆ.

❁ ಅಸ್ಥಿ ಮಜ್ಜೆಯಲ್ಲಿ ಪ್ರತಿನಿತ್ಯ ಎರಡು ಕೋಟಿ ಕೆಂಪು ರಕ್ತಕಣಗಳು ತಯಾರಾಗುತ್ತವೆ. ಇವು ೧೧೦-೧೨೦ ದಿನಗಳವರೆಗೆ ಜೀವಿಸ ಬಲ್ಲವು.

❁ ಬಿ-೧೨ ಜೀವಸತ್ವವನ್ನು ಶರೀರದಲ್ಲಿ ಅರಗಿಸಿಕೊಳ್ಳದೇ ಇರುವವರಲ್ಲಿ ಪರ್ನಿಸೆಸ್ ಅನಿಮಿಯಾ ಎಂಬ ಅವಸ್ಥೆ ಉಂಟಾಗುವದು.

❁ 'ಬ' ಘಟಕದ ರಕ್ತವು 'ಅ' ರೋಗ ವಿರೋಧಿ ವಸ್ತುಗಳನ್ನೂ 'ಅ' ಘಟಕದ ರಕ್ತವು 'ಬ' ರೋಗವಿರೋಧಿ ವಸ್ತುಗಳನ್ನೂ ಹೊಂದಿರುತ್ತವೆ. ನೀಲವರ್ಣದ ಶಿಶುಗಳನ್ನು ಪಡೆದ ಮಾತೆಯು ರಕ್ತವು ರಿಸೆಸಿವ್ ನೆಗಟಿವ್ ರಕ್ತ Rh – ve ಇದ್ದು Rh + ve ರೋಗವಿರೋಧಿ ಕಣಗಳನ್ನು ಹೊಂದಿರುತ್ತದೆ. ಈ ಕಣಗಳು ಶಿಶುವಿನಲ್ಲಿದ್ದ Rh + ve ರಕ್ತದ ಕೋಶಗಳ ಮೇಲೆ ಆಕ್ರಮಣ ಮಾಡುತ್ತವೆ.

❁ ರಕ್ತ ಪರೀಕ್ಷೆಯಿಂದ ಶಿಶುವಿನ ತಂದೆ ನಿಜವಾದ ತಂದೆ ಹೌದೋ ಅಲ್ಲವೋ ಎನ್ನುವುದನ್ನು ನಿರ್ಧರಿಸಲು ಸಾಧ್ಯವಿದೆ.

❁ ರಕ್ತದೊತ್ತಡದ ಏರಿಕೆಯಿಂದಾಗಿ ಮೂತ್ರಪಿಂಡದ ವೈಫಲ್ಯ ಹಾಗೂ ಪಾರ್ಶ್ವಾಘಾತ ಉಂಟಾಗಬಹುದು. ಜೊತೆಗೆ ಹೃದಯ ವಿಕಾರದ ಕಾಹಿಲೆಯೂ ಬರಬಹುದು. ಯೋಗ್ಯ ರೋಗ ನಿರ್ಣಯ ಹಾಗೂ ಉಪಶಾಮಕಗಳಿಂದ ಇದನ್ನು ನಿಯಂತ್ರಿಸಬಹುದು.

❁ ಸ್ವಸ್ಥವಾದ ವಾತಾವರಣದಲ್ಲಿರುವ ಪ್ರಬುದ್ಧ ವ್ಯಕ್ತಿಯ ಶರೀರದಲ್ಲಿ ಅವನು ೪ ನಿಮಿಷಗಳವರೆಗೆ ಜೀವಂತವಾಗಿ ಇರಲು ಬೇಕಾಗುವಷ್ಟು ಪ್ರಾಣವಾಯುವು ಇರುತ್ತದೆ. ಶ್ರಮವಹಿಸಿ ಕೆಲಸ ಮಾಡುವ ಅದೇ ವ್ಯಕ್ತಿಗೆ ಅಷ್ಟೇ ಪ್ರಾಣವಾಯುವು ಕೇವಲ ಒಂದು ನಿಮಿಷ ಸಾಕಾಗುವಷ್ಟಿರುತ್ತದೆ.

❁ ಕಣ್ಣಿನ ಪರದೆಯುಲ್ಲಿರುವ ದಂಡಾಕೃತಿ ಕೋಶಗಳಿಂದ ಒಂದೇ ಬಣ್ಣವು ಕಾಣಿಸಲು ಶಕ್ಯವಾಗುವದು. ಬೇರೆ ಬೇರೆ ಬಣ್ಣಗಳನ್ನು ಗುರುತಿಸಲು ಶಂಕುವಿನಾಕೃತಿಯ ಕೋಶಗಳು ಕಾರಣವಾಗುತ್ತವೆ. ನಮ್ಮ ಅಕ್ಷಿಪಟಲದಲ್ಲಿ ಶಂಕುವಿನಾಕೃತಿಯ ಕೋಶಗಳಿಗಿಂತ ರಾತ್ರಿಯಲ್ಲಿ ಸ್ಪಷ್ಟವಾಗಿ ಕಾಣುವುದಕ್ಕೆ ಬೇಕಾಗುವ ದಂಡಾಕೃತಿ ಕೋಶಗಳೇ ಹೆಚ್ಚಿನ ಪ್ರಮಾಣದಲ್ಲಿವೆ.

❁ ಕಣ್ಣಿನ ಪರದೆಯಲ್ಲಿ ಕೇವಲ ೩ ವಿವಿಧ ಶಂಕುಕೋಶಗಳಿದ್ದು ಪ್ರತಿಯೊಂದು ಕೋಶದಿಂದ ಕೆಂಪು, ನೀಲಿ ಇಲ್ಲವೇ ಹಸಿರು ಬಣ್ಣಗಳನ್ನು ಗ್ರಹಿಸುವಂತೆ ಮಾಡುವವು. ಬೇರೆ ಬಣ್ಣಗಳು ಈ ಮೂರು ಬಣ್ಣಗಳ ಸಂಯೋಜನೆಯಿಂದಾಗಿ ಗೋಚರವಾಗುವವು.

❁ ವರ್ಣಾಂಧರು ಸಾಮಾನ್ಯವಾಗಿ ಕೆಂಪು ಮತ್ತು ಹಸಿರು ಬಣ್ಣಗಳನ್ನು ಗ್ರಹಿಸಲಶಕ್ತರಿರುತ್ತಾರೆ. ನೀಲಿ ಬಣ್ಣವನ್ನು ಗ್ರಹಿಸದೇ ಇರುವವರು ವಿರಳ.

❁ ಕಣ್ಣ ಬೊಂಬೆಯ ರಂಧ್ರದ ವ್ಯಾಸವು ನಾವು ನೋಡುತ್ತಿರುವ ವಸ್ತುವಿನಿಂದ ನಾವು ಎಷ್ಟರ ಮಟ್ಟಿಗೆ ಪ್ರಚೋದನೆಗೆ ಒಳಗಾಗುತ್ತೇವೆಯೋ ಆ ಪ್ರಮಾಣದಲ್ಲಿ ಹೆಚ್ಚು ಹಿಗ್ಗುತ್ತದೆ. ಉದಾ: ಸುಂದರ ಸ್ತ್ರೀಯನ್ನು ಕಂಡಾಗ ರಂಧ್ರದ ವ್ಯಾಸವು ಶೇಕಡಾ ೩೦ ರಷ್ಟು ಹಿಗ್ಗುವುದಾಗಿ ಕಂಡುಬಂದಿದೆ.

❁ ಮೇದೋಜೀರಕ ರಸದಲ್ಲಿ ೧) ಲೈಪೇಸ್ ೨) ಟ್ರಿಪ್ಸಿನ್ ಹಾಗೂ ೩) ಅಮಿಲೇಸ್ ಎಂಬ ಮೂರು ಕಿಣ್ವಗಳಿದ್ದು, ಅವುಗಳು ಅನುಕ್ರಮವಾಗಿ ಕೊಬ್ಬು ಪ್ರೋಟೀನು ಮತ್ತು ಪಿಷ್ಟ ಪದಾರ್ಥಗಳನ್ನು ವಿಭಜಿಸಿ ಅವು ಕರುಳಿನಲ್ಲಿ ಅರಗುವಂತೆ ಮಾಡಲು ಅನುವಾಗುತ್ತವೆ. ಮೇದೋಜೀರಕ ರಸದ ಅಭಾವದಿಂದ ಈ ಆಹಾರಗಳು ಅರಗುವುದಿಲ್ಲ.

❁ ಯಕೃತ್ತಿನಲ್ಲಿರುವ ಪಿತ್ತಕ್ಷಾರಗಳು ಕೊಬ್ಬಿನಂಶವು ಅರಗಲು ಅನುವಾಗುತ್ತವೆ. ಪಿತ್ತಕ್ಷಾರಗಳು ಕೊಬ್ಬಿನ ಕಣಗಳನ್ನು ವಿಭಜಿಸಿ ಅವನ್ನು ತೇಲುದ್ರುವವಾಗಿಸಿ (emulsion) ಬಿಡುತ್ತವೆ. ಈ ರೂಪದಲ್ಲೇ ಕೊಬ್ಬು ಪದಾರ್ಥಗಳು ಶರೀರದಲ್ಲಿ ಹೀರಲ್ಪಡುತ್ತವೆ.

❁ ರಕ್ತದಲ್ಲಿ ಸ್ರವಿಸಲ್ಪಡುವ ಹಾರ್ಮೋನುಗಳು ನಮ್ಮ ಪಾಚಕಾಂಗಗಳ ಕಾರ್ಯವನ್ನು ನಿಯಂತ್ರಿಸುತ್ತವೆ. ಮೇಲ್ಗರುಳಿನಲ್ಲಿ ಆಹಾರವು ಸೇರಿದ ಕೂಡಲೇ ಹಾರ್ಮೋನುಗಳ ಬಿಡುಗಡೆಗೆ ಪ್ರಚೋದನೆ ದೊರೆಯುತ್ತದೆ. ಹೀಗೆ ರಕ್ತವಾಹಿಯಾದ ಹಾರ್ಮೋನುಗಳು ಮೇಧೋಜೀರಕ ಗ್ರಂಥಿಯಿಂದ ಮೇದೋಜೀರಕ ರಸವು ಸ್ರವಿಸುವದಕ್ಕೂ, ಪಿತ್ತ ಕೋಶದಿಂದ ಪಿತ್ತರಸ ಹೊಮ್ಮುವುದಕ್ಕೂ ಕುಮ್ಮಕ್ಕು ಕೊಡುತ್ತವೆ.

❁ ಮೂತ್ರಪಿಂಡಗಳ ಮುಂಖಾಂತರ ಪ್ರತಿ ದಿನವೂ ೪೩೦ ಗ್ಯಾಲನ್ (೧೯೩೦ ಲಿಟರ್) ನಷ್ಟು ರಕ್ತವು ಪ್ರವಹಿಸುತ್ತದೆ. ಇದರಲ್ಲಿ ಸಾವಿರದಲ್ಲಿ ಒಂದಂಶ ಮಾತ್ರ ಮೂತ್ರದ ರೂಪದಲ್ಲಿ ಹೊರಬರುತ್ತದೆ.

❁ ಪ್ರತಿಯೊಂದು ಮೂತ್ರಪಿಂಡದಲ್ಲಿ ೧೦ ಲಕ್ಷ ನೆಫ್ರೂನ್ ಅಂದರೆ ಸೋಸುವ ರಚನೆಯುಳ್ಳ ಶೋಧಕಾಂಗಗಳಿವೆ. ಈ ಶೋಧಕಾಂಗಗಳನ್ನು ಒಂದಕ್ಕೊಂದು ಜೋಡಿಸಿ ಇಟ್ಟರೆ. ೫೦ ಮೈಲು (೮೦ ಕಿಲೋಮೀಟರ್) ದೂರದಷ್ಟು ಉದ್ದಳತೆಯಾಗಬಲ್ಲದು.

❁ ಅಲ್ಡೊಸ್ಟಿರೋನ್ ಎಂಬ ಪ್ರಚೋದಕವು (ಹಾರ್ಮೊನ್) ಎಡ್ರಿನಲ್ ಲವಣಗಳನ್ನು ಪುನಃ ಶರೀರದಲ್ಲಿ ಸೇರುವಂತೆ ಮಾಡುವ ಕ್ರಿಯೆಯನ್ನು ನಿಯಂತ್ರಿಸುತ್ತದೆ. ನೀರು ಪುನಃ ಶರೀರದೊಳಗೆ ಹೋಗುವ ಕ್ರಿಯೆಯನ್ನು ಎಂಟಿಡ್ಯಾಯುರೆಟಿಕ್ ಎಂಬ ಹಾರ್ಮೋನು ನಿಯಂತ್ರಿಸುತ್ತದೆ. ಈ ಹಾರ್ಮೋನು ಪಿಚುಟರಿ ಗ್ರಂಥಿಯಿಂದ ಹೊರ ಹೊಮ್ಮುತ್ತದೆ.

❁ ಯಕೃತ್ತಿನ ಜೀವಕೋಶಗಳು ರಕ್ತಗತವಾದ ಗ್ಲುಕೋಸನ್ನು ವಿನಿಯೋಗಿಸಿ ಗ್ಲೈಕೋಜಿನ್ ಎನ್ನುವ ಪದಾರ್ಥವನ್ನು ತಯಾರು ಮಾಡುತ್ತವೆ. ಈ ಗ್ಲೈಕೋಜಿನ್ ಯಕೃತ್ತಿನಲ್ಲಿ ಶೇಖರಗೊಂಡು ಶಕ್ತಿಯ ಅವಶ್ಯಕತೆ ಇದ್ದಾಗ ಬೇಕಾಗುವ ಗ್ಲುಕೋಜ್ ಗ್ಲೈಕೋಜಿನ್‌ನಿಂದ ಪುನಃ ನಿರ್ಮಾಣಗೊಳ್ಳುತ್ತದೆ.

❁ ರಕ್ತವು ಹೆಪ್ಪುಗಟ್ಟಲು ಬೇಕಾದ ಪದಾರ್ಥಗಳನ್ನು ಯಕೃತ್ತು ಸಿದ್ಧಪಡಿಸುತ್ತದೆ. ಯಕೃತ್ತಿಗೆ ಧಕ್ಕೆಯಾದಾಗ ರಕ್ತ ಹೆಪ್ಪುಗಟ್ಟುವ ಕ್ರಿಯೆಯು ಸೋಲುತ್ತದೆ.

❁ ಪಿತ್ತನಾಳಗಳ ತಡೆಯಿಂದಾಗಿ ಪಿತ್ತರಸವು ಕರುಳಿಗೆ ಹೋಗುವ ಬದಲು ಪುನಃ ರಕ್ತದತ್ತವೇ ಸರಿಯುತ್ತದೆ. ಹೀಗೆ ರಕ್ತದಲ್ಲಿ ಪಸರಿಸುವ ಪಿತ್ತ ಪದಾರ್ಥಗಳ ಹೆಚ್ಚಳ ಕಾಮಾಲೆಯನ್ನುಂಟುಮಾಡುತ್ತದೆ.

❁ ಯಕೃತ್ತಿನ ಸಿರ್ಹೊಸಿಸ್ (ಊತ) ದಿಂದಾಗಿ ಸಾವು ಸಾಧ್ಯ. ಮಿತಿಮೀರಿದ ಮದ್ಯ ಸೇವನೆ ಸಿರ್ಹೋಸಿಸ್‌ಗೆ ಆಮಂತ್ರಣವಿತ್ತಂತೆಯೇ ಸರಿ.

❁ ಮೇದೋಜೀರಕ ಗತಿಯಿಂದ ಪ್ರತಿನಿತ್ಯ ಒಂದೂವರೆ ಲೀಟರಿನಷ್ಟು ಕ್ಷಾರಗುಣವುಳ್ಳ ಮೇದೋಜೀರಕ ದ್ರವವು ನಿರ್ಮಾಣಗೊಳ್ಳುವುದು. ಇದರಿಂದ ಜಠರದೊಳಗಿಂದ ಬರುವ ದ್ರವವು ಸಣ್ಣ ಕರುಳನ್ನು ಸೇರುವ ಮುನ್ನ ಆಮ್ಲೋಪಶಮನ ಪಡೆಯುವುದು ಸಾಧ್ಯವಾಗುತ್ತದೆ.

❁ ಕ್ಯಾನ್ಸರ್ ಜೀವಕೋಶಗಳು ಕೃತಕ ವಾತಾವರಣದಲ್ಲಿ ಬೆಳೆಯುವಂತೆ ಮಾಡಿದಾಗ ಅವು ಅನಿರ್ದಿಷ್ಟ ಸಮಯದ ವರೆಗೆ ಬೆಳವಣಿಗೆ ಹೊಂದುತ್ತಲೇ ಇರುವುವವೆಂದು ತಿಳಿದು ಬಂದಿದೆ.

❁ ಯಾವುದೇ ಮನುಷ್ಯನು ದಿನವೊಂದಕ್ಕೆ ೭-೮ ಗಂಟೆಗಳ ನಿದ್ರೆ ಮಾಡಿ ತನ್ನ ಭಾರವನ್ನು ಸರಿಯಾಗಿ ನಿಯಂತ್ರಣದಲ್ಲಿಟ್ಟುಕೊಂಡು ಧೂಮಪಾನ ಮಾಡದೇ ಇದ್ದಲ್ಲಿ, ಈ ಕಾರ್ಯಕ್ರಮವಿಲ್ಲದ ಜೀವನ ಸಾಗಿಸುತ್ತಿರುವ ಮನುಷ್ಯರಿಗಿಂತ ಹೆಚ್ಚುಕಾಲ ಬದುಕಬಹುದು.

❁ ವಿವಾಹಿತರಾದ ಪುರುಷರು ಹೆಚ್ಚು ವರುಷಗಳ ವರೆಗೆ ಬದುಕುವರು. ಅಲಮೇಡಾ ಎನ್ನುವ ಅಮೇರಿಕದ ಜಿಲ್ಲೆಯೊಂದರಲ್ಲಿ ೩೦ ರಿಂದ ೪೯ ವಯಸ್ಸಿನ ಅವಿವಾಹಿತ ಪುರುಷರ

ಅದೇ ವಯಸ್ಸಿನ ವಿವಾಹಿತ ಪುರುಷರ ಎರಡು ಪಟ್ಟು ಪ್ರಮಾಣದಲ್ಲಿ ಮೃತರಾದರೆಂದು ತಿಳಿದು ಬಂದಿದೆ.

❀ ಧೂಮಪಾನ ಮಾಡುವುದರಿಂದ ರಕ್ತದಲ್ಲಿದ್ದ ಕಾರ್ಬನ್‌ಮೊನಾಕ್ಸೈಡ್ ಪ್ರಮಾಣ ಹೆಚ್ಚುತ್ತದೆ; ತೀವ್ರ ಧೂಮಪಾನಿಗಳಲ್ಲಿ ರಕ್ತದಲ್ಲಿಯ ಹೀಮೋಗ್ಲೋಬಿನ್ ನೂರರಲ್ಲಿ ೧೫ ಅಂಶದಷ್ಟು ಕಾರ್ಬನ್‌ಮೋನಾಕ್ಸೈಡ್ ವಿಷಕ್ಕೆ ತುತ್ತಾಗಿದುದ್ದು ತಿಳಿದುಬಂದಿದೆ. ಹೀಮೋಗ್ಲೋಬಿನ್ನು ಕಾರ್ಬನ್‌ಮೊನಾಕ್ಸೈಡ್ ಪಡೆದರೆ ಪ್ರಾಣವಾಯುವನ್ನು ಸ್ವೀಕರಿಸುವ ಅದರ ಸಾಮರ್ಥ್ಯ ನಷ್ಟವಾಗುತ್ತದೆ.

❀ ಮದ್ಯಪಾನ ಮಾಡುವವರು ರಕ್ತಹೀನತೆಯಿಂದಾಗಿ ಬಳಲುವರು. ಅವರ ಆಹಾರ ಪ್ರಮಾಣದಲ್ಲಿ ಫೋಲಿಕ್ ಆಮ್ಲದ ಅಭಾವದ ಮೂಲಕ ರಕ್ತದ ಉತ್ಪಾದನೆ ಕಡಿಮೆಯಾಗುವದು.

❀ ಯಾವುದೇ ಮನುಷ್ಯನು ಒಳ್ಳೆಯ ಆರೋಗ್ಯ ಸ್ಥಿತಿಯಲ್ಲಿ ಇಲ್ಲದಿದ್ದಲ್ಲಿ ಆಯಾಸವಾಗುವಂತೆ ವ್ಯಾಯಾಮ ಮಾಡುವುದರೀದ ಹೃದಯುವು ದಣಿದು ಅಪಾಯಕರ ಪರಿಸ್ಥಿತಿಗೀಡಾಗಬಹುದು.

❀ ಹೆಚ್ಚು ಚಲನೆ ಇಲ್ಲದೆ ಕೆಲಸ ಕಾರ್ಯದಲ್ಲಿ ನಿರತರಾಗಿರುವವರು ನಿಯುಮಿತವಾಗಿ ವ್ಯಾಯಾಮ ಮಾಡುವ ಜನರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕೊರೊನರಿ ಹೃದಯ ರೋಗಗಳಿಗೀಡಾಗುವರು.

❀ ಕೊರೊನರಿ ಹೃದಯ ರೋಗದಿಂದ ಬಳಲುತ್ತಿರುವವರು ನಿಯುಮಿತವಾದ ವ್ಯಾಯಾಮವನ್ನು ಮಾಡುತ್ತಿರಬೇಕು. ಇದರಿಂದ ಅವರ ಹೃದಯುವ ಕ್ರಿಯಾಸಾಮರ್ಥ್ಯ ಸುಧಾರಿಸುತ್ತದೆ.

❀ ದವಡೆಯ ಭಾಗದಲ್ಲಿ ಹಾಗೂ ತೋಳುಗಳಲ್ಲಿ ಹರಿದು ಬರುವ ನೋವು, ಹೃದಯ ಶೂಲೆ(ಎಂಜೈನಾ)ಯ ಲಕ್ಷಣವಾಗಿದೆ. ಎದೆಯಲ್ಲಿ ನೋವಿನ ಅನುಭವವಾದರೂ ಈ ನೋವು ದವಡೆ ಹಾಗೂ ಎಡ ತೋಳಿನತ್ತ ಅಥವಾ ಎರಡೂ ತೋಳುಗಳಲ್ಲಿ ಇಳಿದು ಬರುವುದು ಸಾಮಾನ್ಯ.

❀ ಹೃದಯಾಘಾತಕ್ಕೆ ಈಡಾದವರಲ್ಲಿ ಸುಮಾರು ೧೦೦ಕ್ಕೆ ೧೨ರಷ್ಟು ಜನರು ೧೫ ನಿಮಿಷಗಳಲ್ಲಿ ಸಾಯುತ್ತಾರೆ. ಸೂಕ್ತ ಶುಶ್ರೂಷೆಯಿಂದ ಪ್ರಾಣವನ್ನು ರಕ್ಷಿಸಬಹುದು,

❀ ವಂಶವಾಹಿ ತಾಂತ್ರಿಕ ಜ್ಞಾನ (ಜೆನೆಟಿಕ್ ಇಂಜನಿಯರಿಂಗ್)ದ ಮೂಲಕ ಸಿದ್ಧಪಡಿಸಿದ ಇನ್ಸುಲಿನ್ ಚೋದಕವು ಸಿಹಿ ಮೂತ್ರ ಕಾಹಿಲೆಯನ್ನು ಗುಣಪಡಿಸುವುದಕ್ಕೆ ಅಸಮರ್ಥ; ಏಕೆಂದರೆ, ಇದು ಮಾನವ ದೇಹದ ಇನ್ಸುಲಿನ್ ಅಲ್ಲ ಎನ್ನುವ ಒಂದು ಪ್ರತೀತಿ ಇದೆ. ಇದು ನಿರಾಧಾರವಾದದ್ದು. ಪ್ರಾಯೋಗಿಕವಾಗಿ ಉತ್ಪಾದಿಸಿದ ಇನ್ಸುಲಿನ್, ಮನುಷ್ಯ ದೇಹದ ಇನ್ಸುಲಿನ್‌ನಷ್ಟೇ ಪ್ರಭಾವಶಾಲಿ ಎಂಬುದು ಇದೀಗ ಸರ್ವವೇದ್ಯವಾಗಿದೆ.

❀ ಎರಡು ಹಾಗೂ ಮೂರು ಬೆರಳುಗಳನ್ನು ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ ಕೂಡಿಸಿದಾಗ ಅವುಗಳನ್ನು ಕೂಡಿಸಿದ ಶರೀರದಲ್ಲಿ ಹಿಂದೆ ಇದ್ದ ಅವಯುವ (ಬೆರಳುಗಳ) ಗುಣಧರ್ಮಗಳನ್ನೇ ಹೊಂದಿದ್ದಾಗಿ ಕಂಡುಬಂದಿದೆ. ಪ್ರಥಮತಃ ಚೀನಾ ದೇಶವು ಈ ರೀತಿಯ ಅವಯುವದ ಕಸಿ ಮಾಡುವುದರಲ್ಲಿ ಸಾಫಲ್ಯವನ್ನು ಪಡೆದಿದೆ.

❀ ಒಂದು ಮಗುವು ಪ್ರತಿ ಸೆಕೆಂದಿಗೆ ೭೦೦೦೦ ಆವರ್ತ ಸಂಖೆಯುಳ್ಳ ಧ್ವನಿಯನ್ನು ಕೇಳಬಲ್ಲದು. ಆದರೆ ಒಬ್ಬ ವಯಸ್ಕನು ಹೆಚ್ಚೆಂದರೆ ಪ್ರತಿ ಸೆಕೆಂದಿಗೆ ೧೨೦೦೦ ಆವರ್ತ ಸಂಖ್ಯೆಯುಳ್ಳ ಧ್ವನಿಯನ್ನು ಮಾತ್ರ ಕೇಳಬಲ್ಲನು.

❀ ದೀರ್ಘಕಾಲದ ವರೆಗೆ ನಿಶ್ಚಲನಾದ ಮನುಷ್ಯನ ಮಿದುಳಿಗೆ ರಕ್ತಪ್ರವಾಹ ಕಡಿಮೆಯಾಗುವುದರಿಂದ ಅವನು ಮೂರ್ಛೆಹೊಂದುವ ಸಂಭವವಿರುತ್ತದೆ.

❀ ಎಂಬತ್ತು ವರ್ಷಕ್ಕಿಂತ ಹೆಚ್ಚು ವಯಸ್ಸಾದವರಲ್ಲಿ ರಕ್ತನಾಳಗಳು ಮುಪ್ಪಾಗಿದ್ದು ಅವುಗಳ ಸ್ಥಿತಿಸ್ಥಾಪಕತ್ವವು ಕಡಿಮೆಯಾಗಿರುತ್ತದೆ. ಆದ್ದರಿಂದ ಸಿಸ್ಟೋಲಿಕ್ ರಕ್ತ ಒತ್ತಡವು ಸಾಮಾನ್ಯರಿಗಿಂತ (೧೨೦ ಮಿ. ಮಿ. ೧ ಕೇಜಿ.) ಹೆಚ್ಚಾಗಿರುವದು. ✡

# ಕೊಲೆಗೈದೂ ನಿರ್ದೋಷಿ

ವಾಲ್ಟರ್ ಲಾಸ್ರಾದೋ

ಅವಳು ರೋಷಾವೇಶದಿಂದ ಅರಚಿಕೊಂಡು ತನ್ನ ಕೈಯಲ್ಲಿದ್ದ ಕೊಡಲಿಯನ್ನು ಜೋರಾಗಿ ಬೀಸಿದಳು. ಅದು ಅವನ ವೃಷಣಗಳಿಗೆ ಬಡಿಯಿತು. ಈಗ ಅರಚುವ ಸರತಿ ಅವನದು. ತನ್ನ ಜನನಾಂಗವನ್ನು ಹಿಡಿದುಕೊಂಡು, ಮುಂದೆ ಬಾಗಿ ಅರ್ಥವಿಲ್ಲದೆ ಅವನು ತೊದಲತೊಡಗಿದ. ಅವಳು ಅಲ್ಲಿ ಹತ್ತಿರದಲ್ಲಿ ಬಿದ್ದುಕೊಂಡಿದ್ದ ನೈಲಾನ್ ಹಗ್ಗವನ್ನು ಎತ್ತಿಕೊಂಡು ಅವನ ಕುತ್ತಿಗೆಗೆ ಬಿಗಿದಳು. ಅವನಿಗೆ ತನ್ನ ಗಂಟಲಿಗೆ ಸುತ್ತಿದ ಹಗ್ಗದ ಪರಿವೆ ಇರಲಿಲ್ಲ. ಅವನ ತೊಡೆಗಳ ನಡುವೆ ನೋವಿನ ಬೆಂಕಿ ಉರಿಯುತ್ತಿತ್ತು. ಅಂಟಾದ ಬಿಸಿ ರಕ್ತ ಕೈಗಳಿಂದ ಇಳಿಯುತ್ತಿತ್ತು. ಅವಳು ಉರುಲನ್ನು ಗಟ್ಟಿಯಾಗಿ ಬಿಗಿಯುತ್ತಿರುವಾಗ ಚಿತ್ತೋದ್ರೇಕದಿಂದ ಅರಚುತ್ತಿದ್ದಳು. ಹಗ್ಗವನ್ನು ಎಳೆಯಲು ಆತ ಪ್ರಯತ್ನಿಸಿದ. ಆದರೆ ಕೊಡಲಿಯಿಂದ ಅವನ ಅರ್ಧ ಜೀವ ಹೋಗಿತ್ತು. ಅವನ ತೆರೆದ ಬಾಯಿಂದ ನಿಧಾನವಾಗಿ ಜೀವ ತೆರಳಿ ನಾಲಗೆ ಹೊರಗೆ ಚಾಚಿಕೊಂಡಿತು. ಕಣ್ಣುಗಳು ಮೇಲೆ ಸರಿದವು. ಸುಖದೇವ ಸೋನಾವಣೆ ಸತ್ತುಹೋಗಿದ್ದ. ದುಲಾರಿಬಾಯಿ ಬಿದ್ದುಕೊಂಡಿದ್ದ ಅವನ ಹೆಣವನ್ನು ಒಮ್ಮೆ ದಿಟ್ಟಿಸಿ ನೋಡಿ ಕೋಣೆಯಿಂದ ಹೊರಗೆ ನಡೆದಳು. ಹೊರಗೆ ಬಂದಮೇಲೆಯೇ ಸತ್ಯಸಂಗತಿ ತಿಳುವಳಿಕೆಗೆ ಬಂತು. "ಇದೀಗ ನಾನು ಒಬ್ಬನನ್ನು ಕೊಂದು ಹಾಕಿದೆ... ಅವನು ನನ್ನ ಮೇಲೆ ಬಲಾತ್ಕಾರ ಮಾಡಲೆತ್ನಿಸಿದ್ದ."

ಅವಳು ಸುಖದೇವ ಸೋನಾವಣೆಯ ಕೊಲೆ ಮಾಡಿದ್ದು ನ್ಯಾಯಬದ್ಧವೆ?

ಮಧ್ಯಪ್ರದೇಶದ ಸುಪೇಲ ಜಿಲ್ಲೆಯಲ್ಲಿ ಕಾಂಟ್ರಾಕ್ಟರ್ ಕಾಲನಿಯಲ್ಲಿ ತನ್ನ ಹುಲ್ಲಿನ ಮನೆಯ ಚಿಕ್ಕ ಅಂಗಳದಲ್ಲಿ ಅವಳು ಕೂತಳು.

೧೯೭೧ರಲ್ಲಿ ಸುಖದೇವ ಸೋನಾವಣೆ ಭಿಲಾಯಿ ಕಬ್ಬಿಣದ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುವಾಗ ದುಲಾರಿಬಾಯಿಯ ಗಂಡ ಮೆಹ್ತಾರ್ ಲೋಧಿ ಆಗಲೇ ಅಲ್ಲಿ ಕೆಲಸಕ್ಕಿದ್ದ. ಕೆಲವು ವರ್ಷಗಳ ನಂತರ ಅವರಿಬ್ಬರೂ ನಿಕಟ ಮಿತ್ರರಾದರು. ಇಷ್ಟರಲ್ಲಿಯೇ ಅವರಿಗೆ ತೃಪ್ತಿ ಇರಲಿಲ್ಲ. ತಮ್ಮ ಗೆಳೆತನವನ್ನು ಒಂದು ವಿಶೇಷ ಶಾಸ್ತ್ರೋಕ್ತ ಕ್ರಿಯೆಯಿಂದ ಸ್ಥಿರಪಡಿಸಬೇಕೆಂದು ಅವರಿಬ್ಬರಿಗೂ ಬಹಳ ಆಶೆ ಇತ್ತು. ಮಧ್ಯಪ್ರದೇಶದ ಛತ್ತೀಸ್‌ಗಡ ಪರಿಸರದಲ್ಲಿ 'ಮಹಾಪ್ರಸಾದ'ವೆನ್ನುವ ಮನಸ್ಸು ಕರಗಿಸುವಂಥ ಒಂದು ಕ್ರಿಯೆ ರೂಢಿಯಲ್ಲಿದೆ. ಏನೂ ರಕ್ತಸಂಬಂಧವಿಲ್ಲದ ಇಬ್ಬರು ನಿಜವಾದ ಸಹೋದರರಾಗಲು ಇಚ್ಛಿಸಿದರೆ ಅವರು



'ಮಹಾಪ್ರಸಾದ' ಕ್ರಿಯೆ ನೆರವೇರಿಸಿ ತೆಂಗಿನ ಕಾಯಿಗಳನ್ನು ವಿನಿಮಯ ಮಾಡಿಕೊಂಡು ಅಣ್ಣ ತಮ್ಮಂಧಿರ ಸಂಬಂಧವನ್ನು ಪಡೆಯುತ್ತಾರೆ. ಆದರ ನಂತರ ಅವರು ಪರಸ್ಪರರ ಜೀವ, ಆಸ್ತಿ, ಹಣ ಮತ್ತು ಹೆಂಡಂದಿರ ವಿಷಯದಲ್ಲಿ ಸಂಪೂರ್ಣ ವಿಶ್ವಾಸವಿಡುತ್ತಾರೆ. ಸುಪೇಲದಲ್ಲಿ ವಾಸಿಸುವ ಮೆಹ್ತಾರ್ ಲೋದಿ ಮತ್ತು ನೆರೆಯ ಮುದಿಯಾದಲ್ಲಿ ಮನೆಯಿದ್ದ ಸುಖದೇವ ಸೋನಾವಣೆ ಈ ಶಾಸ್ತ್ರೋಕ್ತ ಕ್ರಿಯೆಯನ್ನು ನೆರವೇರಿಸಲು ನಿರ್ಧರಿಸಿದರು.

ಮಹಾಪ್ರಸಾದ ಕ್ರಿಯೆಯ ನಂತರ ಮೆಹ್ತಾರ್ ಲೋದಿ ಬಹಳ ಸಂತೋಷಪಟ್ಟ. ಅವನ ಮನೆಯಲ್ಲಿ ಅದನ್ನೊಂದು ಹಬ್ಬವೆಂದೇ ಆಚರಿಸಿದರು. ಇಬ್ಬರು ಸಹೋದರರ ಹೆಂಡಂದಿರು–ದುಲಾರಿಬಾಯಿ ಮತ್ತು ಚಮೇಲಿಬಾಯಿ ಭೇಟಿಯಾದರು. ಅಂದಿನಿಂದ ಎರಡೂ ಕುಟುಂಬಗಳು ಆಗಾಗ ಒಟ್ಟುಗೂಡತೊಡಗಿದವು.

ದುಲಾರಿಬಾಯಿ ಮತ್ತು ಮೆಹ್ತಾರ್ ಲೋದಿಯ ಮದುವೆ ೧೯೬೯ರಲ್ಲಿ ಆಗಿದ್ದು ಅವರಿಗೆ ಒಬ್ಬ ಮಗ ಮತ್ತು ನಾಲ್ಕು ಹೆಣ್ಣುಮಕ್ಕಳಿದ್ದವು. ಸುಖದೇವ ಸೋನಾವಣೆ ಮತ್ತು ಚಮೇಲಿಬಾಯಿಗೆ ಮೂರು ಮಕ್ಕಳಿದ್ದವು.

"ನಮ್ಮಿಬ್ಬರಲ್ಲಿ ಎಂದಿಗೂ ಜಗಳವಾಗುತ್ತಿರಲಿಲ್ಲ. ಸುಖದೇವ ನನ್ನ ಉತ್ತಮ ಗೆಳೆಯನಾಗಿದ್ದ. ನನ್ನ ಮನೆಯಲ್ಲಿ ಮತ್ತು ನನ್ನ ಹೆಂಡತಿಯೊಡನೆ ಅವನೊಬ್ಬನನ್ನೇ ಬಿಟ್ಟು ಹೋಗುವಷ್ಟು ವಿಶ್ವಾಸ ನನಗಿತ್ತು. ಅವನು ಯಾವಾಗಲೂ ಬಂದು ಹೋಗುತ್ತಿದ್ದ. ಅವನು ನನ್ನ ಸೋದರನೇ ಆಗಿದ್ದ," ಎಂದು ನೆನಪಿಸಿಕೊಳ್ಳುತ್ತಾನೆ ಮೆಹ್ತಾರ್ ಲೋದಿ.

ಆದರೆ ಅವನ ಸೋದರನ ರಕ್ತದಲ್ಲಿ ಕಾಮಾಸಕ್ತಿ ಅನ್ನುವ ರೋಗಾಣುಗಳು ಹರಿಯುತ್ತಿದ್ದವು. ಈ ಸಂಗತಿ ಮೆಹ್ತಾರನಿಗೆ ತಿಳಿದಿದ್ದರೆ ತನ್ನ ಹೆಂಡತಿಯ ಕಡೆಗೆ ಸುಖದೇವ ದಿಟ್ಟಿಸಿ ನೋಡುವ ರೀತಿಗೆ ಸರಿಯಾದ ಅರ್ಥ ಕಲ್ಪಿಸಲು ಶಕ್ತನಾಗುತ್ತಿದ್ದ. ಆದರೆ 'ಮಹಾಪ್ರಸಾದ' ಕ್ರಿಯೆಯಿಂದ ಸಂಶಯವೆಲ್ಲಾ ಅಳಿಸಿಹೋಗಿತ್ತು.

ಕಳೆದ ವರ್ಷ ಎಪ್ರಿಲ್ ೨೦ನ್ನು ಮೆಹ್ತಾರ್ ಮತ್ತು ದುಲಾರಿಬಾಯಿ ಎಂದಿನಂತೆಯೇ ಪ್ರಾರಂಭಿಸಿದರು. ಕಟ್ಟಿಗೆ ಕಡಿಯುವುದು,

ಮಕ್ಕಳಿಗೆ ಉಣ್ಣಿಸುವುದು, ಬಟ್ಟೆ ಒಗೆಯುವುದು ಇತ್ಯಾದಿ. ಮಧ್ಯಾಹ್ನದ ನಂತರ ಮೆಹ್ತಾರ್ ಲೋದಿ ಭಿಲಾಯ್ ಕಾರ್ಖಾನೆಗೆ ಹೊರಟು ಹೋದ. ಅಂದು ಅವನಿಗೆ ಎರಡನೆಯ ಪಾಳಿಯಲ್ಲಿ ೨ ಗಂಟೆಯಿಂದ ರಾತ್ರಿ ೧೦ ಗಂಟೆಯವರೆಗೆ ಕೆಲಸ ಮಾಡಲಿಕ್ಕಿತ್ತು. ಅವನ 'ಸೋದರ' ಸುಖದೇವ ಸೋನಾವಣೆಯ ಪಾಳಿ ಕೂಡಾ ಅದೇ ಆಗಿತ್ತು. ಬೇರೆ ಶಾಖೆಯಲ್ಲಿ ಆ ಪಾಳಿಯ ನಡುವೆ ಸುಖದೇವ ತನ್ನ ಕೆಲಸ ನಿಲ್ಲಿಸಿ ಮೆಲ್ಲನೆ ಹೊರಗೆ ಜಾರಿದ. ದುಲಾರಿಬಾಯಿಯ ಯೋಚನೆಗಳಿಂದ ಅವನ ತಲೆ ಹುಚ್ಚಾಗಿತ್ತು. ತಾನು ಅವಳನ್ನು ಪಡೆಯಲೇಬೇಕು, ಎಂಬ ನಿರ್ಧಾರದಿಂದ ಅವನು ಕುರುಡನಾಗಿದ್ದ.

ಸುಖದೇವ ತನ್ನ 'ಸೋದರ'ನ ಮನೆ ದಾರಿ ಹಿಡಿದ. ಈ ದಾರಿಯಲ್ಲಿ ಅವನು ಆ ಮುಂಚೆ ಸಾವಿರಾರು ಸಲ ನಡೆದಿದ್ದ. ಆದರೆ ಈ ಸಲ ಮಾತ್ರ ಅವನ ತಲೆಯಲ್ಲಿ ಪೈಶಾಚಿಕ ವಿಚಾರಗಳು ತುಂಬಿಕೊಂಡಿದ್ದವು.

ಕಾಂಟ್ರಾಕ್ಟರ್ ಕಾಲನಿಗೆ ತಲಪಿದ ಆತ ನೇರವಾಗಿ ತನ್ನ ಗೆಳೆಯನ ಮನೆಗೆ ಹೋದ. ಒಳ್ಳೆಯ ಅದೃಷ್ಟವೆಂಬಂತೆ ದುಲಾರಿಬಾಯಿ ಒಬ್ಬಳೇ ಇದ್ದಳು. ಅವನನ್ನು ಅವಳು ನಿತ್ಯದಂತೆ ಸ್ವಾಗತಿಸಿದಳು. ಅವನು ತನ್ನ ಮೈದಡವಿದಾಗಲೂ ಅವಳು ಅನ್ಯಥಾ ಭಾವಿಸಲಿಲ್ಲ. ಸುಖದೇವ ಅವಳ ಕಡೆ ನೋಡುತ್ತಾ ಅಶಾಂತ ರೀತಿಯಿಂದ ಅತ್ತಿತ್ತ ನಡೆಯುತ್ತಿದ್ದಾಗ ದುಲಾರಿಬಾಯಿ ತನ್ನ ಕಟ್ಟಿಗೆ ಕಡಿಯುವ ಕೆಲಸದಲ್ಲಿ ಮಗ್ನಳಾಗಿದ್ದಳು. ತುಸು ಸಮಯದ ನಂತರ ಅವನು ಅವಳಿಗೆ ಒಂದು ಲೋಟ ನೀರು ಬೇಡಿದ. ಒಂದು ಕೈಯಲ್ಲಿ ಕೊಡಲಿಯನ್ನು ಹಿಡಿದು ಅವಳು ಮನೆಯೊಳಗೆ ಹೋಗಿ ಸುಖದೇವನಿಗೆ ಒಳಗೆ ಬರಲು ಹೇಳಿದಳು. ಅವನು ಹಾಗೆ ನೀರು ಕೇಳುವುದು ಬಹಳ ವಿಚಿತ್ರವೆಂದು ಆಗ ಅವಳಿಗೆ ತೋರಲಿಲ್ಲ. ನೀರು ಎಲ್ಲಿದೆ ಎಂಬುದು ಅವನಿಗೆ ಗೊತ್ತಿತ್ತು. ಅವಳು ಮನೆಯೊಳಗೆ ಹೋದ ಕೂಡಲೇ ಅವನ ಕಾಮತೃಷೆ ಸ್ಫೋಟಗೊಂಡಿತು. ಹಟಾತ್ತನೆ ಅವಳ ಕೈ ಹಿಡಿದೆಳೆದು ಕೋಣೆಯೊಂದರೊಳಗೆ ನುಗ್ಗಿದನು. ಅವಳಿಗೆ ಗೊಂದಲಕ್ಕಿಟ್ಟಿತು. ಅವನು ಏನು ಮಾಡಲು ಪ್ರಯತ್ನಿಸುತ್ತಿದ್ದಾನೆಂದು



ತಿಳಿಯಲು ಅವಳಿಗೆ ಹೆಚ್ಚು ಸಮಯ ತಾಗಲಿಲ್ಲ. ಸುಖದೇವನ ಕೈಗಳು ಘೋರ ಸತ್ಯವನ್ನು ಹೇಳುತ್ತಿದ್ದವು. ಅವನು ಹಟ ಸಂಭೋಗದ ಪ್ರಯತ್ನ ಮಾಡುತ್ತಿದ್ದ. ಕೋಪ ನೆತ್ತಿಗೇರಿ ದುಲಾರಿಬಾಯಿ ಹುಚ್ಚಾದಳು. ಕೊಟ್ಟ ಮಾತನ್ನು ಅವನು ಮುರಿದಿದ್ದ. ಕಡುಗೋಪ-ದಿಂದ ಅವಳು ಅರಚಿಕೊಂಡು ಕೈಯಲ್ಲಿದ್ದ ಕೊಡಲಿಯನ್ನು ಅವನ ರಹಸ್ಯಾಂಗದ ಕಡೆಗೆ ಬೀಸಿದಳು. ನಂತರ ಕುತ್ತಿಗೆ ಬಿಗಿದು ಕೊಂದಳು.

ಅವನನ್ನು ಕೊಂದ ನಂತರ ಅವಳಲ್ಲಿ ಅಪರಾಧ ಭಾವನೆ ಹುಟ್ಟಲಿಲ್ಲ, ಹೆದರಿಕೆಯೂ ಆಗಲಿಲ್ಲ. ಆದರೆ ತನ್ನ ಕೈಯಿಂದ ಒಂದು ಜೀವ ಹೋದುದನ್ನು ನೋಡಿ ಅವಳಿಗೆ ದಿಗಿಲಾಯಿತು. ಅವನನ್ನು ಕೊಲ್ಲುವ ಇಚ್ಛೆ ಅವಳಿಗೆ ಇರಲಿಲ್ಲ. ಬಹುಶಃ ವೈದ್ಯನಿಂದ ಏನಾದರೂ ಆಗಬಹುದು. ದುಲಾರಿ ಬಾಯಿ ಡಾ. ಸಾಹೂ ಇದ್ದಲ್ಲಿಗೆ ಓಡಿದಳು. ಒಬ್ಬ ರೋಗಿಯನ್ನು ನೋಡಲು ಆತ ಕೂಡಲೇ ಬರುವ ಪರಿಸ್ಥಿತಿಯಲ್ಲಿರಲಿಲ್ಲ. ದುಲಾರಿಬಾಯಿ ಮನೆಗೆ ಮರಳಿದಳು. ಆದರೆ ಸುಖದೇವನ ದೇಹ ನೋಡಲು ಅವಳಿಂದಾಗಲಿಲ್ಲ. ಪುನಃ ಅವಳು ಡಾ. ಸಾಹೂರ ಚಿಕಿತ್ಸಾಲಯಕ್ಕೆ ಓಡಿದಳು. ಈಗ ವೈದ್ಯ ಅವಳೊಡನೆ ಬರಲು ಒಪ್ಪಿದ. ಆದರೆ ಅವರಿಗೆ ನೋಡಲು ಸಿಕ್ಕಿದ್ದು ಹೆಣ ಮಾತ್ರ.

ದುಲಾರಿಬಾಯಿ ನಂತರ ತನ್ನ ಗಂಡನನ್ನೂ ಸುಖದೇವನ ಹೆಂಡತಿ ಚಮೇಲಿಬಾಯಿಯನ್ನೂ ಕರೆದಳು. ಗಂಡ ಮನೆಗೆ ಬಂದಾಗ ಅವನನ್ನು ಬದಿಗೆ ಕರೆದು ನಡೆದ ಸಂಗತಿಯನ್ನು ವಿವರಿಸಿದಳು. ಮೆಹ್ತಾರ್ ಲೋದಿ ಯಾವ ಭಾವನೆಯನ್ನೂ ತೋರಿಸಲಿಲ್ಲ. ಸಮಯವೂ ಇರಲಿಲ್ಲ. ಬಹಳ ಕೆಲಸ ಮಾಡಲಿ-ಕ್ಕಿತ್ತು. ಸತ್ಯ ಸಂಗತಿ ತಿಳಿದಿದ್ದರೂ ಮೆಹ್ತಾರ್ ಲೋದಿ ಸತ್ತವನ ಕುಟುಂಬಕ್ಕೆ ನೆರವಾದ. ಆದರೆ ಅವನು ಸುಖದೇವನ ಹೆಣವನ್ನು ಪೋಸ್ಟ್‌ಮಾರ್ಟಮಿಗೆ ಕೊಂಡುಹೋದ ಸಮಯದಲ್ಲಿ ಪೋಲೀಸರು ಬಂದು ದುಲಾರಿಬಾಯಿಯನ್ನು ದಸ್ತಗಿರಿ ಮಾಡಿದರು. ಮೆಹ್ತಾರ್ ಲೋದಿ ಮರಳಿ ಮನೆ ತಲಪಿದಾಗ ಮಕ್ಕಳಿಂದ ಈ ಸುದ್ದಿ ತಿಳಿಯಿತು. ಅವನು ಕೂಡಲೇ ಪೋಲೀಸು ಠಾಣೆಗೆ ತೆರಳಿ ಹೆಂಡತಿಯನ್ನು ಭೇಟಿಯಾದ. ದುಲಾರಿಬಾಯಿಗೆ ಮಕ್ಕಳ ಚಿಂತೆ ಕಾಡುತ್ತಿತ್ತು. ಅವಳ ಕೊನೆಯ ಮಗಳಿಗೆ ಎರಡು ವರ್ಷ ಕೂಡಾ ತುಂಬಿರಲಿಲ್ಲ; ಈಗಲೂ ಅದು ಎದೆಯ ಹಾಲಿನ ಮೇಲೆ ಬದುಕಿತ್ತು. ಮಗುವನ್ನು ತನ್ನೊಡನೆ ಇರಿಸಲು ಅವಳು ಬೇಡಿಕೊಂಡಾಗ ಪೋಲೀಸರು ಒಪ್ಪಲಿಲ್ಲ.

ಮೆಹ್ತಾರ್ ಲೋದಿ ಹೊರಗಿಂದ ಶಾಂತ ರೀತಿಯಲ್ಲಿದ್ದರೂ ಅವನ ಹುರುಪು ನಿಧಾನವಾಗಿ ಇಳಿಯುತ್ತಿತ್ತು. ತನ್ನ ಹೆಂಡತಿಗೆ ಏನಾಗಬಹುದು? ಮಕ್ಕಳ ಗತಿಯೇನು? ಅಷ್ಟರಲ್ಲಿ ಅವನ ಜೀವನದಲ್ಲಿ ಚುರುಕಾಗಿ ಮಾತಾಡುವ ವಕೀಲ ವಿಕ್ರಮ ಗಂಗಾಧರನ ಪ್ರವೇಶವಾಯಿತು. ಮೆಹ್ತಾರ್ ಲೋದಿ ಅವನನ್ನು ಭೇಟಿಯಾಗಿ ತನ್ನ ಹೆಂಡತಿಯ ಮಾನರಕ್ಷಣೆ ಮಾಡಬೇಕೆಂದು ಬೇಡಿದ.

ನ್ಯಾಯಾಲಯದಲ್ಲಿ ವಿಚಾರಣೆ ನಡೆಯುವಾಗ ಅವರಿಗೆ ಬಹಳ ಕಹಿ ಅನುಭವ ದೊರೆಯಿತು. ದುಲಾರಿಬಾಯಿ ಮತ್ತು ಸುಖದೇವ ಅನೈತಿಕ ಪ್ರೇಮಿಗಳಾಗಿದ್ದು ಪ್ರೇಮಕಲಹದಲ್ಲಿ ಅವಳು ತನ್ನ ಪ್ರಿಯತಮನನ್ನು ಕೊಂದುಬಿಟ್ಟಳೆಂದು ಪೋಲೀಸರು ವಾದ ಹೂಡಿದರು. ವಿಕ್ರಮ ಗಂಗಾಧರ ಸವಾಲು ಮಾಡಿದರು. ಒಂದು ವೇಳೆ "ಅವರಿಬ್ಬರೂ ಪ್ರೇಮಿಗಳಾಗಿದ್ದರೆ ಅವಳು ತನ್ನ ಪ್ರೇಮಿಯ ಕೊಲೆ ಏಕೆ ಮಾಡಬೇಕಿತ್ತು?"

ಕಡೆಗೆ ಈ ಅಸಹ್ಯ ತರಹದ ವಾದ-ಪ್ರತಿವಾದಗಳು ಕೊನೆಗೊಂಡಾಗ ಸತ್ಯವೇ ಜಯಶಾಲಿಯಾಯಿತು. ದುಲಾರಿಬಾಯಿ ನಿರ್ದೋಷಿ-ಯೆಂದು ನ್ಯಾಯಾಲಯ ತೀರ್ಪು ಕೊಟ್ಟಿತು. ◘



# ಅದ್ಭುತ ಪ್ರೇಮ ಪತ್ರಗಳು

ಆಧುನಿಕ ಕಾಲದಲ್ಲಿ ಪತ್ರವೊಂದು ಅತ್ಯಂತ ಅವಶ್ಯಕ ಸಂಪರ್ಕ ಸಾಧನವಾಗಿದೆ. ವ್ಯಾವಹಾರಿಕ ಪತ್ರಗಳ ಹೊರತಾಗಿ ಇನ್ನೊಂದು ರೀತಿಯ ಪತ್ರಗಳೂ ಉಂಟು. ಅವೇ ಪ್ರೇಮ ಪತ್ರಗಳು. ಅಗಲಿದ್ದ ಎರಡು ಮನಸ್ಸುಗಳನ್ನು ಒಂದುಗೂಡಿಸಲು ಈ ಪ್ರೇಮಪತ್ರಗಳು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ರೂಢಿಯು ನಮ್ಮ ದೇಶದಲ್ಲಿ ಅಷ್ಟೇ ಅಲ್ಲದೆ ಇಡೀ ಜಗತ್ತಿನಲ್ಲಿಯೇ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆಯೆಂದರೆ ಸೋಜಿಗದ ಸಂಗತಿಯೇನಲ್ಲ. ಪ್ರೇಮ ಪತ್ರಕ್ಕೆ 'ಮಾನವನ ಮನಸ್ಸಿನ ಕನ್ನಡಿ' ಎಂದೂ ಹೇಳಬಹುದು. ಏಕೆಂದರೆ, ಇಂಥ ಪ್ರೇಮಪತ್ರಗಳಲ್ಲಿ ಇಬ್ಬರು ಪ್ರೇಮಿಗಳ ಮನಸ್ಸಿನ ಅಂತರಾಳವು ಅಡಗಿಕೊಂಡಿರುತ್ತದೆ. ಈ ಅಂತರಾಳವನ್ನು ಅಳೆದು ತೋರಿಸಿ ಬಹಿರಂಗಪಡಿಸಲು ಪ್ರೇಮ ಪತ್ರವು ಅತ್ಯಂತ ಸಶಕ್ತ ಸಾಧನವಾಗಿದೆ. ಇಂಥ ಪ್ರೇಮಪತ್ರಗಳನ್ನು ಬರೆಯುವದರಲ್ಲಿ ಪ್ರಸಿದ್ಧ ಸಾಹಿತಿಗಳು, ವಿಜ್ಞಾನಿಗಳು, ಮಹಾಪುರುಷರೂ ಹೆಸರುವಾಸಿಯಾಗಿದ್ದರು.

ವಿಶ್ವವಿಖ್ಯಾತ ನಾಟಕಕಾರನಾದ ಜಾರ್ಜ್ ಬರ್ನಾರ್ಡ್ ಶಾ ಸಹ ಈ ರೋಗಕ್ಕೆ ಬಲಿಯಾಗಿದ್ದ. ಅವನು ತನ್ನ ಪ್ರೇಯಸಿಯಾದ ಪ್ರಖ್ಯಾತ ಅಭಿನೇತ್ರಿ ಶ್ರೀಮತಿ ಪ್ಯಾಟ್ರಿಸ್ ಕೆಂಪ್‌ಬೆಲ್‌ಳಿಗೆ ಸುಮಾರು ೨೪೫ ಪ್ರೇಮ ಪತ್ರಗಳನ್ನೂ ಬರೆದಿದ್ದ. ೧೯೮೪ರ ಫೆಬ್ರುವರಿ ೨೪ರಂದು ಶಾನ ಪ್ರೇಮಪತ್ರಗಳನ್ನು ಹರಾಜು ಮಾಡಲಾಯಿತು. ಹರಾಜಿನಲ್ಲಿ ಬಂದ ಬೆಲೆ

---

## ಎಂ. ವಿ. ನೂಲಬಾವಡಿ

---

ಸುಮಾರು ೩೦೦೦ ಪೌಂಡುಗಳು ಎಂದರೆ ಆಶ್ಚರ್ಯವೇನಲ್ಲ.

ಫ್ರಾನ್ಸ್ ದೇಶದ ಪ್ರಸಿದ್ಧ ಕವಿ ಪ್ರೊ॥ ಬೆರೋನ ಪ್ರೇಮಪತ್ರಗಳ ಹರಾಜನ್ನೂ ಮಾಡಲಾಗಿತ್ತು. ಹರಾಜಿನಲ್ಲಿ ಇವನ ಪ್ರೇಮ ಪತ್ರಗಳಿಗೆ ಬಂದ ಬೆಲೆ ಸುಮಾರು ೨೧,೦೦,೦೦೦ ರೂಪಾಯಿಗಳಷ್ಟು. ಇವು ೧೯೩೭ ರಿಂದ ೧೯೪೫ರ ಅವಧಿಯಲ್ಲಿ ಈತನು ತನ್ನ ಪ್ರೇಯಸಿ ಜೀನ್ ವ್ಯಾಲಿಯರ್‌ಳಿಗೆ ಬರೆದಂಥವು.

ಈತ ತನ್ನ ಪ್ರೇಯಸಿಯ ಕುರಿತು ಸುಮಾರು ೧೩೩ ಕವಿತೆಗಳನ್ನೂ ಬರೆದಿದ್ದ. ಪ್ರಸಿದ್ಧ ಪತ್ರಿಕೆಗಳು ಅವುಗಳನ್ನೆಲ್ಲಾ ಪ್ರಕಟ ಪಡಿಸಿದ್ದವು. ಕೋಟಿಗಟ್ಟಲೆ ಜನರು ಈ ಕವಿತೆಗಳನ್ನೂ ಓದಿದ್ದರು. ಆಶ್ಚರ್ಯದ ಸಂಗತಿಯೆಂದರೆ ಈ ಪ್ರೇಮಿಗಳಿಬ್ಬರ ಪ್ರೇಮನಾಟಕವು ಮದುವೆಯಲ್ಲಿ ಕೊನೆಗೊಂಡಾಗ ಫ್ರೊ. ಬೇರೋನ ವಯಸ್ಸು ೬೦ ವರ್ಷಗಳು.

ಚಿಲಿ ದೇಶದ ನೋಬೆಲ್ ಪಾರಿತೋಷಕ ವಿಜೇತ ಕವಿ ಪಾಬ್ಲೋ ನೆರೂದಾನ ಪ್ರಥಮ ರಚನೆಯೇ ಅವನ ಪ್ರೇಮ ಪತ್ರವಾಗಿತ್ತು. ಅದು ಅವನ ಪ್ರೇಯಸಿಗೆ ಬರೆದ ಮೊದಲನೆಯ ಪ್ರೇಮಪತ್ರವಾಗಿತ್ತು. ಅದು ಪ್ರಕಟಗೊಂಡು ಅತ್ಯಂತ ಜನಪ್ರಿಯತೆಯನ್ನು ಗಳಿಸಿತು. ತನ್ನ ಆಯುಷ್ಯದಲ್ಲಿ ಆತ ತನ್ನ ಪ್ರೇಯಸಿಗೆ ಬರೆದ ಒಟ್ಟು ಪ್ರೇಮಪತ್ರಗಳು ೩೧೬. ಈ ಎಲ್ಲ ಪ್ರೇಮಪತ್ರಗಳು ಪ್ರಕಟಗೊಂಡು ಪ್ರಖ್ಯಾತಿಯನ್ನು ಪಡೆದಿದ್ದವು.

ಸುಪ್ರಸಿದ್ಧ ಕವಿಗಳಾದ ವರ್ಡ್ಸ್‌ವರ್ಥ್, ಟೆನಿಸನ್ ಮತ್ತು ಅನುಕ್ರಮವಾಗಿ ಮೇರಿ ಮತ್ತು ಆ್ಯಮಿಲಿ ಎಂಬ ಪ್ರೇಯಸಿಯರಿಗೆ ಅತಿ ಉದ್ದುದ್ದ ಪ್ರೇಮಪತ್ರಗಳನ್ನು ವರ್ಷಾನುಗಟ್ಟಲೇ ಬರೆದಿದ್ದರೂ ಅವರ ದೌರ್ಭಾಗ್ಯಕ್ಕೆ ಅವರಿಗೆ ತಮ್ಮ ಪ್ರೇಯಸಿಯರಿಂದ ಯಾವ ಉತ್ತರವೂ ಬರಲಿಲ್ಲ. ಕೊನೆಗೆ ಪ್ರೇಮಿಗಳಿಬ್ಬರೂ ನಿರಾಶೆಗೊಂಡು ತಮ್ಮ ಜೀವನವನ್ನೇ ಮುಕ್ತಾಯಗೊಳಿಸಿಕೊಂಡರು.

ನೆಲ್‌ಸನ್ ಎಂಬ ಬ್ರಿಟಿಷ್ ಸೇನಾಪತಿಯು ಯುದ್ಧದಲ್ಲಿ ತನ್ನ ಬಲಗೈಯನ್ನು ಕಳೆದುಕೊಂಡು ಅತಿ ವೇದನೆಯನ್ನು ಅನುಭವಿಸುತ್ತಿದ್ದಾಗಲೂ ಎಡಗೈಯಿಂದಲೆ ತನ್ನ ಪ್ರೇಯಸಿಗೆ ಸುದೀರ್ಘವಾದ ಪ್ರೇಮಪತ್ರವೊಂದನ್ನು ೧೮೦೮ನೆಯ ಇಸ್ವಿಯ ಅಕ್ಟೋಬರ್ ತಿಂಗಳ ೧೯ರಂದು ಬರೆದು ಕಳಿಸಿದ. ಪ್ರಿಯಕರನು ತನ್ನ ಮೇಲೆ ತೋರಿದ ಅಮೋಘ ಪ್ರೀತಿಯ ಚಿರನೆನಪಿಗಾಗಿ ಅವನ ಪ್ರೇಯಸಿ ಏಮ್ಮ್ಯಾಲ್ ತನ್ನ ಬಲಗೈಯ ಐದೂ ಬೆರಳುಗಳನ್ನು ಕತ್ತರಿಸಿಕೊಂಡು ಆತನಿಗೆ ಕಳುಹಿಸಿಕೊಟ್ಟಿದ್ದಳು. ನೆಲ್‌ಸನ್‌ನ ಈ ಪ್ರೇಮಪತ್ರವನ್ನು ಬ್ರಿಟಿಶ್ ವಸ್ತುಸಂಗ್ರಹಾಲಯದಲ್ಲಿ ಇಂದಿಗೂ ನೋಡಬಹುದು.

ನೆಪೋಲಿಯನ್‌ನಂತಹ ಮಹಾಶೂರ, ಮೈಕೆಲ್ ಫ್ಯಾರಡೆಯಂತಹ ಮಹಾವೈಜ್ಞಾನಿಕ, ಮತ್ತು ಬೀಥೋವನ್‌ನಂತಹ ವಿಲಕ್ಷಣವಾದ ಪ್ರತಿಭಾಶಾಲಿಯಂತಹ ವ್ಯಕ್ತಿಗಳೂ ತಮ್ಮ ತಮ್ಮ ಪ್ರೇಯಸಿಯರಿಗೆ ಬರೆದ ಪ್ರೇಮಪತ್ರಗಳು ಗೌಪ್ಯವಾಗಿ ಉಳಿಯದೆ ಬಯಲಿಗೆ ಬಂದಿದ್ದವು.

## ಅತಿ ದೀರ್ಘ ಪ್ರೇಮಪತ್ರಗಳು :

ಅತಿ ದೀರ್ಘವಾಗಿ ಬರೆದ ಪ್ರೇಮಪತ್ರಗಳ ದಾಖಲೆಯೂ ಅತಿ ದೀರ್ಘವಾಗಿಯೇ ಇದೆ. ಕೆಲವು ಪ್ರೇಮಪತ್ರಗಳು ಉದ್ದುದ್ದವಾಗಿದ್ದರೆ ಇನ್ನು ಕೆಲವು ಅತಿ ಚಿಕ್ಕದಾಗಿದ್ದವು.

ಪ್ರಥಮ ಎಲಿಝಾಬೆತ್ ಮಹಾರಾಣಿಯ ಶಾಸನ ಕಾಲದಲ್ಲಿ, ಒಬ್ಬ ಪ್ರೇಮಿಯು ತನ್ನ ಪ್ರೇಯಸಿಗೆ ಬರೆದ ಪ್ರೇಮಪತ್ರವು ಇಂದಿನವರೆಗಿನ ಅವಧಿಯಲ್ಲಿಯೇ ಅತಿ ದೀರ್ಘ ಪ್ರೇಮಪತ್ರವೆನಿಸಿದೆ. ಈ ಪ್ರೇಮಪತ್ರವು ೮೦೦ ಪುಟಗಳದ್ದಿದ್ದು ೪,೨೦,೦೦೦ ಶಬ್ದಗಳನ್ನೊಳಗೊಂಡಿದೆ. ಈ ಪ್ರೇಮಪತ್ರವೂ ಬ್ರಿಟಿಶ್ ವಸ್ತು ಸಂಗ್ರಹಾಲಯದಲ್ಲಿ ಅತಿ ಸುರಕ್ಷಿತವಾಗಿದೆ.

ಕೆನಡಾ ದೇಶದ ಟೋರಾಂಟೋ ಎಂಬ ಪಟ್ಟಣದ ಜೆಲ್‌ಶಿರಾಜಾ ಎಂಬ ೧೬ ವರ್ಷ ವಯಸ್ಸಿನ ಯುವತಿಯು ತನ್ನ ಪ್ರೇಮಿ ಮಿಚೈಲ್ ಜೈಹಾರಾ ಎಂಬ ೨೦ ವರ್ಷದ ಯುವಕನಿಗೆ ಬರೆದ ಪ್ರೆಮಪತ್ರದಲ್ಲಿಯೂ ೪,೨೪,೦೦೦ ಶಬ್ದಗಳಿವೆ. ಈ ರೀತಿಯ ಪ್ರೇಮಪತ್ರ ಬರೆಯಲು ಈಕೆಗೆ ೨೦ ದಿವಸಗಳ ಕಾಲಾವಧಿಯು ಬೇಕಾಗಿತ್ತು. ಆದರೆ ಇವು

ಗಳಿಂತಲೂ ಉದ್ದುದ್ದವಾದ ಪ್ರೇಮಪತ್ರಗಳನ್ನು ಬರೆದ ಶ್ರೇಯಸ್ಸು ಲೈಕರ್ ಎಂಬ ಚಿತ್ರಕಾರನಿಗೆ ಸಲ್ಲುತ್ತದೆ. ಅವನು ತನ್ನ ಶ್ರೀಮಂತ ಪ್ರೇಯಸಿ ಬಿಲ್‌ಟೋರ್‌ಳಿಗೆ ೧೮೭೫ರಲ್ಲಿ ಈ ಪ್ರೇಮಪತ್ರವನ್ನು ಬರೆದಿದ್ದ. ಅವನು ತನ್ನ ಈ ಪ್ರೇಮಪತ್ರದಲ್ಲಿ ಕೇವಲ ಮೂರು ಶಬ್ದಗಳನ್ನೇ (ಆಯ್ ಲವ್‌ಯು) ೫೬,೨೫,೦೦೦ ಸಲ ಬರೆದಿದ್ದ. ಇದರಿಂದಾಗಿ ಪೂರ್ಣ ಪತ್ರದಲ್ಲಿ ಬರುವ ಶಬ್ದಗಳ ಸಂಖ್ಯೆ ೧,೬೮,೭೫,೦೦೦. ಆದರೆ ವಿಚಿತ್ರ ಸಂಗತಿಯೆಂದರೆ ಅವನು ಈ ಪ್ರೇಮ ಪತ್ರ ಬರೆಯಲು ವೇತನ ಕೊಟ್ಟು ಒಬ್ಬ ನೌಕರನನ್ನಿಟ್ಟುಕೊಂಡಿದ್ದ.

ಇನ್ನು ಉದ್ದಳತೆಯ ದೃಷ್ಟಿಯಿಂದ ಹೇಳಬೇಕೆಂದರೆ ಪಶ್ಚಿಮ ಜರ್ಮನಿಯ ಒಬ್ಬ ಯುವಕನ ಪ್ರೇಮಪತ್ರವು ಅತೀ ಉದ್ದವಾಗಿತ್ತು. ಅ ಪ್ರೇಮಪತ್ರದ ಉದ್ದಳತೆ ೧೨೨೪ ಮೀಟರುಗಳು. ಅಲ್ಲದೆ ಈ ಪತ್ರದಲ್ಲಿಯ ಶಬ್ದಗಳ ಸಂಖ್ಯೆ ೨,೨೫,೦೦೦. ಇದರ ನಂತರದ ಇನ್ನೆರಡು ಉದಾಹರಣೆಗಳು ಈ ರೀತಿ ಇವೆ:— ಕೋರಿಯಾದ ಯುದ್ಧದ ಸಮಯದಲ್ಲಿ ಜೆಫೋ ಎಂಬ ಸೈನಿಕ ತನ್ನ ಪ್ರೇಯಸಿಗೆ ಬರೆದ ಪ್ರೇಮಪತ್ರದ ಉದ್ದಳತೆ ೭೫ ಅಡಿ. ಈ ಪತ್ರವನ್ನೋದಲು ಅವನ ಪ್ರೇಯಸಿಗೆ ೮ ಘಂಟೆಗಳ ಕಾಲಾವಧಿ ಬೇಕಾಗಿತ್ತು. ಈ ಪತ್ರವನ್ನು ಬರೆಯಲು ಆ ಸೈನಿಕ ಒಂದು ದಿನದ ಅನಾರೋಗ್ಯ ರಜೆಯನು ಪಡೆದುಕೊಳ್ಳಬೇಕಾಯಿತು. ಸ್ವೀಡನ್ನಿನ ಕಾರ್ಲ್ ಸ್ಪೆಂಡ್ರೆಸ್ಥೆನ್ ಎಂಬ ಹೆಸರಿನ ನಾವಿಕನು ಬಾಲ್ಟಿಮೋರ್ ಸ್ಮಿತ್ ಎಂಬ ತನ್ನ ಪ್ರೇಯಸಿಗೆ ಅತೀ ದಟ್ಟವಾದ ಬರವಣಿಗೆಯಿಂದ ಬರೆದ ಪ್ರೇಮಪತ್ರದ ಉದ್ದಳತೆಯು ೧೦ ಫೂಟುಗಳು. ಆ ಪತ್ರದಲ್ಲಿಯ ವಿಷಯ ಕೇವಲ ಪ್ರೇಮಯಾಚನೆಯಾಗಿತ್ತು. ಅವನ ಪ್ರೇಯಸಿಯೂ ಅವನಿಗಿಂತ ಒಂದು ಹೆಜ್ಜೆ ಮುಂದಿದ್ದಳು. ಪ್ರೇಮಿಯ ಪತ್ರಕ್ಕೆ ಉತ್ತರವಾಗಿ ೨೦ ಫೂಟುಗಳ ಪ್ರೇಮಪತ್ರವನ್ನು ಬರೆದು ಕಳಿಸಿದಳು. ಈ ಪತ್ರ ನೋಡಿ ಸಂತಸಗೊಂಡ ಪ್ರೇಮಿ ಮತ್ತೆ ೬೧ ಫೂಟುಗಳಷ್ಟು ಉದ್ದವಾದ ಪ್ರೇಮಪತ್ರವನ್ನು ಬರೆದು ತನ್ನ ಪ್ರಿಯಸಿಗೆ ಕಳಿಸಿದ. ಈ ರೀತಿ ಪ್ರೇಮಪತ್ರಗಳ ವಿನಿಮಯ ಅವರಿಬ್ಬರ ಮದುವೆಯಾಗುವವರೆಗೂ ನಡೆದಿತ್ತು. ಮದುವೆಗೆ ಮೂರು ದಿವಸ ಮುಂಚೆ ಪ್ರೇಮಿಯು ಪ್ರೇಯ



ಸಿಗೆ ಬರೆದ ಪ್ರೇಮಪತ್ರದ ಉದ್ದಳತೆ ೭೫ ಅಡಿಗಳು.

ಎರಡನೆಯ ಮಹಾಯುದ್ಧದ ಸಮಯದಲ್ಲಿ, ಅತಿ ಹೆಚ್ಚು ಪ್ರೇಮಪತ್ರಗಳನ್ನು ಬರೆದು ಜಗತ್ತಿನಲ್ಲಿಯೇ ಮೊದಲನೆಯ ಸ್ಥಾನ ಗಿಟ್ಟಿಸಿಕೊಂಡ ಇಂಗ್ಲಂಡಿನ ಕುಮಾರಿ ಸಿವೆಲ್ ಕೀಡರ್ ಎಂಬವಳು ದಿನಕ್ಕೊಂದರಂತೆ ಪ್ರೇಮಪತ್ರ ಬರೆದು ವಾರಕ್ಕೊಂದು ಸಲ ತನ್ನ ಪ್ರೇಮಿಗೆ ರವಾನಿಸುತ್ತಿದ್ದಳು. ಒಂದು ಪ್ರೇಮಪತ್ರದಲ್ಲಿಯ ಶಬ್ದಗಳ ಸಂಖ್ಯೆ ೭,೦೦೦. ವಾರದ ವರೆಗೆ ಬರೆದ ಪ್ರೇಮಪತ್ರಗಳ ಪುಟಗಳು ೪೦೦ ಮತ್ತು ಈ ಪತ್ರಗಳಲ್ಲಿಯ ಶಬ್ದಗಳ ಸಂಖ್ಯೆ ೧,೬೦,೨೨೦. ಈ ಕುಮಾರಿ ಪ್ರತಿದಿನಕ್ಕೊಂದರಂತೆ ೩ ವರ್ಷ, ೯ ತಿಂಗಳು, ೨೩ ದಿವಸಗಳ ವರೆಗೆ ಸತತವಾಗಿ ಪ್ರೇಮಪತ್ರಗಳನ್ನು ಬರೆದಿದ್ದಳು. ೨೪ನೆಯ ದಿವಸಕ್ಕೆ ಈ ಪ್ರೇಮಿಗಳಿಬ್ಬರ ಲಗ್ನವಾಯಿತು.

## ಅದ್ಭುತವಾದ ಪ್ರೇಮಪತ್ರಗಳು

ಪ್ರೇಮಪತ್ರಗಳ ವಿಷಯದಲ್ಲಿ, ಜಗತ್ತಿನಲ್ಲಿಯೇ ಆಶ್ಚರ್ಯಕರವಾದ ಘಟನೆಯೊಂದು ಆಗಿ ಹೋಯಿತು. ಸನ್ ೧೯೨೪ ರಲ್ಲಿ ಡಾ. ರಾಬಿನ್ಸಸನ್‌ನು, ಮಂಗಳಗ್ರಹದ ನಿವಾಸಿಯಾದ ತನ್ನ ಅಜ್ಞಾತ ಪ್ರೇಯಸಿಗೆ ಅಂಚೆ ತಂತಿ ವಿಭಾಗದ ರೇಡಿಯೋ ತರಂಗಗಳ ಮುಖಾಂತರ ಒಂದು ಪ್ರೇಮ ಸಂದೇಶವನ್ನು ಕಳುಹಿಸಿದ. ಆ ಪ್ರೇಮಸಂದೇಶ ಈ ರೀತಿಯಿತ್ತು: "ಎಲೈ... ಮಂಗಳಗ್ರಹದ ನಿವಾಸಿಯಾದ ನನ್ನ ಪ್ರೇಯಸಿಗೆ... ಪೃಥ್ವಿಯ ನಿವಾಸಿಯಾದ ನಾನು, ನಿನ್ನ ಪ್ರೇಮಿ, ಬೇಡಿಕೊಳ್ಳುವದೇನೆಂದರೆ ನನ್ನ ಪ್ರೇಮಯಾಚನೆಯನ್ನು ಸ್ವೀಕರಿಸು..." ಈ ಸಂದೇಶ ಕಳಿಸಲು ರಾಬಿನ್‌ಸನ್ ಒಂದು ಶಬ್ದಕ್ಕೆ ೧ ಶಿಲ್ಲಿಂಗ್, ೬ ಪೆನ್ನುಗಳಂತೆ ಖರ್ಚು ಮಾಡಿದ್ದ. ಆದರೆ ಆ ಮಂಗಳಗ್ರಹ ನಿವಾಸಿ ಅವನ ಪ್ರೇಯಸಿ(?)ಯಿಂದ ಉತ್ತರ ಬರಲಿಲ್ಲ. ಅದು ಹೇಗೆ ಸಾಧ್ಯ? ಆಗ ರಾಬಿನ್‌ಸನ್‌ನ ಬಾಯಿಯಿಂದ ಹೊರಬಂದ ಶಬ್ದಗಳಿವು: "ನನ್ನ ಪ್ರೇಯಸಿಯ ಇಚ್ಛಾಶಕ್ತಿ ಅತಿ ದುರ್ಬಲವಾಗಿದೆ. ಅದಕ್ಕಾಗಿ ಆಕೆಯಿಂದ ಉತ್ತರವೇ ಬರಲಿಲ್ಲ."

ಬಡೋದೆಯ ಇಂಜನೀಯರಿಂಗ್ ಕಾಲೇಜಿನ ಘಾರೇಸ ಘಾರೇಖ ಎಂಬ ವಿದ್ಯಾರ್ಥಿಯೊಬ್ಬ ಅಜ್ಞಾತ ಪ್ರೇಯಸಿಯೋರ್ವಳಿಗೆ ಪ್ರೇಮಪತ್ರ ಬರೆದು ಜಗತ್ತಿನಲ್ಲಿ ತನ್ನ ದಾಖಲೆಯನ್ನು ಸ್ಥಾಪಿಸಬೇಕೆಂದು ಯೋಚಿಸಿದ್ದಾನೆ. ಪತ್ರದ ಪ್ರಾರಂಭದಲ್ಲಿ ಸಂಬೋಧನೆಗಾಗಿ ಯಾವ ಯುವತಿಯ ಹೆಸರೂ ಇಲ್ಲ. ಈ ಪತ್ರದ ಉದ್ದಳತೆ ೧೮೨೫ ಮೀಟರುಗಳು. ಈ ಪತ್ರದಲ್ಲಿ ೬,೧೧, ೨೬೬ ಶಬ್ದಗಳಿದ್ದು ಬರೆಯಲು ೧೮೦ ದಿವಸಗಳು ಬೇಕಾದವು. ತನ್ನ ಅಜ್ಞಾತ ಪ್ರೇಯಸಿಯು ಒಂದಿಲ್ಲೊಂದು ದಿವಸ ತನಗೆ ಸಿಕ್ಕೇ ಸಿಗುವಳೆಂಬ ಆತ್ಮವಿಶ್ವಾಸ ಆತನಿಗಿದೆಯಂತೆ.

## ಅತಿ ಚಿಕ್ಕ ಪ್ರೇಮಪತ್ರ

ಇನ್ನು ಕೊನೆಯದಾಗಿ ಹೇಳಬೇಕೆಂದರೆ ಅತಿ ಚಿಕ್ಕ ಪ್ರೇಮಪತ್ರದ ವಿಷಯ ತಿಳಿಯದೇ ಇರುವುದು ಉಚಿತವಲ್ಲ. ಪ್ರೇಮಪತ್ರಗಳ ಇತಿಹಾಸದಲ್ಲಿಯೇ ಅತಿ ಚಿಕ್ಕ ಪ್ರೇಮಪತ್ರ ಬರೆದ ಶ್ರೇಯಸ್ಸು ಇಂಗ್ಲಂಡಿನ ಮಾಜಿ ಪ್ರಧಾನಮಂತ್ರಿ ಲಾಯಿಡ್ ಜಾರ್ಜರದು.

ಫ್ರಾನ್ಸಿನ ಓಪೇರಾ ನರ್ತಕಿಯೋರ್ವಳಿಗೆ ಅವರು ಒಂದು ಪ್ರೇಮ ಪತ್ರವನ್ನು ಬರೆದಿದ್ದರು. ಅದರಲ್ಲಿ ಒಂದೇ ಒಂದು ಶಬ್ದವನ್ನು ಬರೆಯಲಾಗಿತ್ತು. ಅದು "ಪ್ರೇಮಯಾಚನೆ". ಅವರ ಪ್ರೇಮಪತ್ರಕ್ಕೆ ಆ ನರ್ತಕಿಯಿಂದ ಉತ್ತರವೂ ಬಂದಿತು. ನರ್ತಕಿಯ ಪತ್ರದಲ್ಲಿಯೂ ಒಂದೇ ಒಂದು ಶಬ್ದವನ್ನು ಬಳಸಲಾಗಿತ್ತು. "ಅಸ್ವೀಕೃತ" ಎಂಬುದೇ ಆ ಶಬ್ದ. ✿



# ಮುಸುವ

ಶಶಿಧರ ವಿಶ್ವಾಮಿತ್ರ

ಮುಸುಡಿಯಲ್ಲಿ ಎಷ್ಟೆಲ್ಲ ಗೆರೆಗಳು ಸಾಧ್ಯವೋ ಅಷ್ಟೆಲ್ಲ ನೆರೆದಿದ್ದುವು. ಅಂಗಡಿಯಾಚೆಗೆ ಗೋಣು ಹಣುಕಲು ಅನುವಾಗುವಂತೆ ಮಂಡಿಯೂರಿ ಸೊಂಟ ಬಗ್ಗಿ ಎದೆ ಎತ್ತಲೋ ತಿರುಗಿ ಮುಂಡ ಮುಂಬಾಗಿಕೊಂಡಿತ್ತು. ಪ್ರಶ್ನೆಯೋ ಉತ್ತರವೋ ಗೊತ್ತಿಗೆ ಬರದ ಸಮಸ್ಯೆಯಂತೆ ಸೊಟ್ಟಗಾಗಿದ್ದ ಆ ದೇಹದ ಸಮತೋಲನವನ್ನು ಕಾಯಲು ಎಡಗೈ ನಿಲುಚೈನನ್ನು ಭದ್ರ ಹಿಡಿದಿದ್ದರೆ ಬಲಗೈ ಪೆಪ್ಪರ್‌ಮೆಂಟು ಡಬ್ಬದ ಮೇಲೂರಿಕೊಂಡಿತ್ತು. ಇಲ್ಲವೆಂದು ಗೊತ್ತಿದ್ದರೂ ಪವಾಡವೋ ಎಂತೋ ಹೇಗೋ ಏನನ್ನೋ ಕಾಣಲಪೇಕ್ಷಿಸಿ, ಇಲ್ಲವೆಂಬುದೇ ತತ್‌ಕ್ಷಣದ ವಾಸ್ತವದಲ್ಲಿಯೂ ಖಾತರಿಯಾದಾಗ ಒಡಲನ್ನೊಳಗೊಳ್ಳುವ ಅಳ್ಳಕವನ್ನು ನಿಟ್ಟುಸಿರು ಅನುಭವಿಸುತ್ತಿತ್ತು. ದೃಷ್ಟಿ ಅರಳಿಕೊಂಬೆಯಿಂದ ವಿದ್ಯುತ್ತಂತಿ ಜೋಡಿಗೆ ಅವನ್ನು ಬಿಗಿ ಕಟ್ಟಿದ್ದ ಪಿಂಗಾಣಿ ಹಿಡಿಕೆಗಳಿಗೆ ಇವನ್ನು ಬಿಗಿ ಬೋಲ್ಟು ಮಾಡಿಸಿಕೊಂಡಿದ್ದ ಕಬ್ಬಿಣದ ಅಡ್ಡ ಅಡ್ಡ ಪಟ್ಟಿಗೆ ಇದನ್ನು ಬೋಲ್ಟು ಮಾಡಿದ್ದ ಕಬ್ಬಿಣದ ಕಂಬಕ್ಕೆ ಇಳಿಯುತ್ತಾ ತಲೆ ಮಟ್ಟಕ್ಕೆ ಬಂದೊಡನೆಯೆ ಟಕ್ಕನೆ ಪೆಪ್ಪರ್‌ಮೆಂಟು ಡಬ್ಬಗಳ ಪಕ್ಕದ ಮರದ ಅಡ್ಡ ಹಲಿಗೆಗೆ ಜಿಗಿದು ಪುನಃ ಅದೇ ದಾರಿ ಹಿಡಿದು ಮೇಲೇರಿ ಅರಳಿಕೊಂಬೆ ಮುಟ್ಟಿತು. ಕತ್ತೂ ಮುಂಡವೂ ಕಣ್ಣುಗಳೂ ದೃಷ್ಟಿಯ ಏಳು ಬೀಳು ಚಲನೆಗೆ ಅನುವಾಗಿದ್ದುವು.

ಬಸವನಿಗೆ ಬಿಟ್ಟ ಗೂಳಿ ಕೊಬ್ಬಿರುತ್ತಲ್ಲ ಅಕೋ ಆ ಗಾತ್ರ ಆ ಕ್ಷೇತ್ರಾಧಿಪತ್ಯ ಆ ನಿರ್ಲಕ್ಷ್ಯ ನೆನಪಿಸುವ ಸೊಂಟದೆತ್ತರ ನಿಲ್ಲುವ ಸರಿಮೈಯ ಬಿಳಿಗೂದಲ ಮುಸುವ. ಅರಳಿಕೊಂಬೆ ರಝಲ್ಲೆಂದು ಮುಂದಿನ ಕ್ಷಣ ಅಡ್ಡ ಪಟ್ಟಿಯ ಮೇಲೆ ಜಿಗಿದು ಆ ಗಾತ್ರದ ಮೈಯನ್ನು ಎರಡೂ ತಂತಿಗಳ ಮಧ್ಯ ತೂರಿಸಿ ಕಂಬಕ್ಕಿಳಿದು ನಿಶ್ಶಬ್ದ ಜಾರಿ ಸುಳಿವೇ ಕೊಡದ ಹಾಗೆ ಮರದ ಅಡ್ಡ ಹಲಿಗೆಯ ಮೇಲೆ ಪೆಪ್ಪರ್‌ಮೆಂಟು ಡಬ್ಬಗಳ ಪಕ್ಕ ದಿಮ್ಮಗೆ ಕೂತುಬಿಡುತ್ತಿತ್ತು. ಮೊದಲ ದಿನ ಕಂಬದಿಂದ ಧಿಗ್ಗನೆ ಜಿಗಿದು ತೂಗುಬಾಳೆ ಗೊನೆ ಹಿಡಿದು ನಿಂತಾಗ ಸಾಬ್ಜಾನಿನ ಚಿತ್ತ ಎಂಥ ಭೀತಿಗೆ ಬಿದ್ದಿತ್ತೆಂದರೆ ಉಚ್ಚೆ ಹೊಯ್ದುಕೊಳ್ಳುವುದು ಬಾಕಿ. ಮೈ ಮಂಡಕ್ಕೆ ಡಬ್ಬದ ಮೇಲೆ ಕುಕ್ಕರಿಸಿ ಹಿಂಬದಿಯ ಹಲಗೆಗೆ ಅಸ್ತವ್ಯಸ್ತ ಅಂಟಿಕೊಂಡಿತ್ತು; ಥರಥರ ನಡುಗು

ತ್ತಿತ್ತು. ಕೈ ಎಲ್ಲೋ ಎಲೆಲ್ಲೊ ಕಣ್ಣ ದೃಷ್ಟಿ ಎಲ್ಲೋ, ಅವ್ಮಾಗೇ. ಸದ್ಯ ಉಚ್ಚೆ ಹೊಯ್ದು ಕೊಂಡಿರಲಿಲ್ಲ. ಮೂರನೆಯದು ಕಿತ್ತು ತಿನ್ನು ವಾಗ ದೃಷ್ಟಿಗೆ ನೋಡುತ್ತಿದ್ದೇನೆಂಬ ತಿಳುವಳಿಕೆ ಒಡನೆಯೆ ಮೈಗೂ ಅಸ್ತವ್ಯಸ್ತ ಕುಕ್ಕರಿಸಿ ಬಿದ್ದುಕೊಂಡಿದ್ದೇನೆಂಬ ತಿಳುವಳಿಕೆ ಆಗಿತ್ತು. ಮೈ ದಡಬಡ ಡಬ್ಬಿ ತಳ್ಳಾಕಿ ಏಳುವ, ಹೊತ್ತಿಗೆ ಏಳುತ್ತಾ ಸಮತೋಲನ ಸಾಧಿಸಿಕೊಳ್ಳುವ ಯತ್ನದಲ್ಲಿದ್ದಂತೆ ಮೆದುಳು ಕಂಗಾಲ ಭಯ ದಿಂದ ಸಡಿಲಿಸಿಕೊಂಡಿತ್ತು. ಕರಡಿಯು ಹಾಗೆ ಕೂತ ಮುಸುವ ಆರಾಮ ಬಾಳೆಗೊನೆಗೆ ಕೈ ಹಾಕಿ ಕಿತ್ತು ಕಿತ್ತು ತಿನ್ನುತ್ತಿತ್ತು. ಅವ್ಮಾಗೇ ನಾಲ್ಕನೇದು ತಿನ್ನುತ್ತಿದೆ ಎಂಬ ನಷ್ಟಕ್ಕಂಜಿ ಬಾಯಿ ತೆರೆದು–ಶೈತಾನಕಾ ಬಚ್ಚಾ ಎಂದು ಕೂಗಿತ್ತು. ಬೆದರಿತೋ ತಿಂದದ್ದು ಸಾಕಾಯಿತೋ ಈ ಅಂಗಡಿಯಿಂದ ತನ್ನ ಪಾಲು ಇಷ್ಟೆಯೆ ಎಂದುಕೊಂಡಿತೋ–ಮುಸುವ ಗೊನೆಯ ಕೈ ಬಿಟ್ಟು ಕಂಬಕ್ಕೆ ಜಿಗಿದು ಸರಾಗ ಏರಿ ಎರಡು ತಂತಿಗಳ ಮಧ್ಯ ಮೈ ತೂರಿಸಿ ಅಡ್ಡ ಪಟ್ಟಿಯೇರಿ ಅರಳಿಕೊಂಬೆಗೆ ಝಿಲ್ಲನೆ ಜಿಗಿದು ಸರಾಗ ನಾಗಾಲು ನಡೆದು ನೆರಳು ಬೆಳಕಾಡುವ ಕವೆಯೊಂದರ ಮೇಲೆ ನಿಶ್ಚಲ ಕೂತ್ತಿದ್ದ ಮುಸುವಿಯ ಬಡ್ಡಿ ಕೂತು ಕೊಂಡಿತ್ತು. ಸಾಬ್ಜಾನಿನ ಮೈ ತಂತಾನೆ ನಿಲು ಚೈನು ಹಿಡಿದೆದ್ದು ಮುಂಬಾಗಿ ಕತ್ತು ಕೊಂಕಿಸಿ ಮುಸುವ ಮೇಲೇರಿ ಕೂರುವುದನ್ನೇ ಅಚ್ಚರಿ ಯಿಂದ ದಿಟ್ಟಿಸಿತು. ಭಯದ ಛಳುಕು ಬಿಟ್ಟ ಮೇಲೆ ಮಾತು ಜಾಗ್ರತವಾಯಿತು. "ಅರೆ ಇಸ್ಕಿ, ಆ ಭಾರಿ ಮೈ ವಿದ್ಯುತ್ತಂತಿ ಜೋಡಿ ನಡುವೆ ತೂರಿದ್ದು ಹೇಗೆ? ಇಳಿದದ್ದು ಹೇಗೆ? ಜಿಗಿದದ್ದು ಹೇಗೆ? ಒಂದು ಎರಡು ಮೂರು ನಾಲ್ಕು ಬಾಳೆ ಹಣ್ಣು ತಿಂದದ್ದು ಹೇಗೆ? ವೇಗ ಚಾತುರ್ಯ ಧೈರ್ಯ, ಅರೆ ಇಸ್ಕಿ, ಹತ್ತು ಘನ ಗಾಂಭೀರ್ಯ ಸಾವಧಾನ. ಅರೆ ಅಲ್ಲಾ ಹನುಮಾನೇ ಸೈ." ನಂತರ ಸಾಬ್ಜಾನಿನ ಮೈ ಎಡ ಪಕ್ಕಕ್ಕೆ ವಾಲಿತು. ಪಕ್ಕದ ಅಂಗಡಿಯಲ್ಲಿ ಕಡಲೆ ಹಿಟ್ಟಿಗೆ ಉಪ್ಪು ಖಾರ ನೀರುಳ್ಳಿ ಹೋಳು ಹಾಕುವುದರಲ್ಲಿ ಮಗ್ನನಾಗಿದ್ದ ಮಾಲಿಂಗುವನ್ನು ಕೂಗಿತು.

"ಮಾಲಿಂಗೂ ಏ."

"ಏನಪಾ?"

"ಮುಸುವಾ..."

ಅರಳಿಮರದ ಕೊಂಬೆಗಳು ಝಿಲಗುಟ್ಟಿ ದುವು. ಮಾಲಿಂಗುವಿನ ಅಂಗಡಿಯ ತಗಡು ಸೂರಿನ ಮೇಲೆ ದಪ್ಪೆಂಬ ಶಬ್ದ. ಮಾಲಿಂಗು ಗೋಣೆತ್ತಿ ನೋಡುವಷ್ಟರಲ್ಲಿ ಸೊಂಟದೆತ್ತರದ ದುಡುಮಿ ಮುಸುವಿ ಬಾಗಿಲನೇರು ಹಿಡಿದು ಕೆಳಜಾರಿ ಅಂಗಡಿಯೊಳಗೆ ನುಗ್ಗಿ ಉಂಡಿಗೆ ಕೈ ಹಾಕಿದ್ದಳು. ಉಂಡಿ, ಒಂದು ಎರಡು...

ಮಾಲಿಂಗುವಿನದಲ್ಲ, ಸಾಬ್ಜಾನಿನ ಬಾಯಿ ಒದರಿತ್ತು. ಎರಡು ಮುಕ್ಕಿ ಮತ್ತೊಂದು ಕೈಯಲ್ಲಿ ಹಿಡಿದೇ ಮುಸುವಿ ಬಂದ ಹಾದಿ ಹಿಡಿದು ಮೇಲೇರಿ ಅರಳಿಮರದ ಕವೆಗೊಂಬೆಯ ಮೇಲೇರಿ ಕೂತು ಸಾವಕಾಶ ಮೆದ್ದಿತು. ಈಗ ಒಂದಲ್ಲ, ಎರಡು ಗೋಣುಗಳು ಕೊಂಕಿದ್ದವು. ಮುಸುವಿಯ ಚಟುವಟಿಕೆಯನ್ನು ಮುಸುವ ಕಂಡಿತೋ ಬಿಟ್ಟಿತೋ, ಕೂತ ಬಳಿ ಮಿಡುಕದೆ ಮಿಸುಕದೆ ಗೊಂಬೆ ಕೂತೇ ಇತ್ತು. ಅರಳಿಯೆಲೆ ಗಳು ತೆಳುಗಾಳಿಗೆ ನಲುಗಾಡಿ ಬಿಸಿಲಿನಲ್ಲಿ ಪಳ ಗುಡುತ್ತಿದ್ದುವು, ಗೋಣು ಕೊಂಕಿದ್ದ ಎರಡೂ ಮುಖಗಳಲ್ಲಿ ಬೆರಗು ಇಟ್ಟಾಡುತ್ತಿತ್ತು.

ಮಾರನೆಗೆ ದೊಣ್ಣೆಯ ಮುನ್ನೆಚ್ಚರಿಕೆ ತೆಗೆದು ಕೊಂಡಿದ್ದರೂ ಯಾವಾಗ ಯಾವ ಮಾಯ ಹಿಡಿದು ಅಂಗಡಿ ಭರ್ತಿ ಕೂತುಬಿಡುತ್ತಿದ್ದು ವೆಂದರೆ ಮೂರು ನಾಲ್ಕು ಮರೆಯಾಗುವ ವರೆಗೂ ದಿಕ್ಕೇ ತೋಚುತ್ತಿರಲಿಲ್ಲ. ನಾಕಾರು ದಿನ ಪಾಠವಾದ ಮೇಲೆ. ಸಾಬ್ಜಾನಿನ ಬಾಯಿ ಮೂರಕ್ಕೆ ಕೂಗಿ ಜೋರುಮಾಡಿತ್ತು. ಅಸಮಾ ಧಾನಪಟ್ಟರೂ ಮುಸುವ ಮೂರಕ್ಕೇ ನಿಲ್ಲಿಸಿ ಹೊರಟುಹೋಗಿತ್ತು. ಎರಡಕ್ಕೆ ಕೂಗಬೇಕಾ ದರೆ ಇನ್ನೆರಡು ವಾರ ಪಾಠವಾಗಬೇಕಾಗಿತ್ತು.



ದೊಣ್ಣೆ ಉಪಯೋಗಿಸುವ ಪ್ರಮೇಯುವೇ ಒದಗಿರಲಿಲ್ಲ.

ಇನ್ನಷ್ಟು ದಿನಗಳಲ್ಲಿ ಸಂಖ್ಯೆ ಒಂದಕ್ಕಿಳಿಯಿತು. ಈ ಹೊತ್ತಿಗೆ ಬಾಗಿಲಲ್ಲಿ ಕರಿ ಮುಸುವನನ್ನು ಕಂಡೊಡನೆ ಅಡರೆದ್ದ ದಿಗಿಲಿನಿಂದ ನುಣುಚಿಕೊಂಡ ಸಾಬ್ಜಾನಿನ ಕೈಗಳಲ್ಲೊಂದು ತೂಗು ಬಾಳೆಗೊನೆ ಹಿಡಿದು ಇನ್ನೊಂದು ದೃಷ್ಟಿ ಸರ್ರನೆ ಚುನಾಯಿಸಿದ್ದನ್ನು ಕಿತ್ತುಕೊಡುತ್ತಿತ್ತು. ಅಂಗಡಿಯ ಮುಂದೆ ಯಾರಿರಲಿ ಇಲ್ಲದಿರಲಿ, ಅಂಜದೆ ಅಳುಕದೆ, ದೈನ್ಯವಿಲ್ಲದೆ ಧಾಷ್ಟಿಕವಿಲ್ಲದೆ ಮುಸುವ ಸಾಬ್ಜಾನ್ ಕೊಟ್ಟದ್ದನ್ನು ಇಸುಕೊಂಡು ಸಾವಧಾನ ತಿನ್ನುತ್ತಿತ್ತು. ಸಾಬ್ಜಾನಿನ, ಅಕಸ್ಮಾತ್ ಅಲ್ಲಿದ್ದವರ ಗೌರವಾದರ ದೃಷ್ಟಿಯನ್ನು ಭರಿಸುತ್ತ ಬಂದ ದಾರಿಯೇರಿ ಹೊರಟು ಹೋಗುತ್ತಿತ್ತು. ಈ ಪಾಠವಾಗಬೇಕಾದರೆ ತಿಂಗಳುಗಳೇ ಉರುಳಿದ್ದುವು.

ದಿನಕ್ಕೊಮ್ಮೆ ಒಂದನ್ನು ಕೊಡಲೇಬೇಕೆಂಬ ಸಾಬ್ಜಾನಿನ ತವಕ ಭಾರವಿತ್ತೋ ತನ್ನ ಪಾಲನ್ನು ದಿನಂಪ್ರತಿ ಕೊಳಬರುವ ಮುಸುವನ

ಗಾಂಭೀರ್ಯ ಘನತರವಾಗಿತ್ತೋ ತಕ್ಕಡಿ ತೂಗಿದರೂ ತಿಳಿಯುದಾಗಿತ್ತು, ತಿಳಿಗೊಳ್ಳದಾಗಿತ್ತು. ಸಾಬ್ಜಾನಿನ ಒಂದು ತಿಳುವಿಗಲ್ಲ, ಇಲ್ಲಿ ಗೊತ್ತಿದ್ದ ಎಲ್ಲರ ತಿಳುವಿಗೂ.

*

ಸಾಬ್ಜಾನಿನ ದೃಷ್ಟಿ ಅರಳಿ ಮರದ ಕೊಂಬೆಯ ಮೇಲೇರಲೇ ಒಲ್ಲದು. ಕರುಳ ಕಿವಿಚು, ಉಸಿರ ಹೊಯ್ತು ಕ್ಷಣಕಾಲ ವಿರಮಿಸಿದಾಗ ಹೊರಗಿಟ್ಟ ದೃಷ್ಟಿಪಾಟ ಅನಾಮತ್ ಇಲ್ಲವಾಯಿತು. ದೃಷ್ಟಿ ಪಾಟವನ್ನು ಹಿಡಿದೆಳೆದ ಏನೋ ಒಂದು ಆ ಕ್ಷಣವನ್ನು, ಕ್ಷಣವನ್ನು? ಸೀಳಿ, ಸೀಳಿ? ಒಡನೆ ಆಳ ಆಳ ಆಳ ಇಳಿಯಹೋಗಿ, ಇಳಿಯಹೋಗಿ? ಗಪ್ಪೆನ್ನುವ ಗಾಭರಿಗೊಂಡು ದಿಗ್ಗನೆ, ದಿಗ್ಗನೆ? ಮೇಲೆ ಚಿಮ್ಮಿ, ಚಿಮ್ಮಿ? ಎಲ್ಲೆಲ್ಲೋ ಅಲೆದು, ಅಲೆದು? ಏನನ್ನೋ ಕಾಣಹೋಗಿ, ಕಾಣ ಹೋಗಿ? ಏನನ್ನೋ ಕೇಳಹೋಗಿ, ಕೇಳ ಹೋಗಿ? ಕಂಗಾಲಾಗಿ ದಿಕ್ಕೆಟ್ಟು, ದಿಕ್ಕೆಟ್ಟು? ದಿಗಿಲಿಗುರುಳಿ ಒಡನೆ ಕ್ಷಣಕ್ಕೆ ಮರಳಿ, ಮರಳಿ ದೃಷ್ಟಿಗಂಟಿಕೊಂಡಿತು. ಮೈಯೀಗ ಸಣ್ಣಗೆ ನಡುಗಿತು. ಮೇಲೇರವೊಲ್ಲದ ದೃಷ್ಟಿ ಕೆಳಗಿಳಿದು, ಕೆಳಗಿಳಿದು ವಿದ್ಯುತ್ತಂತಿಗಳೆರಡರೆಡೆಗಿಳಿಯಿತು. ಹೋಳಾಯಿತು, ಕಲಸಿಕೊಂಡಿತು. ಹಾಯಲ್ಲಾ. ಅಂದುಕೊಂಡ. ಹಾಗೇ ಆಗಬೇಕೆ? ಮನಸ್ಸು ಹಾಳಾದ್ದು ಯಾಕೆ ಕೆಟ್ಟದು ಅಂದುಕೋತದೆ?

ಮೈ ನಡುಕ ಕರುಳಿಗಿಳಿದಂತೆ ಸಾಬ್ಜಾನಿನ ಆ ಏನೋ ಒಂದು ಪ್ರಾಯಶಃ ನಿನ್ನೆ ಬೆಳಿಗ್ಗೆ ಕೆಳಗಿಳಿದು ಬರ ಹೊರಟಿದ್ದ ಮುಸುವನಿಗೆ ವಿದ್ಯುತ್ತಿನ ಗರ ಬಡಿದು ಅರೆಚೀರೂ ಹೊರಡಿಸಲಾಗದಂತೆ ಕೆಳಜಾರಿ ಧೊಪ್ಪೆಂದು ಅಂಗಡಿಯ ಮುಂದೆಯೇ ತೊಪ್ಪೆ ಬಿದ್ದದ್ದನ್ನು ನೆನೆಯಿತು. ಜನ ಸೇರಿದರು. ಹೋ ಎಂದರು. ಹಾ ಎಂದರು. ಏನು ಎತ್ತ ಎಂದರು. ಸಾಬ್ಜಾನಿನ ಮೈ ಕೈ ಬಾಯಿ ಏನೇನೋ ಮಾಡಿ ಎಂಥದ್ದೋ ಹೇಳಿ ಅಳಲಿತ್ತು. ವಿದ್ಯುತ್ತಂತಿ ತೋರಿಸಿತ್ತು. ಮುಸುವ ಇಳಿದುಬರುವ ಎಡೆ ಕೂರುವ ಎಡೆ ಬಾಳೆಗೊನೆ ತೋರಿಸಿತ್ತು. ಜನ ಇಲ್ಲೆಲ್ಲ ಕಣ್ಣಾಡಿಸಿತು. ಮಂದಿ ಜಮಾಯಿಸಿದಂತೆ ಮೆದುಳುಗಳೂ ಕಲಸಿದುವು. ಮರದತ್ತ ವಿದ್ಯುತ್ತಂತಿಯತ್ತ ಅಂಗಡಿ ಮುಂಗಟ್ಟಿನತ್ತ ಗುಡಿಯತ್ತ ಕಣ್ಣಾಡಿಸಿತು. ಮುಸುವ ಮುಸುವಿ ಬಂದಂದಿನಿಂದದ್ದನ್ನು ನೆನೆದು ಇನ್ನೇನೇನನ್ನೋ ನೆರಸಿತು. ಗುಡಿಯ ಹನುಮಾನೇ ಸೈ ಎಂದಿತು. ಮಂದಿಯ ಮೆದುಳುಗಳೊಳಗೆ ಸಾಬ್ಜಾನನ ಮೆದುಳೂ ಅಂಟಿಕೊಂಡಿತ್ತು. ಸಾಬ್ಜಾನಿನ ಮೆದುಳಲ್ಲಿ ಮಂದಿಯ ಮೆದುಳುಗಳೂ ಅಡಗಿಕೊಂಡಿತ್ತು. ಗುಡಿಯ ಮುಂದೆಯೇ ಬೆಂಚಿಟ್ಟು ಕುಂಕುಮ ಅರಸಿನ ಹೂಹಾರ ಊದುಕಡ್ಡಿ ಕರ್ಪೂರದಾರತಿ ಬಾಳೆಹಣ್ಣು, ಹೋ, ಭಕ್ತಾದಿಗಳು ತಾವೇ ಮೆರೆನೆರೆದರು. ಸ್ಥಿರಾಲಂಕಾರದ ಸುತ್ತಿನ ಚೂಲಂಕಾರವಾದರು.

ಒಳಗೊಳಗೇ ಛೆ, ಉಹ್ಞು, ಒಲ್ಲೆ ಎಂದುಕೊಳ್ಳುತ್ತಿದ್ದ ಸಾಬ್ಜಾನಿನ ಕೈಯೇ ಶವದ ಮುಂದೆ ಬಾಳೆಹಣ್ಣು ಚಿಪ್ಪು ನೈವೇದ್ಯಕ್ಕಿರಿಸಿತು. ತಿನ್ನವೊಲ್ಲದ ತನ್ನ ಕಾಣಿಕೆಯತ್ತ ಕಣ್ಣಾಡಿದಾಗಲೆಲ್ಲ ಹಾಯಲ್ಲಾ ಎಂಬ ಉದ್ಗಾರ ಹೊಮ್ಮುತ್ತಿತು.

ಮುಸುವಿಯ ಜ್ಞಾಪಕವಾದದ್ದು ಮಧ್ಯಾಹ್ನದ ಮೇಲೆಯೇ. ಏನೋ ಶಬ್ದವಾಗಿತ್ತು. ಕತ್ತೆತ್ತಿದರೆ ಮುಸುವಿ! ಪ್ರಾಯಶಃ ಇಷ್ಟು ಹೊತ್ತೂ ದಿಮ್ಮಗೆ ಕೂತು ಈಗಷ್ಟೇ ಜಿಗಿದಿರಬೇಕು. ಅರಳಿಕೊಂಡೆ ರಝಲರಝಲ ಶಬ್ದ ಮಾಡಿತು. ಇಷ್ಟು ಹೊತ್ತೂ ಅಲ್ಲೇ ಗೊಂಬೆ ಕೂತಿತ್ತೆ? ಸಂಗಾತಿಗಾದ ಪಾಡು...ತುಂದಿಗೊಂಬೆಯ ವರೆಗೂ ಬಂದದ್ದೇ ಗುಡಿಯೆದುರ ವೇದಿಕೆಯಲ್ಲಿ ಅಲಂಕಾರಗೊಂಡದ್ದನ್ನು ದಿಟ್ಟಿಸಿತು. ಕತ್ತು ಕೊಂಕಿತು. ದಿಟ್ಟಿಸಿತು. ಎರಡು ಹೆಜ್ಜೆ ಹಿಮ್ಮೆಟ್ಟಿತು. ದಿಟ್ಟಿಸಿತು. ಮುಂಬಂದಿತು. ದಿಟ್ಟಿಸಿತು. ಒಡಲಾಳವನ್ನೇನು ಹೊಕ್ಕಿತೋ ವೇದಿಕೆಯ ಮೇಲಿನದಲ್ಲ, ಗುಡಿಯೊಳಗಿನ ಭದ್ರಾಕಾರವೇ ಎದ್ದು ಬರುವ ಹಾಗೆ ಚೀರಿತು. ಅರಳಿ ಮರ ಪೂರ ಗದಗುಟ್ಟಿ ನಡುಗುವ ಹಾಗೆ ದಗದಗ



ದಿಮ್ಮಾಗುಣಿತ ಕುಣಿಯಿತು. ಸಂಜೆಯೇರುತ್ತ ತಿಕ್ಕಲೇ ಹಿಡಿದುಬಿಟ್ಟಿತು. ಕಿರಿಚುತ್ತಿತ್ತು; ಕುಣಿಯುತ್ತಿತ್ತು. ಕೂರುತ್ತಿತ್ತು, ಕಿರಿಚುತ್ತಿತ್ತು. ಕುಣಿಯುತ್ತಿತ್ತು, ನಿಲ್ಲುತ್ತಿತ್ತು. ಅವ ಇಲ್ಲದೆಯೂ ಈ ಒಡಲು ಇಲ್ಲೆಲ್ಲ ಹೀಗೆ ಕೂಗುತ್ತ ಕುಣಿಯುತ್ತಾ, ಕೂರುತ್ತಾ, ಕಿರಿಚುತ್ತಾ, ಕುಣಿಯುತ್ತಾ ನಿಲ್ಲುತ್ತಾ, ಸಪ್ಪಗಾಗೀತ್ತಾ...ರಾತ್ರಿಗೆ ಭರ್ಜರಿ ಮೆರವಣಿಗೆ ಮಾಡಿ ದಫನು ಮಾಡಿದ ಮೇಲೆ...ಮುಸುವಿ ಎಲ್ಲಿ? ಬೆಳಗಿನಿಂದ ಪತ್ತೆಯೇ ಇಲ್ಲವಲ್ಲ. ಎಲ್ಲಿ ಹೋದಳು?

*

ಸಾಬ್ಜಾನಿನ ಆ ಏನೋ ಒಂದು ಇನ್ನೂ ಅಳ್ಳಕವಾಗಿಬಿಟ್ಟಿತು. ನಿಲುಚೈನು ಹಿಡಿದು ವಿದ್ಯುತ್ತಂತಿಯತ್ತ ದೃಷ್ಟಿ ನಾಟಿ ಸೊಟಕಾ ಪಟಕಾ ನಿಂತಿದ್ದ ದೇಹದ ನಡುಕ ಹೆಚ್ಚಿಬಿಟ್ಟಿತು. ಚಿತ್ತ ತನ್ನೂರ ಬಾಲ್ಯಕ್ಕೋಡಿಬಿಟ್ಟಿತು. ಗುಡಿಸಲ ಮುಂದೆ ಕಕ್ಕಸಕ್ಕೆ ಕೂತಿದ್ದ ನಾಯಿ ಕರಿಯು ಇವನೇಳುವುದನ್ನೇ ತಾಳ್ಮೆಯಿಂದ ಕಾಯುತ್ತ ನಿಂತಿತ್ತು. ಗುರ್ರೆಂದೊಡನೆ ದೃಷ್ಟಿ ತಂತಾನೆ ಶಬ್ದ ಕೇಳಿದತ್ತ ಅಂಟಿಕೊಂಡಿತು. ಗುರ್ರೆನ್ನುತ್ತ ಮಾವಿನ ಮರದಿಂದ ಅರಳಿ ಮರಕ್ಕೆ ಗಡವ ಜಿಗಿದಿದ್ದ. ಓ ಅವನ ಧಿಮಾಕೇ ರಾಜಠೀವಿಯೋ, ಹೊಸದಾಗಿ ಯಾಜಮಾನ್ಯ ವಹಿಸಿಕೊಂಡವನೆ ನವಾನವ ಬಲ್ಮೆಯ ಪೊಗರೇ! ಕೊಂಬೆಯ ಮೇಲೆ ನಡೆದುಬಂದಂತೆ ಹತ್ತಿರವಿದ್ದ ಹೆಣ್ಣು ಕೂದಲುಗೋರುತ್ತಿದ್ದ ಮರಿಯನ್ನು

ಬಿಟ್ಟುಕೊಟ್ಟು ಹಿಂದಿರುಗಿ ತಲೆ ತಗ್ಗಿಸಿ ಮೈ ಬಾಗಿಸಿ ಪೃಷ್ಠ ಎತ್ತಿತ್ತು. ಅರಳಿ ಮರದಲ್ಲಿ ಹರಡಿಕೊಂಡಿದ್ದ ಗಂಡುಗಳೆಲ್ಲ ಅರಚಿದ್ದುವು. ಬಿಳಿಗೂದಲ ಕರಿಮುಸುವಗಳಲ್ಲ. ಕಾಕಿ ಹಸಿರು ಗೂದಲು ಬಿಳಿ ಬೂದಿ ಮೈಯ ಕೋತಿಗಳು. ಹಠಾತ್ತನೆ ಗಡವ ರಾಂಗಾಗಿ ಬಿಟ್ಟ. ಒಡ್ಡಿದ್ದ ಪೃಷ್ಠದತ್ತ ತಿರುಗಿಯೂ ನೋಡದೆ ಕಣ್ಣು ಕೆಂಡ ಮಾಡಿಕೊಂಡು ಅರಚಿದ್ದ ಮಂಗಗಳತ್ತ ಗುರ್ರೆಂದ. ಅವೂ ಕಿರಿಚಿದುವು. ಗಡವ ಕೊಂಬೆಯ ಮೇಲೆ ಕಡೆ ಹಾಯ್ದು ಜಕ್ಕಡೆ ನಿಂತು ನಿಂತ ಕಡೆಯೇ ದೆವ್ವಗುಣಿತ ಕುಣಿಯುತ್ತಾ ಕಿರಿಚಿದ. ಮಂಗಗಳೆಲ್ಲ ಬೆದರಿ ಹೇತಲಾಂಡಿ ಕೂಗು ಕಿರಿಚುತ್ತಾ ಕೊಂಬೆ ತುದಿ ಸೇರಿದುವು. ಗಡವ ಇನ್ನೂ ಮತ್ತೂ ಕಿರಚಿ ಕೊಂಬೆಯಿಂದ ಜಿಗಿದು ಅಟ್ಟಿಸಿಕೊಂಡೋಡಿ ಹೊರಟ ರೋಷ ತೋರಿಸಿದೊಡನೆ ಹೇತಲಾಂಡಿಗಳು ಅರಚುತ್ತಾ ಕಿರಿಚುತ್ತಾ ಅರಳಿ ಮರದಿಂದ ಬೇವಿನ ಮರಕ್ಕೆ ಅಲ್ಲಿಂದ ಮಾವಿನ ಮರಕ್ಕೆ ಜಿಗಿದಿದ್ದುವು. ಈ ಗಲಾಟೆ ಕೇಳಿದ್ದೇ ಊರ ನಾಯಿಗಳೆಲ್ಲ ಬೊಗಳಿಕೊಂಡೋಡಿ ಬಂದಿದ್ದವು. ನಾಲಿಗೆ ಹಿಡಿದುಕೊಂಡು ಸಾಬ್ಜಾನನ ಬಡ್ಡೆ ನಿಂತಿದ್ದ ಕರಿಯನೂ ನಾಯಿ ಗುಂಪಿಗೆ ಅಂಟಿಕೊಂಡಿತು. ಕೆಳಗೆ ಜಮಾಯಿಸಿ ಅರಳಿ ಮರದ ಮೇಲೆ ಕಣ್ಣಿಟ್ಟು ಪಕ್ಷ ಪ್ರತಿಪಕ್ಷ ಹಿಡಿದು ಬೊಗಳಾಡತೊಡಗಿದುವು. ಹೇತಲಾಂಡಿಗಳನ್ನು ಉಚ್ಚಾಟನೆ ಮಾಡಿದ್ದರೂ ಗಡವ ಇನ್ನೂ ಕ್ರುದ್ಧನಾಗೇ ಇದ್ದ. ಈಗ ಖಾಲಿಯಾದ ಅರಳಿ ಮರವನ್ನು ಕ್ರೋಧ ತಪ್ತ ಕಣ್ಣುಗಳಿಂದ ದೃಷ್ಟಿಸುತ್ತಿದ್ದವ ಅಚಾನಕ ಸಮೀಪದಲ್ಲಿದ್ದ ಮರಿಯನ್ನು ಕಂಡ. ಬೆದರಿ ಹಿಡಿಯಾಗಿ ಕೊಂಬೆಗಂಟಿಕೊಂಡಿದ್ದ ಪುಕ್ಕಲು ಮರಿ. ಯಾವೋನ ಬೀಜಕ್ಕೆ ಹುಟ್ಟಿದ್ದೋ, ನನ್ನದಲ್ಲದ್ದು ಯಾಕಿರಬೇಕು? ಈಗಿನ ಪುಕ್ಕಲು ಮರಿ ನಾಳೆ ಅದಿಗೋ ಹಾಗೆ ಎದುರು ನಿಂತು ಕಿರಿಚುವ ಹಗೆ. ಗಡವ ಮರಿಯತ್ತ ಕನಲಿ ಕಡೆ ಹಾಯ್ದಿತು. ಪಾರುಗಾಣದ ಮರಿ ಕಿಟಾರನೆ ಕಿರುಚಿತು. ಕಿರಿಚಿಕೊಂಡೇ ತುದಿತುದಿಗೆ ಓಡಿತು. ಇಲ್ಲಿನಿಂದ ಮೇಲಿನ ಕೊಂಬೆ ಎಟುಕುವ ಹಾಗಿರಲಿಲ್ಲ. ಕೆಳಗೆ ಕೊಂಬೆಯೇ ಇರಲಿಲ್ಲ. ಇಪ್ಪತ್ತಡಿ ಕೆಳಗೆ ನೆಲ. ಅಲ್ಲೆಲ್ಲ ಕತ್ತೆತ್ತಿಕೊಂಡು ಬಾಯಿ ಕಿಸಿದುಕೊಂಡು ಉದ್ಧಟ ಬೊಗಳುತ್ತಿರುವ ನಾಯಿಗಳು. ಕೊಂಬೆ ತುದಿಗಂಟಿಕೊಂಡ ಮರಿ ಗಡವ ಬರಿದೆ ಹೆದರಿಸೀತೇ ಎಂದು ಅರೆಕ್ಷಣ ವಿಲಪಿಸಿತು. ಆ ಅರೆಕ್ಷಣದೊಳಗೆ ಕೆಳಗಿನ ನಾಯಿಗಳೇನೋ ಕಂಡವು. ಬಿಸಿ ರಕ್ತದ ಘಮಟು ಹಸಿ ಮಾಂಸದ ರುಚಿ ನಾಲಿಗೆಯಿಂದ ಕಣ್ಣಿಗೇರಿ ಕಣ್ಣುಗಳಲ್ಲಿ ಪಿಪಾಸೆಯ ದೀಪ ಬಗ್ಗನೆ ಹೊತ್ತಿಕೊಂಡಿತು. ಛಂಗಛಂಗನೆ ನೆಗೆಯುತ್ತಾ ಕೆಂಪನ್ನ ನಾಲಿಗೆ ಹಿಸಿದು ಬೆಳ್ಳನ್ನ ಕೋರೆ ಹಲ್ಲುಸಾಲನ್ನು ಮೆರೆಸುತ್ತಾ ಬೇಟೆಯ ಹುಯಿಲು ಬೊಗಳಿದವು. ಗಡವನ ಮತಿಗೂ ಹಲ್ಲೆ ಹಿಡಿಯಿತು. ಇನ್ನೊಂದು ದಾಪಿಟ್ಟು ಕಣ್ಣು ಮೆಡ್ಡರಿಸಿ ಗುರ್ರೆನ್ನಲು ಎಲೆಗಳಿಗಂಟಿಕೊಂಡು ಜೋತು ಬಿದ್ದು ಪ್ರಾಣ ಭಯದಿಂದ ನಡುಗುತ್ತಿದ್ದ ಮರಿ ಕಿರ್ರೋ ಎನ್ನುತ್ತಾ ಎಲ್ಲ ಆಸರೆಗಳನ್ನು ಕೈ ಬಿಟ್ಟೊಡನೆ, ಮೇಲಿನಿಂದ ಬೀಳುವುದನ್ನೇ ಕೆಳಗೆ ಕಾಯುತ್ತಿದ್ದ ಐದಾರು ಬೊಗಳು ಬಾಯಿಗಳೆಲ್ಲ ಛಂಗನೆ ಪೈಪೋಟಿ ನೆಗೆದಿದ್ದವು. ದೊಡ್ಡ ಕೆಂದನ ಬಾಯಿಗೆ ಮರಿ ದಕ್ಕಿತ್ತು. ಬಾಯಿಪಟ್ಟು ಬಿಡದಲೆ ನೆಗೆದಿದ್ದ ಕೆಂದ ಸುತ್ತಿನವು ಮುತ್ತಿಕೊಳ್ಳುವುದನ್ನು ಮೈ ಬಾಲ ಕಣ್ಣು ಕಿವಿ ಹಾಗೆ ಹೀಗೆ ತಿರುಗಿಸಿ ಗುರುಗುಟ್ಟಿ ನಿವಾರಿಕೊಳ್ಳುತ್ತಾ ಊರಾಚೆಗೆ ಓಡಿತ್ತು. ಯಾವ ಮರದಲ್ಲೆಲ್ಲೋ ಮಂಗನೊಂದು ಮರಿ ಚೀರಿಕೊಂಡು ಕೆಳಜಾರಿ ನಾಯಬಾಯಿ ತುತ್ತಾದಾಗ ಹ್ಯಾಗೆ ಚೀರಿತ್ತು, ಹ್ಯಾಗೆ ಚೀರಿತ್ತು; ಅಯ್ಯೋ ಹ್ಯಾಗೆ ಚೀರಿತ್ತು.

ಕಕ್ಕಸಕ್ಕೆ ಕೂತಿದ್ದ ಹುಡುಗನ ದೇಹ ಹೇಲುವುದನ್ನೇ ನಿಲ್ಲಿಸಿ ಎದ್ದೋಡಿಬಿಟ್ಟಿತ್ತು. ಪರಿವೆ ಮೂಡಿದಾಗ ಮೌನ ಕೂತ ಗಡವನ ಹೊರತು ಖಾಲಿಯಾದ ಅರಳಿಮರವನ್ನು ದುಗುಡಭರಿತ ಭೀತಿಯಿಂದ ನೋಡುತ್ತಾ ಗುಡಿಸಿ

ಲಿನ ಹಿತ್ತಿಲಿನಲ್ಲಿ ನಿಂತಿದ್ದುದನ್ನು ಗಮನಿಸಿಕೊಂಡಿತು. ಇನ್ನು ಹೇಲುವುದಾಗಲೇ ಇಲ್ಲ. ಆ ಹೊತ್ತೆಲ್ಲ ಅರಳಿಮರದತ್ತ ದೃಷ್ಟಿಸುವುದೂ ಆಗಿರಲಿಲ್ಲ. ಆಗೀಗ ಹುಡುಗನ ದೇಹ ನಡುಗುತ್ತಿತ್ತು. ಸಂಜೆಗೆ ಜ್ವರ ಬಂದುಬಿಟ್ಟಿತ್ತು. ಅವರಪ್ಪ ಸುಮ್ಮನಿದ್ದ, ಜ್ವರ ಹೆಚ್ಚಲು ಅವ್ವ ಚಿಟಿಕಿ ಹಾಕಿದ್ದಳು. ಇನ್ನೂ ಹೆಚ್ಚಲು ಔಷಧ ಮಾಡಿದ್ದಳು. ಇನ್ನೂ ಹೆಚ್ಚಲು ಅಪ್ಪ ದರ್ಗಾಕ್ಕೆ ಓಡಿದ್ದ, ಇನ್ನೂ ಹೆಚ್ಚಲು ಊರ ಬಾಗಿಲ ಹನುಮಂತನಿಗೂ ಅಡ್ಡಬಿದ್ದು ತಾಯಿತ ಕಟ್ಟಿಸಿದ್ದ.

*

ಹೊತ್ತಿನ ಗೊತ್ತು ಬಿಟ್ಟು ನಿಲುಚೈನು ಹಿಡಿದು ಎಷ್ಟೋ ಹೊತ್ತು ನಿಂತುದಕ್ಕೇನೋ ಸಾಬ್ಜಾನಿನ ಕೈ ನೊಂದಿತು. ದೃಷ್ಟಿ ಬಾಳೆಗೊನೆಯ ಮೇಲಿನ ಕೆಳಗಿನ ಚಿಪ್ಪುಗಳತ್ತ ಖೇದದಿಂದ ನೋಡಿತು. ನಿನ್ನೆ ಮಾಲಿಂಗು ಹೇಳಿದ್ದೇನು? ಒಂದು ಬಾಳೆಹಣ್ಣು ಮಿಕ್ಕಿತು ಬಿಡಲೇ, ಐವತ್ತುಪೈಸಾ ಲಾಭ ಎಂದಲ್ಲವಾ? ಹಾಸ್ಯದ ಧ್ವನಿ. ಆದರೆ ಧ್ವನಿಯಲ್ಲಿ ಹಾಸ್ಯವಿರಲಿಲ್ಲ. ಕಣ್ಣಲ್ಲಿ ಲಾಸ್ಯವಿರಲಿಲ್ಲ. ಎದೆಮುಲ್ಲನಕ, ಅವನೆದೆಯಲ್ಲೂ ಭಯವಿದ್ದೀತೆ? ಮೌನದ ಭಯ. ಕ್ರಂದನದ ಆಚೈರಿನ ಭಯ? ಇಲ್ಲವಾಗುವ ಭಯ ಹುಟ್ಟಿಸುವ ದಿಕ್ಕೇಡು?

ಥಟ್ಟನೆ ಸಾಬ್ಜಾನಿನ ದೇಹ ಮುಂಬಾಗಿತು. ಪಕ್ಕದಂಗಡಿಗೆ ಗೋಣುಕೊಂಕಿಸಿ ಭಜಿ ಕರಿಯುತ್ತಿದ್ದ ಕರಿದೈತ್ಯ ದೇಹವನ್ನು ನಿಟ್ಟಿಸಿತು. ಈ ಭಾರೀ ದೇಹವೂ ಒಂದು ದಿನ ಇಲ್ಲವಾಗಿಬಿಡುವುದೇ?

"ಮಾಲಿಂಗೂ ನಿನ್ನ ಉಂಡೀನೂ ಮಿಗೊ ಹಂಗೆ ಕಾಣತೈತೆ. ಮುಸುವಿ ಹಾಜರಿ ಇಲ್ಲಾ."

ಅಷ್ಟುಗಾತ್ರದ ಮಾಲಿಂಗುವಿನ ದೇಹ ಸಾರ ನೀಗಿಕೊಂಡಂತೆ ಹಿಡಿಯಾಗಿ ತಡಬಡಾಯಿಸಿತು. ಎದುರಲ್ಲೇ ಇದ್ದ ಹನುಮಂತನ ಗುಡಿಯತ್ತ ದೃಷ್ಟಿ ಹಾಯಿಸಿತು. ಬಾಯಿ ತಟ್ಟನೆ ನುಡಿಯಿತು.

"ಬಿಡುತು ಅನ್ನೋ ಸಾಬಣ್ಣಾ, ಒಂದೆರಡು ದಿನ ದುಃಖಮಾಡಿ..."

ಆದೇ ಶೇಂಗಾ ಹೆಡಿಗೆ ಹೊತ್ತು ಬಂದ ಮಂಗಮ್ಮನ ದೇಹ ತನ್ನ ಉದ್ದಗಲಕ್ಕೂ ವೇದನೆ ಹೊಮ್ಮಿಸುತ್ತ ಬಾಯಿಮಾಡಿತ್ತು,

"ಮುಸುವೀನೂ ಉಳಿಯಾಕಿಲ್ಲಾಂತ ಕಾಣ್ತದೆ. ನಿನ್ನೆ ಏಸು ದುಃಖ ಮಾಡುತಾ ಇದ್ದೋಳು ಅಂತ್ಯಣ್ಣನ ಹಿತ್ತಲ ಬೇಲಿ ಬಕ್ಕೆ ಕೂತಾಳೆ. ಅಳೋಣಿಲ್ಲ ಕೂಗೋಣಿಲ್ಲ. ಕಣ್ಣಾಗೆ ನೀರಿಲ್ಲ. ಅವ ಇಲ್ದಾಗೂ ಈ ದೇಹ ಇಲ್ಲೆಲ್ಲಾ ಹ್ಯಾಗೆ ಓಡಾಡಿಕೋತಾ ಇದೇನ್ನೋ ಸಂಕಟ ಹೆಚ್ಚಾಗಿ ಉರೀತಾ ಐತೆ."

ಮಂಗಮ್ಮನ ದೃಷ್ಟಿ ಈಗ ಹನುಮಂತನ ಗುಡಿಯತ್ತ ನಾಟಿತು. ದೇವಾಲಯುದ ಇಡಿಯನ್ನು ಕಾಣಹೋಗಿ ಪರದಾಡಿ ಎಲ್ಲಿಗೋ ನಾಟಿಕೊಂಡಿತು. ಬಾಯಿ ಉದ್ಗರಿಸಿತು.

"ಸಾಯಲಿ ಬದುಕಲಿ. ಮುಸವಿ ಪತಿವ್ರತೆ. ಈ ಕಲಿಗಾಲದಾಗೆ ನಾವು ಇನ್ನೆಂತ ಸೀತಮ್ಮ ನೋರನ್ನ ತರಾನ. ನನ್ನ ಭಂಗ ನೋಡು. ಗಂಡ ಹೋಗಿ ಹದಿನೆಂಟು ವರ್ಷಕ್ಕೆ ಬಂತು. ಶೇಂಗ ಮಾರಿಕೊಂಡೇ ಕಾಲ ಹಾಕಿದೀನಿ. ದಿಕ್ಕಿಲ್ಲ ದಿವಾಳಿ ಇಲ್ಲ ಸತ್ತರೂ ಕೇಳೋನಿಲ್ಲ. ನನ್ನ ಗಂಡ ಮಣ್ಣಾದ ಹೊತ್ತಲ್ಲೆ ಹೋಗಿಬಿಟ್ಟಿದ್ದರೆ ಹೋಗೋ ಕಾರಣವಾದರೂ ಚೆನ್ನಿತ್ತು. ಈಗ ನನ್ನೇ ನಾನು ಒದುಕಿದಿಯಾ ಸತ್ತಿದೀಯಾಂತ ಕೇಳಿಕೊಳ್ಳೋಲ್ಲ ಮುಸುವಿ ಪತಿವ್ರತೆಯೇ ಇಲ್ಲೆಲ್ಲಾ ನಾವು ಇನ್ನೆಂಥಾದ ಕಾಣಾನ?"

•

ಭಕ್ತಾದಿಗಳು ಗುಡಿಗೆ ಹೋಗುವಾಗ ಮುಸುವನೇ ಮುಸುವಿಯೇ ಧಾಳಿಮಾಡಿದ್ದೇ ಇಲ್ಲ ವಾಸ್ತವದಲ್ಲಿ ಧಾಳಿಶಬ್ದ ತಪ್ಪು. ಯಾಕೆಂದರೆ ಯಾರನ್ನು ಪರಚಿದ್ದಿಲ್ಲ ಕೆರೆದಿದ್ದಿಲ್ಲ ಕಚ್ಚಿದ್ದಿಲ್ಲ. ಬಾಳೆಹಣ್ಣೋ ಕಾಯೋ ಉಂಡಿಯೋ ಇಷ್ಟರ ಮೇಲೆ ಇನ್ನೇನೂ ಬೇಡ. ಜೋಡಿಯಾಗಿಯೂ ಇಳಿದು ಬರುತ್ತಿದ್ದಿಲ್ಲ. ಒಂಟೊಂಟಿ, ಮುಸುವ

ನಿಶ್ಶಬ್ದ ನೆರಳೊಡನೆ ಮೈ ಬೆರಸಿ ಜಾರಿಳಿದಾಗ ಮುಸುವಿ ಕೊಂಬೆಯು ಮೇಲೆ ಗೊಂಬೆ ಕೂತಿರುತ್ತಿದ್ದಳು. ಮುಸುವಿ ಇಳಿದಾಗ ಮುಸುವ ಮೇಲಿರುತ್ತಿದ್ದ. ಇತ್ತ ದೃಷ್ಟಿ ಹಾಯಿಸುತ್ತಿರಲಿಲ್ಲ. ತೀರ ನಿರ್ಭಾವ. ಕಣ್ಣು ತೆರೆದೇ ಇದ್ದರೂ, ಕಣ್ಣಾಲಿಗಳೇನು ಸಿನಿಮಾ ಪರದೆಯೋ, ಗುಡಿಯಲ್ಲಿ ನಿಂತವನ ಗುಂಡಿಗಣ್ಣುಗಳೋ? ಆದರೂ ಆ ಘನತೋರ ಮೈಯಿಂದ ಗಾಂಭೀರ್ಯ ಹೊಮ್ಮುತ್ತಿತ್ತು, ಗುಡಿಯಿಂದ ಹೊರಬಂದಾಗ ತಮ್ಮ ನೆರಳೇ ಮೇಲೆದ್ದು ನಿಂತ ಹಾಗೆ ಎದೆಮಟ್ಟ ನಿಂತು ನೈವೇದ್ಯಕ್ಕೆ ಕೈಮಾಡಿದಾಗ, ಸದ್ಭಕ್ತ ಯಾವನೇ ಆಗಿರಲಿ, ಎಂಥ ಗಂಡೆದೆಯವನೆಂದೇ ಹೆಸರು ಹೊತ್ತಿರಲಿ, ಈ ವಿದ್ಯಮಾನದ ಪರಿಚಯಸ್ಥನೇ ಆಗಿರಲಿ; ನೈವೇದ್ಯ ಕೈಬಿಟ್ಟು ಮೈ ಹಿನ್ನೆಳೆದು ಕೈ ಎರಡನ್ನೂ ಅಂಗಲಾಚಲು ಕರಿಗಾಲ ಮೇಲೆತ್ತಿ ಹಣೆ ನಿರಿಗಟ್ಟಿ ಕಣ್ಣಾಲಿ ಬಿರಿದು ಬಾಯಿ ಗಾಭರಿ ಕೂಗಿಬಿಡುತ್ತಿತ್ತು.

ಅಲ್ಲಲ್ಲಿನ ಅಂಗಡಿಯವರ ಕೂಗಿನ ಜೊತೆ ಸಾಬ್ಜಾನೂ ಕೂಗುತ್ತಿದ್ದ "ಏನೂ ಮಾಡೋಲ್ಲರೀ ಕಿರಿಚೋಣೆಲ್ಲ ಪರಚೋಣೆಲ್ಲ, ಹನುಮಂತನ ದಯ ನಿಮ್ಮದೈತೆ" ಬಾಯಿ ಕೂಗುತ್ತಿತ್ತು, ಕೂಗಿದೊಡನೆ ಹಿಂಜರಿಯುತ್ತಿತ್ತು ಗುಡಿಯೊಳಗೆ ತೂರುತ್ತಿತ್ತು, ಒಲ್ಲದೆ ಗೋಪುರಕ್ಕೆ ಹಾರುತ್ತಿತ್ತು. ಇನ್ನೂ ಮೇಲೆರಹವಣಿಸಿ, ಗುಡಿಗೋಪುರನ್ನೂ ಎತ್ತರದ ಮೀನಾರದ ತುದಿಗೆ ಚಿಮ್ಮುತ್ತಿತ್ತು. ಇನ್ನೂ ಮೇಲೇರ ಹವಣಿಸಿ ತಾರಾಡಿ, ಎಂಥಲ್ಲೊ ಒಕ್ಕಡೆ ಅವಿತುಕೊಳ್ಳಲೆಣಿಸಿ ಎಡೆಕಾಣದೆ ಕುಸಿಯುತ್ತಿತ್ತು. ಆಯಾಸಪಡಣಗಿ ಇನ್ನೆಂಥದೋ ಹವಣಿಗಂಟಿಕೊಳ್ಳುತ್ತಿತ್ತು.

ಮುಸುವಿಯೂ ಇಲ್ಲವಾಗಿಬಿಟ್ಟರೆ ಸತ್ತದ್ದು ಅಥವ ಸಾಯುವುದು ಯಾವುದು? ನಿನ್ನೆ ಗದ್ದುಗೆಕೂರಿಸಿ ದಫನಾದುದೋ ಈ ಕ್ಷಣ ಅಂತ್ಯಪ್ಪನ ಹಿತ್ತಿಲಮೇಲೆ ಕುಕ್ಕರಿಸಿಕೊಂಡಿರುವುದೋ ಅಥವ, ಅಥವ ಈಗಿಲ್ಲಿ ನಿಲುಚೈನು ಹಿಡಿದು ನಿಂತಿರುವುದೋ, ಅಥವ ವಿದ್ಯುತ್ತಂತಿ ಜೊಡಿಯೇ ಪಲುಗುಡುವ ಅರಳಿಎಲೆಗಳೋ ಉರಿಸೂರ್ಯನೋ ಗುಡಿ ಹನುಮಂತನೋ ಮೀನಾರೋ ಈ ಎಲ್ಲವೂ ವೇಯೋ?

ಮಾಲಿಂಗೂ ಉದ್ಗರಿಸಿದ್ದ,

"ಒಂದುಂಡಿ ನಂಗುಳುಕೊಂತಾಂತ ನಂಗೆ ಸಂತೋಷನ ಸಾಬಣ್ಣ? ನಮ್ಮೂರ ಮಠದಯ್ಯಗಳ ಹಂಗೆ ಕುರಿತುಕೊಂಡಂದು ಸುರಿತುಕೊಂಡವನ ಮನೆ ಮಾತ್ರ ಭಿಕ್ಷ, ಮಿಕ್ಕಂತೆ ತಗ್ಗಿತ್ತಿ ನೋಡ ಇಂಥ ಅಯ್ಯಗೋಳು ಮನೆಗೆಂದು ಬಂದಾನು, ಮೊರದತುಂಬಾ ಭಿಕ್ಷ ಎಂದು ಹಾಕೇನೂನ್ನೋ ಆಸೆ ಅಕರಾಸ್ಥೆ ಜೋಳಿಗೆ ಒಡ್ಡೋನಿಗಿಂತ ಮರ ಹಿಡಿದು ಸುರಿಯೋನಿಗೇ ಜಾಸ್ತಿ."

ಮುಸುವನಿಗೋ ಮುಸುವಿಗೂ ಹಣ್ಣೋ ಕಾಯೋ ಉಂಡಿಯೋ ಕಳಕೊಂಡ ಭಕ್ತಾದಿಗಳ ಸಂತರದ ಭಾವವೂ ಕೃತಜ್ಞತೆಯೋ, ಕೊಡು ತೃಪ್ತಿ— ಕೊಳುತೃಪ್ತಿ ಎರಡರಾಗೆ ಯಾವುದು ದೊಡ್ಡದು?

*

ಸತ್ತಿತಲ್ಲ ಎಂಬ ದುಃಖ, ಸಾಯಹೊರಟಿದೆಯಲ್ಲ ಎಂಬ ಅಳಲು, ಸಾಯುವುದುಂಟಿರುವುದು ಸತ್ತಿತ್ತು, ಸಾಯುವುದುಂಟಿರುವುದೆಲ್ಲ ಸಾಯಲಿಕ್ಕಿರುವುದೇ; ಆದರೂ ಸಾಯುಬೇಕಲ್ಲ ಎಂಬ ಭಯ ಈ ಭಯಕ್ಕಂಟಿಕೊಂಡ ರೋದನ, ನಿಲುಚೈನು ಹಿಡಿದೇ ನಿಂತಿದ್ದ ಸಾಬ್ಜಾನಿನ ದೃಷ್ಟಿ ಮಂಗಮ್ಮನ ದೃಷ್ಟಿ ಹರಿದತ್ತೆಲ್ಲ ಹರಿಯಿತು, ಅಲ್ಲೆಲ್ಲೂ ನಿಲ್ಲಲಾರದೆ ದಿನೆದಿನದ ಏರಿಳಿಕೆಯಿಂದ ಮುಸುವನ ಮೈ ಕಳೆದೆರಡು ವರ್ಷ ದಿನದಿನ ಕಂಬವನ್ನುಜ್ಜಿ ಉಜ್ಜಿ ನಯಮಾಡಿದ್ದ ಎಡೆಗಳನ್ನೆಲ್ಲ ನವುರಾಗಿ ತಡವುತ್ತಾ, ಕಡೆಗೆ ತೂಗುಬಾಳೆ ಗೊನೆಯ ಮೇಲೆ ನಾಟಿತು. ಕಣ್ಣುಗಳಲ್ಲಿ ನೀರು ತುಂಬಿ ದೃಷ್ಟಿಪಾಟ ಮಂಕಾಯಿತು. ✡



# ಸ್ಕೇಟಿಂಗ್ : ಒಂದು ಸಾಹಸ ಯಾತ್ರೆ

ನಾರಾಯಣ ಭಾದ್ರಿ

"ಭಾರತದ ತರುಣರಿಬ್ಬರು ಮಲೇಶಿಯದ ಯಾತ್ರೆಯನ್ನು ಅಸಾಂಪ್ರದಾಯಕ ರೀತಿಯಲ್ಲಿ ಕೈಗೊಂಡಿದ್ದಾರೆ..."

"ಈಗವರು ಭಾರತ-ಸಿಂಗಪುರ ಯಾತ್ರೆಯ ಎರಡನೆಯ ಹಂತದಲ್ಲಿದ್ದಾರೆ..."

"ಇದೇ ರೀತಿಯಲ್ಲವರು ಜಗತ್ತನ್ನು ಸುತ್ತಬೇಕೆಂದಿದ್ದಾರೆ..."

ಕಳೆದ ಜನೆವರಿಯಲ್ಲಿ ಮಲೇಶಿಯದ 'ದಿ-ಮಲಯಾ ಮೇಲ್' ದೈನಿಕದಲ್ಲಿ ಬಂದ ಸಚಿತ್ರ ವರದಿಯೊಂದರ ಸಾಲುಗಳಿವು.

ಅವರಿಬ್ಬರೂ ಹುಬ್ಬಳ್ಳಿಯ ಹುಡುಗರು. ಸಾಹಸ ಪ್ರವೃತ್ತಿಯವರು. ಐ. ಎಸ್. ಕಾಡಪ್ಪ-ನವರ (೨೮) ಹಾಗೂ ಪಿ. ವೈ. ಜಕ್ಕರೆಡ್ಡಿ (೨೩) ಸಾಮಾನ್ಯ ಕುಟುಂಬಗಳಿಗೆ ಸೇರಿದವರಾದರೂ ಅಸಾಮಾನ್ಯ ಸಾಹಸಕ್ಕೆ ಕೈಹಾಕುವಂಥವರು. ಅಂತೆಯೇ ಈ ಯಾತ್ರೆ ಕೂಡ.

"ಅಸಾಂಪ್ರದಾಯಕ ರೀತಿಯಲ್ಲಿ" ಎಂದು 'ದಿ ಮಲಯಾ ಮೇಲ್' ಬರೆಯಿತಷ್ಟೆ. ಹೌದು, ಈ ಯಾತ್ರೆ ಅಸಾಂಪ್ರದಾಯಕ ರೀತಿಯದೆ: ಇವರಿಬ್ಬರೂ ಈ ಯಾತ್ರೆಯನ್ನು ಪೂರೈಸಿದ್ದು ವಾಹನಗಳ ಮೂಲಕವಲ್ಲ- ರೋಲರ್ ಸ್ಕೇಟಿಂಗ್ ಮೂಲಕ!

ಅಂತಾರಾಷ್ಟ್ರೀಯ ಯುವವರ್ಷಕ್ಕಿದು ಈ ತರುಣ ಜೋಡಿಯ ಅರ್ಥಪೂರ್ಣ ಕೊಡುಗೆ.

ರೋಲರ್ ಸ್ಕೇಟಿಂಗಿನಲ್ಲಿ ಹೊಸ ದಾಖಲೆಯನ್ನು ಸ್ಥಾಪಿಸುವ ಮತ್ತು ಈ ಮೂಲಕ ವಿದೇಶ ಯಾತ್ರೆಯನ್ನು ಪೂರೈಸುವ ಹಂಬಲದ ಜತೆಗೆ ರೋಮಾಂಚಕಾರಿ ಅನುಭವ ಪಡೆಯುವ ಇವರ ಇಚ್ಛೆಯೂ ಈ ಸಾಹಸಕ್ಕೆ ಕಾರಣ.

ಹಾಗೆ ನೋಡಿದರೆ ಇವರಿಗೆ ದೀರ್ಘಾಂತರ ಸ್ಕೇಟಿಂಗ್ ಯಾತ್ರೆ ಹೊಸದೇನಲ್ಲ. ೧೯೮೧ರಲ್ಲಿ ಹುಬ್ಬಳ್ಳಿ-ಮೈಸೂರು (೭ ದಿನಗಳಲ್ಲಿ ೫೬೦ ಕಿಲೋಮೀಟರ್) ಮತ್ತು ೧೯೮೨ರಲ್ಲಿ ಹುಬ್ಬಳ್ಳಿ-ಮುಂಬಯಿ(೮ ದಿನಗಳಲ್ಲಿ ೬೫೦ ಕಿಲೋಮೀಟರ್)ಗಳ ಯಾತ್ರೆ ಪೂರೈಸಿ ಆತ್ಮವಿಶ್ವಾಸ ಗಳಿಸಿಕೊಂಡದ್ದುಂಟು.

ಸುಮಾರು ಏಳು ವರ್ಷಗಳ ಹಿಂದೆ ಬೆಂಗಳೂರು ನೋಡಲು ಹೋದ ಕಾಡಪ್ಪನವರ ರಾಜಧಾನಿಯ ಬೀದಿಗಳಲ್ಲಿ ಸುತ್ತುತ್ತ ಕಂಠೀರವ ಕ್ರೀಡಾಂಗಣಕ್ಕೆ ಬಂದರು. ಅಲ್ಲಿ ಪುಟ್ಟ ಮಕ್ಕಳು, ಹೈಸ್ಕೂಲು ಹುಡುಗರು, ಕಾಲೇಜು ತರುಣರು ಉರುಳುವ ಗಾಲಿಗಳ ಬೂಟು ಕಟ್ಟಿಕೊಂಡು ವೇಗದಿಂದ ಸಾಗುತ್ತ ಆನಂದಿಸುತ್ತಿರುವುದು ಕಾಣಿಸಿತು. ಅಚ್ಚರಿಯಿಂದ ಅದು ಏನು, ಎಲ್ಲಿ

# SKATING TO ADVENTURE

TWO young men from India are seeing parts of Malaysia in a most unconventional way

I.S. Kadappanavar, 28, and P.Y. Jakkareddy, 23, are out to set a roller skating record as they try to complete the second leg of their trip from India to Singapore.

They started on Dec 23 from Hubli, a town in Karnataka State and roller skated their way to Madras, a distance of 800 km in nine days.

## Indian duo out to see the world on wheels

The Indian leg of the trip was sponsored by a local firm which took care of lodging and food. From Madras they flew to Kuala Lumpur three days ago.

The second part of the adventure-cum-record setting trip started yesterday from Kuala Lumpur to Malacca, Batu Pahat and then Singapore. They were flagged off at the Stadium Negara by National Sports Council Director-General Noh



Motorists slow down as the two skaters travel along Jalan Sungai Besi

ಸಿಗುತ್ತದೆ ಮುಂತಾಗಿ ಕೇಳಿ ತಿಳಿದುಕೊಂಡು ಒಂದು ಜತೆ ಗಾಲಿ ಬೂಟುಗಳನ್ನು (ಸ್ಕೇಟ್ಸ್) ಕೊಂಡು ತಂದು ಹುಬ್ಬಳ್ಳಿಯ ಬೀದಿಗಳಲ್ಲಿ ಏಳುತ್ತ ಬೀಳುತ್ತ ಸ್ಕೇಟಿಂಗ್ ಸಾಧನೆಗೆ ತೊಡಗಿದರು. ಆ ಏಳು ಬೀಳುಗಳ ಫಲವೇ ೧೯೮೨ ರಲ್ಲಿ ಹುಬ್ಬಳ್ಳಿಯಲ್ಲಿ 'ಕರ್ನಾಟಕ ರೋಲರ್ ಸ್ಕೇಟಿಂಗ್ ಕ್ಲಬ್' ಸ್ಥಾಪನೆ. ಈಗ ೨೫ಕ್ಕೂ ಹೆಚ್ಚು ಸದಸ್ಯರುಳ್ಳ ಈ ಕ್ಲಬ್ಬಿನ ಕ್ರಿಯಾಶೀಲತೆಗೆ ಎಲ್ಲೆಡೆಯಿಂದಲೂ ಪ್ರೋತ್ಸಾಹ ದೊರೆಯುತ್ತಿದೆ. ಮಹಾನಗರ ಸಭೆ ನೆಹರೂ ಮೈದಾನದಲ್ಲಿ ರೋಲರ್ ಸ್ಕೇಟಿಂಗಿಗೆಂದು ಪ್ರತ್ಯೇಕ ಜಾಗವನ್ನು ಸಿದ್ಧಪಡಿಸಿ ಈ ಕ್ಲಬ್ಬಿಗೆ ನೀಡಿದೆ. ಅಷ್ಟೇ ಅಲ್ಲ, ಹುಬ್ಬಳ್ಳಿಯಲ್ಲಿ ಮತ್ತೊಂದು ಸ್ಕೇಟಿಂಗ್ ಕ್ಲಬ್ಬಿನ ಸ್ಥಾಪನೆಯೂ ಆಗಿದೆ. ಈ ಮೂಲಕ ಮೊದಲ ಸ್ಕೇಟಿಂಗ್ ಕೋಚಿಂಗ್ ಕ್ಯಾಂಪನ್ನು ೧೯೮೨ ರಲ್ಲಿ ನಡೆಸಿ ೧೨-೧೮ ವಯೋಮಾನದ ಹುಡುಗರಲ್ಲಿ ಸ್ಕೇಟಿಂಗ್ ಹವ್ಯಾಸ ಬೆಳೆಸಿದ ಕಾಡಪ್ಪನವರ ಮತ್ತು ಜಕ್ಕರೆಡ್ಡಿ ಈಗ ಎರಡನೆಯ ಕ್ಯಾಂಪನ್ನು ಏರ್ಪಡಿಸುತ್ತಲಿದ್ದಾರೆ.

ದೀರ್ಘಾಂತರ ಸ್ಕೇಟಿಂಗ್ ಯಾತ್ರೆಯಲ್ಲಿ ಒಟ್ಟು ಮೂವರಿರುತ್ತಾರೆ: ಇಬ್ಬರು ಸ್ಕೇಟಿಂಗ್ ಪಟುಗಳು, ಒಬ್ಬ ಸ್ಕೇಟಿಂಗ್ ಬಾರದ ಸೈಕಲ್ ಸಂಗಾತಿ. ಮೈಸೂರು ಮತ್ತು ಮುಂಬಯಿಗಳಿಗೆ ಇವರಿಬ್ಬರ ಜತೆಗೆ ಸೈಕಲ್ ಸಂಗಾತಿಯಾಗಿದ್ದವರು ವೆಂಕಟೇಶ ನಂದಗಾವಿ. ಆದರೆ ಹುಬ್ಬಳ್ಳಿ-ಸಿಂಗಪುರ ಯಾತ್ರೆಯ ಸಂದರ್ಭದಲ್ಲಿ ವೆಂಕಟೇಶ ದ್ಯಾಂಪುರ ಸೈಕಲ್ ಸಂಗಾತಿಯಾದರು.

"ಯಾಕೆಂದರೆ ನಂದಗಾವಿಯವರು * ಮುಂಬಯಿ ಯಾತ್ರೆಯ ನಂತರ ಸ್ಕೇಟಿಂಗ್ ಕಲಿತರು. ಹೀಗೆ ಸ್ಕೇಟಿಂಗ್ ಕಲಿತವರು ಸೈಕಲ್ ಸಂಗಾತಿಯಾಗಿ ಬರುವುದರಿಂದ ಜನ ಸಂಶಯ ಪಡುವಂತಾಗುತ್ತದೆ," ಎಂಬುದು ಕಾಡಪ್ಪನವರ ಅಭಿಪ್ರಾಯ.

೧೯೮೫ರ ಜನವರಿಯಲ್ಲಿ ಬಿಹಾರದ ಕೆಲವು ಯುವಕರು ಪಾಟ್ನಾದಿಂದ ದಿಲ್ಲಿಯವರೆಗಿನ ೧೨೦೦ ಕಿಲೋಮೀಟರ್ ಅಂತರವನ್ನು ೧೮ ದಿನಗಳಲ್ಲಿ ಸ್ಕೇಟಿಂಗ್ ಮೂಲಕ ಕ್ರಮಿಸಿ ರಾಷ್ಟ್ರೀಯ ದಾಖಲೆ ಸ್ಥಾಪಿಸಿದ ವರದಿಯೊಂದು ಪತ್ರಿಕೆಗಳಲ್ಲಿ ಬಂತು. ಈ ಜೋಡಿಗೆ ಆ ದಾಖಲೆಯನ್ನು

ಜಕ್ಕರೆಡ್ಡಿ ಮತ್ತು ಕಾಡಪ್ಪನವರ



---

* ← 'ದಿ ಮಲಯಾ ಮೇಲ್' ವರದಿ

ಮುರಿದು ಹೊಸ ದಾಖಲೆ ಸ್ಥಾಪಿಸುವ ಆಶೆಯುಂಟಾಯಿತು. ಕೂಡಲೇ ದಿಲ್ಲಿಯ 'ಇಂಡಿಯನ್ ಸ್ಕೂಲ್ ಆಫ್ ಸ್ಕೇಟಿಂಗ್'ನ್ನು ಸಂಪರ್ಕಿಸಿ, ಅದು ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಸ್ಕೇಟಿಂಗ್ ವೇಗವನ್ನು ದಾಖಲೆ ಮಾಡಿಕೊಳ್ಳಲು ಒಪ್ಪಿಕೊಳ್ಳುವಂತೆ ಬಿನ್ನವಿಸಿದರು. ಇದೇ ಇವರ ಭಾರತ-ಸಿಂಗಪುರ ಸ್ಕೇಟಿಂಗ್ ಯಾತ್ರೆಯ ಹಿನ್ನೆಲೆ.

ಮೊದಲಿನೆರಡು ದೀರ್ಘಾಂತರ ಯಾತ್ರೆಗಳ ಅನುಭವದ ಹಿನ್ನೆಲೆಯಲ್ಲಿ ಹುಬ್ಬಳ್ಳಿ–ಸಿಂಗಪುರ ಯಾತ್ರೆಗಾಗಿ ಸುಮಾರು ಆರು ತಿಂಗಳಿಂದ ಪೂರ್ವಸಿದ್ಧತೆಗೆ ತೊಡಗಿತು ಈ ಜೋಡಿ. ಹೊಸ ದೇಶ. ಅಲ್ಲಿಯ ನಕ್ಷೆ ತಂದರು. ರಸ್ತೆಗಳ ಬಗ್ಗೆ ವಿವರ ಕಲೆ ಹಾಕಿದರು. ಮುಖ್ಯ ಪಟ್ಟಣಗಳ ಕುರಿತು ಮಾಹಿತಿ ತೆಗೆದುಕೊಂಡರು. ಹುಬ್ಬಳ್ಳಿಯಿಂದ ಮದ್ರಾಸು–ಅಲ್ಲಿಂದ ಕೌಲಾಲಂಪುರಕ್ಕೆ ವಿಮಾನಯಾನ–ನಂತರ ಸಿಂಗಪುರದವರೆಗೆ ಮತ್ತೆ ಸ್ಕೇಟಿಂಗ್. ಒಟ್ಟು ೧೩೦೦ ಕಿಲೋಮೀಟರ್ ಸ್ಕೇಟಿಂಗ್ ಮಾಡಬೇಕು. ಸರಾಸರಿ ದಿನವೊಂದಕ್ಕೆ ೧೦೦ ಕಿಲೋಮೀಟರ್ ಅಂತರ ಕ್ರಮಿಸಬೇಕು ಎಂದು ಯೋಚಿಸಿಕೊಂಡರು.

ಯೋಚಿಸಿದ್ದೇನೋ ಸರಿ, ಆದರೆ ವೆಚ್ಚಕ್ಕೇನು ಮಾಡುವುದು? ಅಲ್ಲಿಗೆ ಹೋಗಿ ಬರಲು ತಲಾ ೧೫೦೦೦ ರೂಪಾಯಿಗಳಿಗೂ ಹೆಚ್ಚು ಹಣ ಬೇಕು. ಅಂತಾರಾಷ್ಟ್ರೀಯ ಮಟ್ಟದ ಸಾಮಾಜಿಕ ಸಂಸ್ಥೆಗಳನ್ನು ಸಂಪರ್ಕಿಸಿ ಸಹಾಯ ಕೋರಿದರಾದರೂ, ಆ ಹುಲಿ ಸಿಂಹಗಳು ತಿರುಗಿಯೂ ನೋಡಲಿಲ್ಲ. ಕೆಲವೆಡೆಯಂತೂ ಹಣದ ಅವಶ್ಯಕತೆಯಿರುವ ಇಂಥ ಸಾಹಸಕ್ಕೇಕೆ ಕೈಹಾಕುತ್ತೀರೆಂಬ ಪ್ರಶ್ನೆ. ಏನೇ ಆದರೂ ಇವರು ಉತ್ಸಾಹಗೆಡಲಿಲ್ಲ. ಆದರೆ ಹಿಂದುಸ್ತಾನ ಲೀವರ್ ಕಂಪನಿ ಮಾತ್ರ ಇವರಿಬ್ಬರಿಗೆ ಹುಬ್ಬಳ್ಳಿಯಿಂದ ಮದ್ರಾಸ್ ತಲಪುವವರೆಗಿನ ಎಲ್ಲ ವೆಚ್ಚವನ್ನು ಭರಿಸಲು ಮುಂದೆ ಬಂದಿತು. ಈಶ್ವರೀಯ ವಿಶ್ವವಿದ್ಯಾಲಯದವರು ಮಲೇಶಿಯ–ಸಿಂಗಪುರದ ತಮ್ಮ ಶಾಖೆಗಳಿಗೆ ಪತ್ರ ಬರೆದುಕೊಟ್ಟರು. ಮಿತ್ರರು ಸಾಲವನ್ನು ಕೊಟ್ಟರು.

೧೯೮೫ರ ಡಿಸೆಂಬರ್ ೨೩ರ ಮುಂಜಾನೆ ಆಕಾಶವಾಣಿಯ ಪ್ರದೇಶ ಸಮಾಚಾರದಲ್ಲಿ ಈ ಸ್ಕೇಟಿಂಗ್ ಯಾತ್ರೆಯ ಸುದ್ದಿ ಬಿತ್ತರವಾಗುತ್ತಿದ್ದ ಹಾಗೆಯೆ ಈ ಜೋಡಿ ತನ್ನ ಗುರಿಯತ್ತ ಸಾಗ ತೊಡಗಿತು. ಸ್ಕೇಟಿಂಗ್ ಕ್ಲಬ್ಬುಗಳ ಸದಸ್ಯರು, ಗುರುಹಿರಿಯರು, ಹಿತೈಷಿಗಳು, ಹಿಂದುಸ್ತಾನ ಲೀವರ್ ಕಂಪನಿಯ ಅಧಿಕಾರಿಗಳು ಶುಭ ಕೋರಿದರು.

ಕಾಡಪ್ಪನವರ–ಜಕ್ಕರೆಡ್ಡಿಯವರ ಜತೆಗಿದ್ದ ಸೈಕಲ್ ಸಂಗಾತಿ ವೆಂಕಟೇಶ್ ದ್ಯಾಂಪುರ. ಸ್ಕೇಟಿಂಗ್ ಪಟುಗಳಿಬ್ಬರ ಬಟ್ಟೆ–ಬರೆ ಬ್ಯಾಗುಗಳ ಹೊರೆ ಹೊತ್ತಿದ್ದರು. ದಾರಿಯಲ್ಲಿ ದಾಹ ಹಿಂಗಿಸಿಕೊಳ್ಳಲು, ಹಸಿವು ಪರಿಹರಿಸಿಕೊಳ್ಳಲು ಅವಶ್ಯ ಸಾಮಗ್ರಿಗಳೂ ಈ ಸೈಕಲ್ಲನ್ನೇರಿದ್ದವು.

ಈ ಮೂರು ಜೀವಗಳ ಸಾಹಸಕ್ಕೆ ಮನೆಯಲ್ಲಿ ಬಂದ ವಿರೋಧ, ಅದನ್ನೆಲ್ಲ ಪರಿಹರಿಸಿಕೊಂಡ ರೀತಿಯನ್ನೆಲ್ಲ ನೆನಪಿಸಿಕೊಳ್ಳುತ್ತ ಸಾಗಿದ್ದರು ಮೂವರೂ. ಕಾಡಪ್ಪನವರ ತಂದೆ–ತಾಯಿಗೆ ಒಬ್ಬನೇ ಮಗ. ವಿವಾಹಿತ. ಮನೆಯಲ್ಲಿ ಮಡದಿ ಹಾಗೂ ಮುದ್ದು ಮಗು ಬೇರೆ. ರಸ್ತೆ ಅಪಘಾತಗಳ ಸುದ್ದಿ ಓದಿ ಕೇಳಿ ನೋಡಿ ಅನುಭವವಿರುವ ತಂದೆ–ತಾಯಿ ಈ ಯಾತ್ರೆ ಬೇಡವೆಂದಿದ್ದರು. ಜಕ್ಕರೆಡ್ಡಿ ಕಾರ್ಪೊರೇಶನ್ ಬ್ಯಾಂಕ್ ಉದ್ಯೋಗಿ. ಅವರಿಗೂ ಇದೇ ಪರಿಸ್ಥಿತಿ. ಹಣಕಾಸು ಸಂಸ್ಥೆಯೊಂದರಲ್ಲಿ ಉದ್ಯೋಗಿಯಾಗಿರುವ ವೆಂಕಟೇಶ ದ್ಯಾಂಪುರ ಎದುರಿಸಬೇಕಾಗಿ ಬಂದದ್ದೂ ಇಂಥದೇ ಸನ್ನಿವೇಶ. ಆದರೆ ಲಕ್ಷಕ್ಕೊಬ್ಬರು ಮಾಡಬಹುದಾದ ಇಂಥ ಸಾಹಸಕ್ಕೆ ಹರಿಸಿ ಕಳಿಸಿ ಎಂಬ ಹುಡುಗರ ಹಟಕ್ಕೆ ಹಿರಿಯರು ಮಣಿಯಲೇಬೇಕಾಯಿತು.

ಮಾರ್ಗ ಮಧ್ಯದಲ್ಲಿ ಈ ಸ್ಕೇಟಿಂಗ್ ಪಟುಗಳಿಗೆ ಎಲ್ಲೆಡೆಯೂ ಹಾರ್ದಿಕ ಸ್ವಾಗತ, ಆತಿಥ್ಯಗಳು ದೊರೆಯುತ್ತಿದ್ದವು. ಕೆಲವರು ಇವರಿಗೆ ಹಣ್ಣುಹಂಪಲು ನೀಡಿದರೆ ಇನ್ನು ಕೆಲವರು ಪಾನೀಯ ನೀಡುತ್ತಿದ್ದರು. ಅವರಿಗೆಲ್ಲ ಪ್ರದೇಶ ಸಮಾಚಾರದ ಸುದ್ದಿ ಕೇಳಿ ಇವರ ಬಗ್ಗೆ ಕುತೂಹಲವುಂಟಾಗಿತ್ತು. ಈ ಜೋಡಿ ಆತಿಥೇಯರೆದುರು ಒಂದೈದು ನಿಮಿಷ ಸ್ಕೇಟಿಂಗ್ ಕಸರತ್ತು ಮಾಡಿ ರಂಜಿಸುತ್ತಿತ್ತು. ಒಂದೆಡೆಯಂತೂ ಈ ಜೋಡಿಗೆ ಆದಂಥ

ಆತ್ಮೀಯ ಸ್ವಾಗತ ಕಾದಿತ್ತೆಂದರೆ ಹೆದ್ದಾರಿಯಲ್ಲಿ ೧೦ ನಿಮಿಷ ವಾಹನ ಸಂಚಾರ ನಿಲ್ಲಬೇಕಾಯಿತು!

ನಾಲ್ಕನೆಯ ದಿನ ಅಂದರೆ ೧೯೮೫ರ ಡಿಸೆಂಬರ್ ೨೭ರಂದು ಬೆಂಗಳೂರು ತಲಪಿದ ಇಬ್ಬರೂ ವಿದೇಶ ಪ್ರವಾಸಕ್ಕಾಗಿ ವಿಸಾ, ವಿಮಾನ ಟಿಕೆಟ್ಟು ಮುಂತಾದುವನ್ನು ಪಡೆದರು.

ಬೆಂಗಳೂರು ತಲಪುವ ವರೆಗೆ ಕನ್ನಡ ಜನತೆಯ ಆದರಾಭಿಮಾನಗಳಿಂದ ರಸ್ತೆ ಸವೆದದ್ದೇ ತಿಳಿಯದ ಈ ತರುಣರಿಗೆ ಮದ್ರಾಸ್ ದಾರಿ ಅಷ್ಟು ಸುಗಮವಾಗಲಿಲ್ಲ. ಭಾಷೆಯ ತೊಂದರೆ ಬೇರೆ. ರಸ್ತೆಯೂ ಕಚ್ಚಾ. ಇದಿರ್ಗಾಳಿಯಿಂದಾಗಿ ವೇಗ ಕುಂಠಿತಗೊಳ್ಳುತ್ತಿತ್ತು. ಆ ಹೆದ್ದಾರಿಯ ಮೇಲೆ ೧೫–೨೦ ಭೀಕರ ಅಪಘಾತಗಳಾದುದನ್ನು ಕಂಡಾಗ ಎದೆ ಡವಗುಟ್ಟುತ್ತಿತ್ತು. ಒಂದು ಕ್ಷಣ ತಂದೆ ತಾಯಿಯರು, ಸ್ನೇಹಿತರು ಈ ಸಾಹಸಕ್ಕೆ ಕೈಹಾಕಬೇಡಿರೆಂದು ಹೇಳಿದ್ದೇಕೆಂಬುದು ನೆನಪಾಗಿ ಒಳಗೊಳಗೇ ಅಳುಕಿದರೂ, ಅರ್ಧ ಈಜಿ ಮತ್ತೆ ಹೊರಟಲ್ಲಿಗೇ ಮರಳುವ ಮೂರ್ಖತನವನ್ನಿವರು ಮಾಡಲಿಲ್ಲ.

ಕೋಲಾರ, ಚಿತ್ತೂರು, ಪೆರಂಬೂರು ಮಾರ್ಗವಾಗಿ ಮದ್ರಾಸಿನತ್ತ ಧಾವಿಸುತ್ತಿದ್ದರು ಈ ಮೂವರೂ. ಕೋಲಾರದಿಂದ ಚಿತ್ತೂರು ೧೨೦ ಕಿಲೋಮೀಟರು ದೂರ. ಕೋಲಾರ ದಾಟುವ ಹೊತ್ತಿಗೆ ಕೆಲವರು "ಮಾರ್ಗ ಬಹಳ ಕಠಿಣ. ಮಂಜು ಮುಸುಕಿರುತ್ತದೆ. ನೀವು ಹೇಗೆ ಪಾರಾಗುತ್ತೀರೊ" ಎಂದು ಹೆದರಿಸಿದ್ದರು.

ಪ್ರತಿ ಊರಲ್ಲಿ ಅಲ್ಲಿಯ ಪೋಲೀಸ್ ಸ್ಟೇಶನ್ನಿಗೆ ಹೋಗಿ ತಾವು ಹೊರಟಿರುವ ಉದ್ದೇಶ ಇತ್ಯಾದಿ ವಿವರಿಸಿ ತಮ್ಮಲ್ಲಿರುವ ಪುಸ್ತಕದಲ್ಲಿ ಪೋಲೀಸ್ ಅಧಿಕಾರಿಯ ಸಹಿ ಹಾಕಿಸಿಕೊಂಡು ಮುಂದೆ ಹೋಗುವುದು ವಾಡಿಕೆ. "ನೀವಿಬ್ಬರೂ ಮುಂದೆ ನಡೆಯಿರಿ. ನಾನು ಸಹಿ ಹಾಕಿಸಿಕೊಂಡು ಬರುತ್ತೇನೆ" ಎಂದು ಸೈಕಲ್ ಸಂಗಾತಿ ಹೇಳಿದ. ಸರಿ, ಇವರು ಮುಂದೆ ಹೊರಟರು.

ಮಂಜು ಮುಸುಕಿದ ರಸ್ತೆ. ಇವರಿಬ್ಬರೂ ಮುಂದೆ ಸಾಗಿದರು. ಸುಮಾರು ೨೦ ಕಿಲೋಮೀಟರ್ ದೂರವನ್ನು ಕ್ರಮಿಸಿದರೂ ಸೈಕಲ್ ಸಂಗಾತಿ ಬರಲೇ ಇಲ್ಲ. ನಾಲ್ಕಡಿ ಅಂತರದ ವ್ಯಕ್ತಿ–ವಸ್ತು ಕೂಡ ಕಾಣದಂಥ ದಟ್ಟ ಮಂಜು. ಅಪರಿಚಿತ ರಸ್ತೆ. ಎಲ್ಲಿಯಾದರೂ ವಾಹನದ ಸದ್ದು ಕೇಳಿದರೆ ನಿಂತಲ್ಲಿಯೇ ನಿಂತುಬಿಡಬೇಕು. ಅಪಘಾತದ ಭಯ. ಒಂದೆಡೆ ಕುಳಿತು ಸಂಗಾತಿಗಾಗಿ ಕಾದರು. ಆತ ಇನ್ನೂ ಬಾರದಾದಾಗ ಕಾಡಪ್ಪನವರ ಮತ್ತೆ ಕೋಲಾರದ ಹಾದಿ ಹಿಡಿದರು. ಕೋಲಾರಕ್ಕೆ ೧೦ ಕಿಲೋಮೀಟರ್ ದೂರವಿರುವಾಗ ಆಗಿರಬಹುದಾದುದರ ಅಂದಾಜು ಸಿಕ್ಕಿತು ಕಾಡಪ್ಪನವರಿಗೆ. ಅಲ್ಲಿ ಒಂದು ರಸ್ತೆ ಬೇರೆಡೆ ಹೊರಳಿತ್ತು. ಬಹುಶಃ ಸೈಕಲ್ ಸಂಗಾತಿ ಆ ದಾರಿ ಹಿಡಿದು ಹೋಗಿರಬೇಕು.. ಎಂದುಕೊಂಡದ್ದು ನಿಜವಾಗಿತ್ತು. ಅರ್ಧ ಗಂಟೆಯ ನಂತರ ದ್ಯಾಂಪುರ ಸೈಕಲ್ ಸಹಿತ ಆ ದಾರಿಗೆ ಹಿಂತಿರುಗಿ ಬಂದರು.

ಮತ್ತೆ ಮೂವರೂ ಒಂದಾಗಿ ಮುನ್ನಡೆಯ ತೊಡಗಿದರು.

ಮುಂದೆ ಇಳಿಜಾರು ರಸ್ತೆ. ಘಾಟಿನ ಪ್ರದೇಶ. ಇಲ್ಲಿ ಸ್ಕೇಟಿಂಗ್ ತುಂಬ ಅಪಾಯಕಾರಿ. ಬ್ರೇಕ್ ಹಚ್ಚುತ್ತ ಹೋಗಬೇಕು. ಇಳಿಜಾರಿನಲ್ಲಿ ವೇಗವಾಗಿ ಹೊರಟಾಗ ಒಂದು ಕಾಲಿನ ಸ್ಕೇಟ್ ಬೂಟಿನ ಹಿಂಬದಿ ಎತ್ತಿ, ತುದಿಯನ್ನು ರಸ್ತೆಗೆ ತೆರಿಸಿಕೊಳ್ಳುತ್ತ ಸಾಗಬೇಕು. ಈ ಸಂದರ್ಭದಲ್ಲಿ ಒಂದೇ ಕಾಲಿನಲ್ಲಿ ಸ್ಕೇಟ್ ಮಾಡಬೇಕು. ಮುಗ್ಗರಿಸಿದರೆ ಮುಗಿಯಿತು.

ಹಾಗೆ ನೋಡಿದರೆ ಇಳಿಜಾರಿಗಿಂತ ಏರು ರಸ್ತೆಗಳಲ್ಲಿ ಸ್ಕೇಟಿಂಗ್ ಸುಲಭ ಎನ್ನುತ್ತಾರೆ ಇವರಿಬ್ಬರೂ. ಇಲ್ಲಿ ಏರುತ್ತಿದ್ದಂತೆ ಹಿಂದೆ ಜಾರದಿರಲು T ಆಕಾರದಲ್ಲಿ ಆಗಾಗ ಕಾಲು–ಗಳನ್ನಿಡಬೇಕಾಗುತ್ತದೆ. ಅಂದರೆ ಪಾದಗಳನ್ನು T ರೀತಿಯಲ್ಲಿ ಜೋಡಿಸಿದರೆ ಹಿಂದೆ ಜಾರುವುದಿಲ್ಲ.

ಆಗಲೇ ಆರು ದಿನಗಳ ಯಾತ್ರೆ ಮುಗಿದಿತ್ತು. ಮದ್ರಾಸ್ ಸಮೀಪಿಸುತ್ತಿತ್ತು. ಮುಂಜಾನೆ ೭ ಗಂಟೆಗೆ ಸ್ನಾನ ಟಿಫಿನ್ ಮುಗಿಸಿ ಹೊರಟರೆ ಸುಮಾರು ೩೦-೪೦ ಕಿಲೋಮೀಟರ್ ಸಾಗುವುದು ಆಮೇಲೆ ಊಟ, ಐವತ್ತು ನಿಮಿಷ ವಿಶ್ರಾಂತಿ,

ಮತ್ತೆ ಕಣ್ಣೆಳಕಿರುವವರೆಗೆ ಸ್ಕೇಟಿಂಗ್. ಇದು ಈ ಸ್ಕೇಟಿಂಗ್ ಪಟುಗಳ ದಿನಚರಿ. ಅಲ್ಲಲ್ಲಿ ಹಿಂದುಸ್ಥಾನ ಲೀವರ್ ಕಂಪನಿಯ ಪ್ರತಿನಿಧಿಗಳು ಇವರಿಗೆ ಊಟ ತಿಂಡಿಯು, ವಸತಿಯು ವ್ಯವಸ್ಥೆ ಮಾಡಿರುತ್ತಿದ್ದರು. ಉಳಿದೆಲ್ಲ ಕಾರ್ಯಕ್ರಮ ಮೊದಲೇ ಯೋಚಿಸಿಕೊಂಡಿದ್ದಂತೆ ನಡೆದಿತ್ತು.

೧೯೮೬ರ ಜನವರಿ ೧೧ರಂದು ಮದ್ರಾಸ್ ತಲಪಿದ ಸ್ಕೇಟಿಂಗ್ ಪಟುಗಳು ಬೆಳಗಿನ ಚಳಿ, ಮಧ್ಯಾಹ್ನದ ಬಿಸಿಲು, ರಾತ್ರಿಯ ಕತ್ತಲೆಯನ್ನು ಸಹಿಸಿಕೊಂಡು ಯಾತ್ರೆಯ ಮೊದಲ ಹಂತವನ್ನು ಮುಗಿಸಿದ್ದರು. ಕೆಲವೆಡೆ ರಾತ್ರಿ ಟಾರ್ಚ್ ಹಚ್ಚಿ-ಕೊಂಡು ಸ್ಕೇಟ್ ಮಾಡಿದ್ದೂ ಉಂಟು.

ಮದ್ರಾಸಿನಲ್ಲಿ ಮೂರು ದಿನ ವಿಶ್ರಾಂತಿ. ಮಲೇಶಿಯಕ್ಕೆ ಹೊರಡಲು ವಿಮಾನಯಾನದ ಪೂರ್ವಸಿದ್ಧತೆ ಮಾಡಿಕೊಂಡರು. ಒಂಬತ್ತು ದಿನಗಳ ವರೆಗೆ ಸೈಕಲ್ ಸಂಗಾತಿಯಾಗಿ ಬಂದ ವೆಂಕಟೇಶ ದ್ಯಾಂಪುರ ಭಾರವಾದ ಮನಸ್ಸಿನೊಂದಿಗೆ, ಸ್ನೇಹಿತರಿಬ್ಬರಿಗೂ ಅವರ ಮುಂದಿನ ಯಾತ್ರೆಗೆ ಎಲ್ಲ ಯಶ ಕೋರಿ, ಬೀಳ್ಕೊಟ್ಟು ಹುಬ್ಬಳ್ಳಿಗೆ ಹೊರಟರು.

ಗಾಲಿಗಳ ಮೇಲೆ ಉರುಳಿ ಬಂದ ಈ ಜೋಡಿ ಗಾಳಿಯಲ್ಲಿ ತೇಲಿ ಕೌಲಾಲಂಪುರದಲ್ಲಿಳಿದಾಗ ದಣಿದ ದೇಹಗಳಿಗೆ ತಂಪೆರೆಯುವಂಥ ಮಳೆ ಸುರಿಯುತ್ತಿತ್ತು. ವಿಮಾನದಿಂದ ಇಳಿದು ಹವಾ ನಿಯಂತ್ರಿತ ಟ್ಯೂಬ್ ರಸ್ತೆಗಳ ಮೂಲಕ ನಿಲ್ದಾಣದ ಹೊರಗೆ ಬಂದು ತಮ್ಮ ಸಾಮಾನು ಪಡೆದಾಗಲೇ ಇವರಿಗೆ ಮಳೆ ಬೀಳುತ್ತಿರುವುದು ಗೊತ್ತಾದದ್ದು.

ಹುಬ್ಬಳ್ಳಿಯ ಈಶ್ವರೀಯ ವಿಶ್ವವಿದ್ಯಾಲಯದವರು ಕೌಲಾಲಂಪುರ ಸಿಂಗಪುರದ ತಮ್ಮ ಕೇಂದ್ರಗಳಿಗೆ ಬರೆದುಕೊಟ್ಟ ಪತ್ರಗಳು ಇವರಿಬ್ಬರಿಗೂ ಊಟ–ವಸತಿಯ ಸಮಸ್ಯೆಯನ್ನು ಬಗೆಹರಿಸಿದವು. ಹುಬ್ಬಳ್ಳಿಯ ಹೊಸಮಠದ ಚಂದ್ರಶೇಖರ ಸ್ವಾಮಿಗಳು ಸಿಂಗಪುರದ 'ಏಶಿಯನ್ ಕಾನ್ಫರೆನ್ಸ್ ಫಾರ್ ರಿಲಿಜನ್ ಆ್ಯಂಡ್ ಪೀಸ್'ಗೆ ಬರೆದುಕೊಟ್ಟ ಸಂದೇಶವೂ ಇವರಿಗೆ ಶ್ರೀರಕ್ಷೆಯಾಗಿತ್ತು. (ಇದೇ ಸ್ವಾಮಿಗಳು ಈ ಜೋಡಿಯನ್ನು ಹುಬ್ಬಳ್ಳಿಯಿಂದ ಹರಸಿ ಕಳಿಸಿದ್ದರು.)

ಮಲೇಶಿಯದ ತಮ್ಮ ಎರಡನೆಯ ಹಂತದ ಯಾತ್ರೆ ಪ್ರಾರಂಭಿಸಲು ಸಿದ್ಧತೆ ಮಾಡಿಕೊಳ್ಳಲು ಅಲ್ಲಿಯ ಪೋಲೀಸ್ ಇಲಾಖೆಯ ಸಹಕಾರ ಅವಶ್ಯವಾಗಿತ್ತು. ಅಲ್ಲಿಯ ರಸ್ತೆಗಳು ಸದಾ ಭಾರಿ ವಾಹನ ಸಂಚಾರಗಳಿಂದೊಡಗೂಡಿರುವುದರಿಂದ ಸ್ಕೇಟಿಂಗಿಗೆ ಅವಕಾಶ ನೀಡುವುದಿಲ್ಲವೆಂದು ಇಲಾಖೆಯ ಅಧಿಕಾರಿಗಳು ಖಂಡಿತವಾಗಿ, ಹೇಳಿಬಿಟ್ಟರು. ಆದರೆ, ಈ ದಾಖಲೆ ಸ್ಥಾಪಿಸುವ ಸಾಹಸಕ್ಕೆ ದಯವಿಟ್ಟು ಸಹಕರಿಸಿ ಎಂದು ವಿನಂತಿಸಿಕೊಂಡು. ಭಾರತೀಯ ಪೋಲೀಸರಿಂದ ಪಡೆದ ಸಹಿಗಳ ಪುಸ್ತಕವನ್ನು ತೋರಿಸಿದರಂತೆ. ಇವರ ಯಾತ್ರೆಯ ವಿವರಗಳನ್ನು ಪಡೆದು, ಇವರ ಸಾಹಸದ ದಾಖಲೆಗಳನ್ನು ಪರಿಶೀಲಿಸಿದ ಪೋಲೀಸ್ ಅಧಿಕಾರಿಗಳು ಕೂಡಲೇ ಇವರಿಬ್ಬರನ್ನೂ ಅಲ್ಲಿಯ ನ್ಯಾಶನಲ್ ಸ್ಪೋರ್ಟ್ಸ್ ಕೌನ್ಸಿಲ್ಲಿನ ಮಹಾ ನಿರ್ದೇಶಕರಾದ ನೋಹ ಅಬ್ದುಲ್ಲಾರ ಬಳಿ ಕರೆದೊಯ್ದರು. ಅದೊಂದು ಮರೆಯಲಾರದ ಅನುಭವ ಇವರಿಬ್ಬರ ಪಾಲಿಗೆ.

ನೋಹ ಅಬ್ದುಲ್ಲಾ ಮಲೇಶಿಯಕ್ಕೆ ಬಂದ ಈ ಭಾರತೀಯ ತರುಣ ಕ್ರೀಡಾಪಟುಗಳನ್ನು ತುಂಬ ಪ್ರೀತಿಯಿಂದ ಕಂಡರು. ತಮ್ಮ ದೇಶದಲ್ಲಿ ಸ್ಕೇಟಿಂಗ್ ಮಾಡಲು ಎಲ್ಲ ವ್ಯವಸ್ಥೆ ಮಾಡಿ ಇವರಿಬ್ಬರ ಬೆನ್ನು ತಟ್ಟಿದರು. ಅಂದೇ ಕೌಲಾಲಂಪುರದ ನೇಗಾರಾ ಸ್ಟೇಡಿಯಮ್ಮಿನಲ್ಲಿ ಸಮಾರಂಭವೊಂದನ್ನೇರ್ಪಡಿಸಿ ಈ ಸ್ಕೇಟಿಂಗ್ ಪಟುಗಳನ್ನು ಬೀಳ್ಕೊಡಲಾಯಿತು. ನಗರದ ಸೀಮೆ ದಾಟುವವರೆಗೂ ಇವರಿಗೆ ಬೆಂಗಾವಲಾಗಿ ಮುಂಗಾವಲಾಗಿ ಟ್ರಾಫಿಕ್ ಕಂಟ್ರೋಲರರೊಬ್ಬರು ಮೋಟರ್ ಸೈಕಲ್ ಮೇಲೆ ಸಾಗಿ ವಾಹನ ಸಂಚಾರವನ್ನು ನಿಯಂತ್ರಿಸಿ ಇವರಿಗೆ ದಾರಿ ಮಾಡಿ ಕೊಟ್ಟರು. ಸುಮಾರು ೧೫–೨೦ ಕಿಲೋಮೀಟರುಗಳವರೆಗೆ ಅವರು ಈ ಜೋಡಿಗೆ ಸಂಗಾತಿಯಾಗಿದ್ದರು.

"ನಮ್ಮಲ್ಲಿ ಪ್ರಧಾನಿಯೋ ರಾಷ್ಟ್ರಪತಿಯೋ ಬಂದಾಗ ಸೈರನ್ ಬಾರಿಸುತ್ತ ಮುಂದೆ ಸಾಗುತ್ತಾರಲ್ಲ ಎಸ್ಕಾರ್ಟ್‌ಗಳು, ನಾವಲ್ಲಿ ಆ ಕ್ಷಣ ಅದೇ ಅನುಭವ ಪಡೆದೆವು" ಎನ್ನುತ್ತಾರೆ ಈ ತರುಣರು.

ತಮ್ಮ ಬಟ್ಟೆ ಬರೆಗಳು, ಬಿಸ್ಕೀಟು ಬ್ರೆಡ್ ಮತ್ತು ತಂಪು ಪಾನಿಯುಗಳಿದ್ದ ಬ್ಯಾಗನ್ನು ಬೆನ್ನ ಮೇಲೆ ಹೊತ್ತು ಸ್ಕೇಟ್ ಮಾಡುತ್ತ ಸಾಗುವ ಈ ಜೋಡಿಯನ್ನು ಮಲೇಶಿಯನ್ನರು ತುಂಬ ಅಚ್ಚರಿಯಿಂದ ಕಾಣುತ್ತಿದ್ದರು. ಆದರೆ ಇಲ್ಲಿ ನಾವು ವಿದೇಶಿಯರನ್ನು 'ಕಾಣುವ' ರೀತಿ ಮಾತ್ರ ಆದಾಗಿರಲಿಲ್ಲ, ತುಂಬ ಗೌರವ ತೋರು ವಂಥ ಜನ ಅವರು.

"ಮಲೇಶಿಯದ ಜನಕ್ಕೆ ಸ್ಕೇಟಿಂಗ್ ಗೊತ್ತಿಲ್ಲ" ಎನ್ನುತ್ತಾರೆ ಕಾಡಪ್ಪನವರ. ಹೀಗಾಗಿ ಇದು ಏನು ಎಂತು ಎಂದೆಲ್ಲ ಭಾವನೆಗಳ ಮೂಲಕ ಇಂಗ್ಲಿಷ್ ಭಾಷೆಯ ಮೂಲಕ ಅವರಿಗೆ ವಿವರಿಸು ತ್ತಿದ್ದರು. ಮಲಯಾ ಭಾಷೆ ಇವರಿಗೆ ಬಾರದು. ಅವರಿಗೋ ಆ ಭಾಷೆ ಬಿಟ್ಟರೆ ಬೇರೆ ಭಾಷೆ ಅರಿಯದು. ಹೀಗಾಗಿ ಈ ಜೋಡಿಗೆ ಹೋಟಲುಗಳಲ್ಲಿ, ಕ್ಯಾಂಟೀನುಗಳಲ್ಲಿ ತಮಗೇನು ಬೇಕೆಂಬುದನ್ನು ಹೇಳಲು, ಕೆಲವಾದರೂ ಮಲಯನ್ ಶಬ್ದಗಳನ್ನು ಕಲಿಯುವುದು ಅವಶ್ಯ ವಾಯಿತು. 'ಐ (ನೀರು), 'ಮಕ್ಕನ್' (ಊಟ), 'ಸುಸು' (ಹಾಲು) ಮುಂತಾದ ಪದ ಗಳನ್ನು ಕಲಿತರು. ಆದರೆ ಇಲ್ಲಿ ಕನ್ನಡದ ಪದ-ಗಳನ್ನು ವಿದೇಶೀಯನೊಬ್ಬ ಉಚ್ಚರಿಸಿದಾಗ ನಮ್ಮವರು ನಗುವಂತೆ ಅಲ್ಲಿ ಇವರು ಮಲಯನ್ ಪದಗಳನ್ನುಚ್ಚರಿಸಿದಾಗ ಅವರು ನಕ್ಕು ಸಮ್ಮಾ-ನಾಗುತ್ತಿದ್ದರು.

ಕೌಲಾಲಂಪುರದಿಂದ ಸಿಂಗಪುರಕ್ಕೆ ಹೋಗುವ ಜೋಡು ರಸ್ತೆಯಲ್ಲಿ ಸೊರಂಬನ್ ಎಂಬೊಂದು ಊರು. ಹೈವೆಯಾದ್ದರಿಂದ ವಾಹನ ಸಂಚಾರ ಎಡೆಬಿಡದೆ ಸಾಗಿರುತ್ತದೆ. ಅದರಲ್ಲೂ ಇಲ್ಲಿ ಮಾತ್ರ ಸಿಂಗಲ್ ವೇ, ಸ್ಕೇಟಿಂಗಿಗೆ ತಕ್ಕುದಾದ ರಸ್ತೆಯಲ್ಲ.

ಸೊರಂಬನ್ ತಲಪಿದಾಗ ಅಲ್ಲಿಯ ರೋಟರಿ ಸಂಸ್ಥೆಗೆ ಹುಬ್ಬಳ್ಳಿಯ ರೋಟರಿ ಸಂಸ್ಥೆಯಿಂದ ತಂದ ಪತ್ರ ಉಪಯೋಗಕ್ಕೆ ಬಾರದಾಯಿತು. ಇವರಿಗೆ ಉಳಿದುಕೊಳ್ಳಲು ಜಾಗ ಬೇಕಾಗಿತ್ತು. ಬೇರೆಲ್ಲೂ ಯಾರೂ ಗೊತ್ತಿಲ್ಲ. ಏನು ಮಾಡುವು ದೆಂದು ಯೋಚಿಸುತ್ತಿರುವಂತೆಯೇ ಒಬ್ಬ ಸಿಖ್ ಪೋಲೀಸ್ ಭೆಟ್ಟಿಯಾದ. ಆತ ತನ್ನ ತಂದೆಯ ಕಾಲದಿಂದಲೂ ಅಲ್ಲಿಯೇ ನೆಲೆಸಿದವ. ಅವನನ್ನು ಕಂಡು ತಮಗೆ ನೆರವು ಬೇಕೆಂದು ಕೇಳಿದರು. ಆ ರಾತ್ರಿ ಈ ಜೋಡಿಗೆ ಅಲ್ಲಿಯ ಗುರುದ್ವಾರದಲ್ಲಿ ವಸತಿಯ ವ್ಯವಸ್ಥೆ ಮಾಡಿಕೊಟ್ಟ ಆ ಸಿಖ್ ಪೋಲೀಸು.

ಸೊರಂಬನ್‌ನಿಂದ ಮಲಕ್ಕಾ. ಇಲ್ಲಂತೂ ಎಂದೂ ಕಂಡರಿಯದ ಜನಮನ್ನಣೆ ಇವರಿಗೆ. ಆಗಲೆ 'ಮಲಯಾ ಮೇಲ್' ಇವರ ಸಾಹಸ ವೃತ್ತವನ್ನು ಪ್ರಕಟಿಸಿತ್ತು. ಸ್ಕೇಟ್ ಮಾಡುತ್ತ ಹೊರಟಿದ್ದಂತೆಯೇ ಮುಸಾ ಅವಾಲ್ ಎಂಬ ಮ್ಯಾರಾಥಾನ್ ಓಟಗಾರ ಭೆಟ್ಟಿಯಾದ. ತುಂಬ ಅಭಿಮಾನದಿಂದ ಮಾತನಾಡಿ ಸುಮಾರು ಐದು ಕಿಲೋಮೀಟರ್‌ವರೆಗೆ ಇವರೊಂದಿಗೆ ಓಡುತ್ತ ಬಂದ. ಇವರಿಗೆ ಸಹಾಯಕವಾಗುವ ವಿಳಾಸಗ-ಳನ್ನು ನೀಡಿ ಬೀಳ್ಕೊಡುವಾಗ ಆತನ ಕಣ್ಣಂಚಿ ನಲ್ಲಿ ನೀರು ಮೂಡಿತ್ತು. ಮಲಕ್ಕಾ ಪೋಲೀಸ್ ಸ್ಟೇಶನ್ನಿನಲ್ಲಿ ಸಹಿ ಹಾಕಿಸಿಕೊಂಡು ಬರಲು ಹೋದ ಇವರಿಗೆ ಭಾರತವನ್ನೆಂದೂ ನೋಡಿ-ರದ, ಭಾರತೀಯ ಮೂಲದ ಪೋಲೀಸ್ ಕಾನ್-ಸ್ಟೇಬಲ್ ಎಸ್. ಗುಣರಾಜ ಎಂಬವರು ಸಿಕ್ಕು ಹಳೆಯ ಗೆಳೆಯರಂತೆ ನಡೆದುಕೊಂಡರು. ಹೆಂಡತಿ




'ನಾ ಬರೆದ ಕಾದಂಬರಿ' ಸಿನಿಮಾ ತೆಗೆದೇ ನಾನೀ ಸ್ಥಿತಿಗೆ ಬಂದದ್ದು ಮಾರಾಯಾ!

ಹೆರಿಗೆಗೆಂದು ತಾಯಿಮನೆಗೆ ಹೋದ ಕಾರಣ ಇವರಿಬ್ಬರನ್ನೂ ತನ್ನ ಮನೆಗೆ ಕರೆದೊಯ್ದು ಒಂದು ದಿನ ಇಟ್ಟುಕೊಂಡು ಉಪಚರಿಸಿದ. ಮಲಕ್ಕಾದ ಐತಿಹಾಸಿಕ ಸ್ಥಳಗಳನ್ನೆಲ್ಲ ಸಂದರ್ಶಿಸಲು ಸಹಾಯ ನೀಡಿದ. ದಾರಿಯಲ್ಲೊಮ್ಮೆ ಕಾರಿನಲ್ಲಿ ಬಂದ ಒಬ್ಬ ಅಭಿಮಾನಿಯಂತೂ ತಲಾ ಐದೈದು ಡಾಲರ್ ನೀಡಿ ಪ್ರೋತ್ಸಾಹಿಸಿ ಹೋದ.

ಮಲಕ್ಕಾದಿಂದ ಬಾಟೂಪಹಾರ್, ಜೋಹರ ಬರು ಮೂಲಕ ಸಿಂಗಪುರಕ್ಕೆ ಸಾಗಬೇಕು. ಮಲಕ್ಕಾ ತಲಪುವವರೆಗಂತೂ ಸ್ಕೇಟಿಂಗ್ ತುಂಬ ಕಷ್ಟ ಸಾಧ್ಯ. ಅಲ್ಲಿಯವು ಹುರುಬರುಕಾದ ರಸ್ತೆಗಳು. ಬ್ರೇಕ್ ಹಾಕಿದರೆ ವಾಹನಗಳು ಕೂಡಲೇ ನಿಂತುಬಿಡಲು ಇಂಥ ರಸ್ತೆಗಳಿದ್ದರೆ ಅನುಕೂಲ. ಆದರೆ ಸ್ಕೇಟಿಂಗಿಗೆ ಈ ರಸ್ತೆ ಸುಲಭವಲ್ಲ. ಹೀಗಾಗಿ ರಾತ್ರಿಯಾದರೂ ಸ್ಕೇಟ್ ಮಾಡಿ ಅಂತರ ಕ್ರಮಿಸಲೇಬೇಕೆಂಬ ಹಟ ಇವರದು.

ಅಕ್ಕಪಕ್ಕದಲ್ಲಿ ರಬ್ಬರ್ ತೋಟಗಳು, ಹಸಿರು ಭೂಮಿ, ಆಹ್ಲಾದದಾಯಕ ವಾತಾವರಣ. ಆದರೆ ಬೇರೆಡೆ ಲಕ್ಷ್ಯ ಹರಿಸುವ ಹಾಗಿಲ್ಲ. ಸರ್‍ರನೆ ಬಂದು ಹೋಗುವ ವಾಹನಗಳ ಭಯ. ಅವು ಬಂದು ಹೋದರೆ ಸಾಕು ಅವುಗಳ ಸೆಳೆತಕ್ಕೆ ದೇಹದ ಸಮತೋಲ ತಪ್ಪುತ್ತಿತ್ತು. ಇಂಥದರಲ್ಲಿ ರಾತ್ರಿಯೂ ಸ್ಕೇಟ್ ಮಾಡಬೇಕು. ಎದುರಿನಿಂದ ಬರುವ ವಾಹನಗಳ ಪ್ರಖರ ಬೆಳಕು ಕಣ್ಣುಕ್ಕಿ ಎದುರಿನ ರಸ್ತೆಯೂ ಕಾಣದಂತಾಗಿಬಿಡುತ್ತಿತ್ತು. ಆದಕ್ಕಾಗಿ ಅಲ್ಲಲ್ಲಿ ನಿಂತು ಮೊದಲೇ ಕಣ್ಣು ಮುಚ್ಚಬೇಕಾಗುತ್ತಿತ್ತು.

ಇಷ್ಟು ವಾಹನ ಸಂಚಾರವಿದ್ದರೂ ಒಂದೇ ಒಂದು ಅಪಘಾತ ಕಣ್ಣಿಗೆ ಬೀಳಲಿಲ್ಲ ಈ ಜೋಡಿಗೆ.

೧೯೮೬ರ ಜನವರಿ ೧೧ರಂದು ಸಿಂಗಪುರ ತಲಪಿದ ಇವರಿಗೆ ದೊರೆತ ಪ್ರೋತ್ಸಾಹ, ಪತ್ರಿಕೆಗಳ ಸಹಕಾರ, ಜನತೆಯ ಮೆಚ್ಚುಗೆ ಹೊಸ ಉತ್ಸಾಹ ತುಂಬಿದವು. ನಾಲ್ಕು ದಿನಗಳ ಹಿಂದೆ 'ದಿ ಮಲಯಾ ಮೇಲ್'* ಪ್ರಕಟಿಸಿದ್ದ ಸುದೀರ್ಘ ವರದಿಯಿಂದಾಗಿ ಈ ಜೋಡಿ ಅಲ್ಲಿ ಮನೆಮಾತಾಗಿತ್ತು. ಕಂಡವರೆಲ್ಲ ಆತ್ಮೀಯತೆಯ ಮಳೆಸುರಿಸುವವರೆ.

ಕನ್ನಡಿಗರೂ ಸೇರಿದಂತೆ ಅನೇಕ ಭಾರತೀಯರಿದ್ದಾರಿಲ್ಲಿ. ಈ ಯುಗಾದಿಯ ಸಂದರ್ಭದಲ್ಲಿ ಕನ್ನಡ ಸಂಘವೊಂದು ಅಲ್ಲಿ ತಲೆಯೆತ್ತಿದೆ. ಚೀನ, ಜಪಾನ್ ಮೂಲದ ಜನರೂ ಇದ್ದಾರೆ. ತಮಿಳರ ಸಂಖ್ಯೆ ಹೆಚ್ಚು. ಆದರೆ ಆ ತಮಿಳರಾರೂ ಭಾರತವನ್ನು ನೋಡಿದವರಲ್ಲ. ಹೀಗಾಗಿ ಭಾರತದಲ್ಲಿ ಬರಿ ತಮಿಳರೆ ತುಂಬಿಕೊಂಡಿರಬಹುದೆಂಬ ಭಾವನೆ ಅವರದು. ಅಂತೆಯೆ ಇವರಿಗೆ "ತಮಿಳು ತೆರಿಮಾ? ತೆರಿಯದಾ?" (ತಮಿಳು ಗೊತ್ತೆ? ಗೊತ್ತಿಲ್ಲವೆ?) ಎಂಬ ಪ್ರಶ್ನೆಗೆ ಉತ್ತರಿಸಿ ಸಾಕಾಯಿತಂತೆ.

ಸಿಂಗಪುರ ತಲಪಿದ ಇವರಿಬ್ಬರಿಗೂ ಸಫಲರಾಗಿ ಸುರಕ್ಷಿತವಾಗಿ ಗುರಿ ಮುಟ್ಟಿದ ಸಂತೋಷ. ಆ ಕ್ಷಣದಲ್ಲಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಆನಂದಬಾಷ್ಪ ಸುರಿಸಿದರು. ಕಟ್ಟಾ ಸಸ್ಯಾಹಾರಿಯಾದ ಕಾಡಪ್ಪನವರ ಮೂರು ದಿನ ಊಟ ಸಿಗದೇ ಕೇವಲ ಹಾಲು-ಬ್ರೆಡ್ಡಿನ ಮೇಲೆ ದಿನ ದೂಡಬೇಕಾಯಿತಂತೆ. ರಾಜಯೋಗ ಕೇಂದ್ರದ ಸದಸ್ಯೆಯೊಬ್ಬರ ಮನೆಯಲ್ಲಿ ಅವರಿಗೆ ರಾಜಾತಿಥ್ಯ.

ಮಲೇಶಿಯದ ಊರುಗಳನ್ನು ಸುತ್ತಿ, ಸಿಂಗಪುರದ ಗಗನ ಚುಂಬಿ ಕಟ್ಟಡಗಳು, ಭಾರಿ ವ್ಯಾಪಾರಿ ಮಳಿಗೆಗಳು, ೨೪ ಗಂಟೆಯೂ ಕೆಲಸ ಮಾಡುವ ಸ್ವಯಂಚಾಲಿತ ಸಿಟಿ ಬ್ಯಾಂಕ್ ಕೌಂಟರುಗಳು, ಕಂಡಕ್ಟರಸಿಲ್ಲದ ಬಸ್ಸುಗಳನ್ನು ನೋಡಿ ಅಲ್ಲಿಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಬೆಳವಣಿಗೆ, ಜೀವನ ರೀತಿಗಳ ಕಿರು ಪರಿಚಯ ಮಾಡಿಕೊಂಡು ಮದ್ರಾಸಿಗೆ ಮರಳಿ ಹುಬ್ಬಳ್ಳಿಯ ಹಾದಿ ಹಿಡಿದ ಈ ಹುಡುಗರು ಕೋಶ ಓದಿ ಪಡೆಯುವ ಜ್ಞಾನಕ್ಕಿಂತ ದೇಶ ಸುತ್ತಿ ಹೆಚ್ಚು ಜ್ಞಾನ ಪಡೆದಿದ್ದಾರೆ. ❀

* ಕೌಲಾಲಂಪುರದಿಂದ ಹೊರಡುವ ಮಲೇಶಿಯದ ರಾಷ್ಟ್ರೀಯ ದಿನಪತ್ರಿಕೆ. ದಿನಕ್ಕೆ ೫೦ ಪುಟಗಳನ್ನು ಹೊತ್ತು ಪ್ರಕಟವಾಗುತ್ತದೆ.

## ಸುವರ್ಣ ಮಹೋತ್ಸವ ಕಂಡ

# ಮುಂಬಯಿ ಮರಾಠಿ ಸಾಹಿತ್ಯ ಸಂಘ

**ವಸಂತ ಕಲಕೋಟಿ**

ಮರಾಠಿ ಸಾಹಿತ್ಯ, ಸಂಸ್ಕೃತಿ-ವಿಶೇಷವಾಗಿ ನಾಟಕ ಕಲೆಯ ಕ್ಷೇತ್ರದಲ್ಲಿ ಮುಂಬಯಿ ಮರಾಠಿ ಸಾಹಿತ್ಯ ಸಂಘದ ಕಾರ್ಯ, ಚಟುವಟಿಕೆ, ಕೊಡುಗೆ ವಿಪುಲ. ಮುಂಬಯಿ ಮಹಾನಗರದಲ್ಲಿ 'ಸಂಘ ಮಂದಿರ' ಎಂದು ಪರಿಚಿತವಿರುವ ಈ ಸಂಸ್ಥೆಯ ಸಭಾಗೃಹ ಉತ್ತಮ ಮರಾಠಿ ನಾಟಕ ಪ್ರದರ್ಶನಗಳಿಗೆ ಹೆಸರುವಾಸಿ. ದಾದರಿನಲ್ಲಿರುವ ಶಿವಾಜಿ ಮಂದಿರದ ನಂತರ ಜನಪ್ರಿಯತೆಗೆ, ಅನುಕೂಲಗಳಿಗೆ ಗಿರಗಾಂವ್ ಭಾಗದಲ್ಲಿ-ರುವ ವಾತಾನುಕೂಲವಿರುವ ಸಕಲ ಸಲಕರಣೆಗಳಿಂದ ಸುಸಜ್ಜಿತವಾದ ಉತ್ತಮ ರಂಗ ಮಂದಿರವೆನಿಸಿದೆ ಈ ಸಂಘ ಮಂದಿರ. ಈಗ ಈ ಸಂಸ್ಥೆ ಐವತ್ತು ವರುಷಗಳನ್ನು ಪೂರೈಸಿ ತನ್ನ ಸುವರ್ಣ ಮಹೋತ್ಸವ ಕಾರ್ಯಕ್ರಮಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ವಿಜೃಂಭಣೆಯಿಂದ ಜರುಗಿಸಿದೆ.

೨೧-೭-೧೯೩೫ ರಂದು ಗಿರಗಾಂವಿನ ಕೇಳೆವಾಡಿಯಲ್ಲಿ ಈ ಸಂಸ್ಥೆಯ ಜನನ. ಆಚಾರ್ಯ ಪ್ರಲ್ಹಾದ ಕೇಶವ ಅತ್ರೆ, ಪ್ರಾಚಾರ್ಯ ಅ. ಬಾ. ಗಜೇಂದ್ರಗಡಕರ, ದಾಜೀ ಸಾಹೇಬ ತುಳಜಾಪುರಕರ, ಶ್ರೀ. ಮ. ವರ್ದೆ, ರಾಮರಾವ್ ವಿಜಯಕರ್, ಡಾ. ವಾಡ, ಡಾ. ಪುರಂದರೆ, ಡಾ. ಫಡಕೆ, ಅನಂತ ಹರಿ ಗದ್ರೆ, ಭಾಸ್ಕರ್‌ರಾವ್ ಜಾಧವ, ಫಿರೋಜಭಾಯಿ ಆನಂದಕರ್, ಅನಂತ ಕಾಣೇಕರ್, ದಿ. ಬಿ. ಆಮೋಣ-ಕರ್, ಚಂ. ವಿ. ಬಾವಡೇಕರ್, ವಾ. ರಾ. ಧವಳೆ, ನ. ರ. ಫಾಟಕ, ವಾ. ಲ. ಕುಲಕರ್ಣಿ, ಶ್ರೀ. ಶಂ. ನವರೆ, ಲಾಲಜಿ ಪೆಂಡಸೆ, ಅಪ್ಪಾ ಪೆಂಡಸೆ, ರಾ. ಭಿ. ಜೋಶಿ, ಬಂ. ಸಾ. ದೋಂಡಕರ್ ಮುಂತಾದ ಖ್ಯಾತ ವ್ಯಕ್ತಿಗಳ ಪರಿಶ್ರಮದಿಂದ ಸಂಸ್ಥೆ ಬಹು ತೀವ್ರ ಗತಿಯಲ್ಲಿ ಬೆಳೆದುಬಂದಿದೆ. ಸಾಹಿತ್ಯ, ರಂಗಭೂಮಿ, ವಾಣಿಜ್ಯ, ಆಡಳಿತ ಹೀಗೆ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಈ ಖ್ಯಾತ ವ್ಯಕ್ತಿಗಳ ಅನುಭವ, ಜ್ಞಾನ ಸಂಸ್ಥೆಗೆ ಧಾರಾಳವಾಗಿ ದೊರಕಿದೆ. ಅದಕ್ಕೂ ಹೆಚ್ಚಾಗಿ ಸಾಮಾನ್ಯ ಮರಾಠಿ ವಾಚಕರ

ಪ್ರೇಕ್ಷಕರ ಸಹಕಾರ, ಸಹಾಯ ಈ ಸಂಸ್ಥೆಗೆ ದೊರೆತಿದೆ. ಮರಾಠಿ ರಂಗಭೂಮಿಯಲ್ಲಿ ೩೧-೧೦-೧೮೮೦ ರಂದು ಪ್ರದರ್ಶಿಸಲ್ಪಟ್ಟ 'ಶಾಂಕುಂತಲ' ಮರಾಠಿ ನಾಟಕ ಮರಾಠಿ ರಂಗ ಭೂಮಿಯ ಪ್ರಗತಿಯ ಆಧಾರ ಸ್ತಂಭ ಎಂದು ಹೇಳಲಾಗುತ್ತಿದೆ. ಅದರಂತೆ ೮-೭-೧೯೨೧ ರಂದು ಬಾಲಗಂಧರ್ವ ಹಾಗೂ ಕೇಶವರಾವ್ ಭೋಸಲೆ ಅವರು ಪ್ರದರ್ಶಿಸಿದ 'ಸಂಯುಕ್ತ ಮಾನಾಪಮಾನ' ಅದ್ವಿತೀಯ ಪ್ರಯೋಗವೆನಿಸಿ ಮರಾಠಿ ಪ್ರೇಕ್ಷಕರಲ್ಲಿ ಅವಿಸ್ಮರಣೀಯ ನಾಟಕ ವೆನಿಸಿತು. ಇದೇ ರೀತಿಯಲ್ಲಿ ೧೯೪೪ರಲ್ಲಿ ಮುಂಬಯಿ ಮರಾಠಿ ಸಾಹಿತ್ಯ ಮಂದಿರದ ಆಶ್ರಯದಲ್ಲಿ ಜರುಗಿದ ಯಶಸ್ವೀ ನಾಟಕ ಮಹೋತ್ಸವವು ಸಹ ಚಿರಸ್ಮರಣೀಯುವೆನಿಸಿತು.

ಡಾ. ಅ. ನಾ. ಭಾಲೇರಾವ್ ಅವರ ನೇತೃತ್ವ ದಲ್ಲಿ ಮುಂಬಯಿ ಮರಾಠಿ ಸಾಹಿತ್ಯ ಸಂಘ ಮಂದಿರದ ಆಶ್ರಯದಲ್ಲಿ ಮರಾಠಿ ರಂಗಭೂ ಮಿಯ ಶತಸಂವತ್ಸರ ಸಮಾರಂಭವು ವಿಜೃಂಭಣೆ ಯಿಂದ ಔಚಿತ್ಯಪೂರ್ಣವಾಗಿ ಜರುಗಿತು. ಸಂಘದ ಸಾಹಿತ್ಯಕ ಕಾರ್ಯಕ್ರಮ ಹಾಗೂ ಚಟುವಟಿಕೆಗಳಿಗೆ ಮರಾಠಿ ನಾಟಕ ಕಾರ್ಯಕ್ರಮ ಗಳಿಂದ ಇನ್ನೂ ಹೆಚ್ಚಿನ ಚಾಲನೆ ದೊರಕಿತು. ನಟ ಸಮ್ರಾಟ ಬಾಲಗಂಧರ್ವ, ಗಣಪತರಾವ್ ಬೋಡಸ್, ಕೇಶವರಾವ್ ದಾತೆ, ಚಿಂತಾಮಣ ರಾವ್ ಕೋಲ್ಹಟಕರ್, ನಾನಾಸಾಹೇಬ ಪಾಠಕ, ದುರ್ಗಾಬಾಯಿ ಖೋಟೆ, ವನಮಾಲಾ, ಮೀನಾಕ್ಷಿ, ಮಾಮಾ ಪೆಂಡಸೆ, ಮಾಸ್ಟರ್ ದತ್ತಾ ರಾಮ ಮುಂತಾದ ಖ್ಯಾತ ಹಾಗೂ ಮರಾಠೀ ರಂಗಭೂಮಿಯ ದಿಗ್ಗಜರ ಸಹಕಾರದಿಂದ ಈ ಸಂಸ್ಥೆಯು ಮರಾಠಿ ರಂಗಭೂಮಿಯ ಪುನರು-ಜ್ಜೀವನಗೊಳಿಸುವಲ್ಲಿ ಯಶಸ್ವಿಯಾಯಿತು.

ಈ ಸಂಸ್ಥೆಯ ಆಶ್ರಯದಲ್ಲಿ ಅಖಿಲಭಾರತ ಮಟ್ಟದ ಸಾಹಿತ್ಯ ಸಮ್ಮೇಳನ, ಮುಂಬಯಿ ಮಹಾನಗರ ಹಾಗೂ ಉಪನಗರಗಳಲ್ಲಿ ಜರುಗಿ ಸಿದ ಸಮ್ಮೇಳನ. ಸ್ಮೃತಿ - ವಾಖ್ಯಾನಮಾಲೆ ತುಂಬ ಜನಪ್ರಿಯ. ಆಗಾಗ ವಾಙ್ಮಯ ಕಾರ್ಯ ಕ್ರಮಗಳನ್ನು ಸಹ ಈ ಸಂಸ್ಥೆ ನಡೆಸುತ್ತಿದೆ. ಮರಾಠಿ ಭಾಷಿಕರಲ್ಲದವರಿಗೆ, ಮರಾಠಿ ಶಿಕ್ಷಣ ವರ್ಗಗಳನ್ನು ನಿಯಮಿತವಾಗಿ ನಡೆಸು ತ್ತದೆ. ಕಳೆದ ಐವತ್ತು ವರುಷಗಳಲ್ಲಿ ಸಂಸ್ಥೆಯ ಕಾರ್ಯಕ್ರಮಗಳ ಸಂಖ್ಯೆಯೊಂದಿಗೆ ವ್ಯಾಪ್ತಿಯೂ ಹರಡಿದೆ. ದಿಲ್ಲಿಯಲ್ಲಿ ಜರುಗಿದ ರಾಷ್ಟ್ರೀಯ ನಾಟ್ಯಮಹೋತ್ಸವದಲ್ಲಿ ಭಾಗವಹಿಸಿ ಸಂಸ್ಥೆಯ ನಾಟ್ಯ ವಿಭಾಗವು 'ಭಾವು ಬಂದಕಿ' ನಾಟಕ ಪ್ರದರ್ಶಿಸಿ, ಪ್ರಥಮ ಪುರಸ್ಕಾರ ಪಡೆಯಿತು. ಈ ನಾಟಕದಲ್ಲಿ ಪಾತ್ರ ವಹಿಸಿದ ದುರ್ಗಾ ಖೋಟೆ ಮತ್ತು ನಾನಾಸಾಹೇಬ ಪಾಠಕ ಅವರ ಅಭಿನಯವನ್ನು ಪ್ರೇಕ್ಷಕರು ತುಂಬ ಮೆಚ್ಚಿಕೊಂ ಡರು. ಕೇವಲ ಹಳೆಯ ಮರಾಠೀ ನಾಟ್ಯ ಪರಂಪರೆಗೆ ಅಂಟಿಕೊಂಡು ಕುಳಿತುಕೊಳ್ಳದೇ ವಿ. ವಾ. ಶಿರವಾಡಕರ, ಪು. ಲ. ದೇಶಪಾಂಡೆ, ಅನಂತ ಕಾಣೇಕರ ಮುಂತಾದ ಆಧುನಿಕ ನಾಟಕ ಕಾರರ ನಾಟಕಗಳನ್ನು ಸಹ ಸಂಸ್ಥೆಯು ಪ್ರಯೋ ಗಿಸಿ ಪ್ರಾಚೀನ ಪರಂಪರೆ-ಆಧುನಿಕ ಪರಂಪರೆಗಳ 'ಸಂಗಮ' ಸಾಧಿಸುವಲ್ಲಿ ಯಶಸ್ವಿಯಾಯಿತು.

೧೯೫೫ ರಲ್ಲಿ ಡಾ. ಭಾಲೇರಾವ್ ಅವರು ನಿಧನ ಹೊಂದಿದರು. ಸಂಘದ ಚೈತನ್ಯಮೂರ್ತಿ ಯಾಗಿದ್ದ ಅವರ ನಿಧನದಿಂದ ಸಂಘಕ್ಕೆ ತುಂಬಿ ಬಾರದ ಹಾನಿಯಾದರೂ, ಉಳಿದ ಸಕ್ರಿಯ ಸದಸ್ಯರು ಕಾರ್ಯಕರ್ತರು ಡಾ. ಭಾಲೇರಾವ ಅವರ ಉದ್ದೇಶ, ಗುರಿಗಳನ್ನು ಸಾಧಿಸಲು ತುಂಬ ಶ್ರಮಿಸಿ ಒಂದು ಸುಸಜ್ಜಿತ ಹಾಗೂ ಹಾಗೂ ಬೃಹತ್ ಕಟ್ಟಡವನ್ನು ನಿರ್ಮಿಸಿದರು. ಭಾರತದ ಮಾಜೀ ಅರ್ಥಮಂತ್ರಿ ಶ್ರೀ ಸಿ. ಡಿ. ದೇಶಮುಖ ಅವರು ಕಟ್ಟಡದ ಅಡಿಗಲ್ಲನ್ನಿಟ್ಟಿ ದ್ದರು. ಮುಂದೆ ೧೯೬೪ ರಲ್ಲಿ ಭಾರತದ ಸಂರ ಕ್ಷಣಾ ಮಂತ್ರಿಯಾಗಿದ್ದ ಯಶವಂತರಾವ್ ಚವ್ಹಾಣರು ಸಂಘ ಮಂದಿರದ ಉದ್ಘಾಟನೆ ಮಾಡಿದರು. ಎರಡಂತಸ್ತಿನ ಈ ಭಿತ್ತಿ ಕಟ್ಟಡ ದಲ್ಲಿ. ಸುಸಜ್ಜಿತ ವಾತಾನುಕೂಲವಿರುವ ನಾಟ್ಯ ಮಂದಿರ, ಸಂಸ್ಥೆಯ ಕಾರ್ಯಾಲಯ, ಗ್ರಂಥಾ ಲಯ. ಸಾಹಿತ್ಯ-ನಾಟಕ ಸಂಶೋಧನಾಲಯ ವಿಭಾಗಗಳಲ್ಲದೇ, ಅಖಿಲ ಭಾರತ ಮರಾಠಿ ನಾಟ್ಯ ಪರಿಷತ್ತಿಗೂ ಈ ಕಟ್ಟಡದಲ್ಲಿ ಆಶ್ರಯ ವಿದೆ. ಸಂಸ್ಥೆಯು ಕಳೆದ ೨೨ ವರುಷಗಳಿಂದ ತನ್ನದೇ ಆದ ಕಟ್ಟಡದಲ್ಲಿ ಹೆಚ್ಚು ವೇಗದಿಂದ

ಸಾಮರ್ಥ್ಯದಿಂದ ಚಟುವಟಿಕೆಗಳನ್ನು ನಡೆಸುತ್ತಿದೆ. ಸಂಸ್ಥೆಯ ಕಟ್ಟಡದ ಬೆಲೆ ಇಂದು ಐವತ್ತು ಲಕ್ಷಕ್ಕೂ ಮಿಕ್ಕಬಹುದು. ದೇಣಿಗೆ ರೂಪದಲ್ಲಿ, ಸಾಲದ ರೂಪದಲ್ಲಿ ಸಂಗ್ರಹಿಸಿದ ನಿಧಿಯಿಂದ ಕಟ್ಟಡ ಪೂರ್ತಿಗೊಂಡಿದೆ. ಈಗ ಸಂಘವು ಋಣ ಮುಕ್ತವೂ ಆಗಿದೆ. ಮುಂಬಯಿ ಮಹಾನಗರದ ಜನತೆಯೊಂದಿಗೆ ಸಮರಸಗೊಂಡಿರುವ ಸಂಸ್ಥೆಯ ವಿದ್ಯಮಾನಗಳು ವಿಶೇಷವಾಗಿ, ಮರಾಠಿ ರಂಗಭೂಮಿಯ ಪರಂಪರೆ ಕಾಪಾಡುವಲ್ಲಿ, ಸಾಹಿತ್ಯದ ಒಲವು ಬೆಳೆಸುವಲ್ಲಿ, ಮರಾಠೀ ಜನತೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಮಾಡಿದ ಕಾರ್ಯ ಅಭಿನಂದನೀಯ, ಅನುಕರಣೀಯ.

ಸುವರ್ಣ ಮಹೋತ್ಸವದ ಅಂಗವಾಗಿ, ಸಂಸ್ಥೆಯ ಸಂಪೂರ್ಣ ಇತಿಹಾಸವನ್ನು ಪ್ರಕಟಿಸುವದು, ಕಳೆದ ಐವತ್ತು ವರುಷಗಳಲ್ಲಿ ಮರಾಠಿ ರಂಗಭೂಮಿಯಲ್ಲಿ ಜರುಗಿದ ಆಯಾಮಗಳ ತುಲನಾತ್ಮಕ ಹಾಗೂ ವೈಚಾರಿಕ ವಿಶ್ಲೇಷಣೆಗಳು, ಗ್ರಂಥಪ್ರಕಟನೆ, ಮುಂಬಯಿ ಮಹಾನಗರದಲ್ಲಿ ಹಾಗೂ ಉಪನಗರಗಳಲ್ಲಿ ಸಂಸ್ಥೆಯು ಜರುಗಿಸಿದ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳ ಭಾಷಣಗಳನ್ನು ಪ್ರಕಟಿಸುವದು ಮರಾಠೀ ಸಾಹಿತ್ಯದ ಪುನರುಜ್ಜೀವನ ಯೋಜನೆ, ಸಂಸ್ಮರಣ ಸಂಚಿಕೆ ಪ್ರಕಟನೆ, ಸಂಸ್ಥೆಯ ಗ್ರಂಥಾಲಯ ಮತ್ತು ಸಂದರ್ಭಸೂಚಿ ವಿಭಾಗ ವರ್ಧನೆ, ಪ್ರಾ. ನ. ರ. ಪಾಠಕ ಸಂಶೋಧನ ಕೇಂದ್ರದ ಆಶ್ರಯದಲ್ಲಿ ಸಾಹಿತ್ಯ ವಿಷಯದ ಹಾಗೂ ವ್ಯಾಪಕ ಪ್ರಮಾಣದಲ್ಲಿ ಸಂಶೋಧನೆ ನಡೆಸುವದು ಹೀಗೆ ಹಲವು ಯೋಜನೆಗಳನ್ನು ಸಂಸ್ಥೆಯು ಹಮ್ಮಿಕೊಂಡಿದೆ. ಗಿರಗಾಂವ್ ವಿಭಾಗದಲ್ಲಿ ಮರಾಠಿ ಚಲನಚಿತ್ರಗಳನ್ನು ಪ್ರದರ್ಶಿಸಲು ಒಂದು ಉತ್ತಮ ಚಲನಚಿತ್ರಮಂದಿರವಿಲ್ಲ. ಅಂತೆಯೇ ಸಂಸ್ಥೆಯ ಕಟ್ಟಡದಲ್ಲಿಯೇ ಒಂದು ಸುಸಜ್ಜಿತ ಚಿತ್ರಗೃಹವನ್ನು ರಚಿಸಲೂ ಸಂಸ್ಥೆಯು ಯೋಜಿಸಿದೆ. ಈ ಎಲ್ಲ ಯೋಜನೆಗಳನ್ನು ಸಾಕಾರಗೊಳಿಸಲು ಕನಿಷ್ಟ ಹತ್ತು ಲಕ್ಷ ರೂಪಾಯಿ ನಿಧಿಯ ಅವಶ್ಯವಿದೆ. ಅದಕ್ಕಾಗಿ ಕಳೆದ ಸಪ್ಟಂಬರ್ ತಿಂಗಳಿನಲ್ಲಿ ಮುಂಬಯಿ ಮರಾಠಿ ಸಾಹಿತ್ಯ ಸಂಘಮಂದಿರದಲ್ಲಿ ಸಂಸ್ಥೆಯು ಈ ಕೆಳಗಿನ ಎಂಟು ನಾಟಕಗಳ ಪ್ರದರ್ಶನ ನಡೆಸಿತು.

೧ ಚಂದ್ರಲೇಖಾ ಸಂಸ್ಥೆಯ "ಮಹರತ" ಮೋಹನ ವಾಘ ದಿಗ್ದರ್ಶನ.

೨ ಪ್ರೊಗ್ರೆಸ್ಸಿವ್ ಡ್ರಾಮೆಟಿಕ್ ಗ್ರುಪ್ ಪುಣೆ ತಂಡದವರಿಂದ "ಹಾ ಖೇಳ ಸಂಚಿತಾಚಾ"






ಪ್ರಾ. ಭಾಲಬಾ ಕೇಳಕರರ ದಿಗ್ದರ್ಶನ.

೩ ನಾಟ್ಯ ಕಲಾಕಾರ ಸಹಕಾರ ಸಂಸ್ಥೆಯ "ಮಂಡೋದರಿ" ಜಯರಾಮ ಶಿಲೇದಾರರ ದಿಗ್ದರ್ಶನ.

೪ ಮಾವುಲೀ ಪ್ರೊಡಕ್ಶನ್‌ದ "ಮಾಲವಣೀ ಸಂಶಯ ಕಲ್ಲೋಳ" ಮಚ್ಛಿರವು ಕಾಂಬಳೆ ಅವರ ದಿಗ್ದರ್ಶನ.

೫ ನಾಟ್ಯ ಸಂಪುದ ಕಲಾವಿದರಿಂದ "ಕಟ್ಯಾರ ಕಾಳಜಾತ ಘುಸಲೀ" ಪ್ರಭಾಕರ ಫಣಶೀಕರರ ದಿಗ್ದರ್ಶನ.

೬ ಕುಲಸ್ವಾಮಿನಿ ಕಲಾವಿದರಿಂದ "ಬಾಬೂರಾವ ಜಾಗೆ ವ್ಹಾ" ಶ್ರೀಮತಿ ಮಾಯಾ ಜಾಧವರ ದಿಗ್ದರ್ಶನ.

೭ ಸಾಹಿತ್ಯ ಸಂಘದ 'ಕಲಾವಿದರಿಂದ "ಸುಂದರೀ ಮನಾಮಧೆ ಭುರಲಿ" ಸಂಗೀತ ನಾಟಕ.

೮ ಹಾವುಸೀ ಪತ್ರಕಾರ, ಸಾಹಿತ್ಯಿಕ ನಾಟಕಕಾರ ಸಮೂಹದ ಕಲಾವಿದರಿಂದ ಆಚಾರ್ಯ ಅತ್ರೆಯವರ "ಸಾಷ್ಟಾಂಗ ನಮಸ್ಕಾರ" ಈ ನಾಟಕಗಳಿಗೆ ಪ್ರವೇಶ, ಸೀಜನ್ ಟಿಕೆಟ್ ಮುಖಾಂತರ. ಸೀಜನ್ ಟಿಕೇಟು ದರ ರೂ. ೧೦೦೦, ೭೫೦, ೫೦೦, ೩೦೦, ೧೦೦, ೭೫, ೫೦ ಹೀಗೆ ಇಡಲಾಗಿತ್ತು. ಸಂಸ್ಮರಣ ಸಂಚಿಕೆಯಲ್ಲಿ ಜಾಹೀರಾತು ಪ್ರಕಟಿಸಿ ನಿಧಿ ಸಂಗ್ರಹ ನಡೆಸಿತು. ಅಲ್ಲದೇ ವೈಯಕ್ತಿಕ ದೇಣಿಗೆಗಳು ಸಾಕಷ್ಟು ಬಂದವು.

೧೯೩೪ರಲ್ಲಿ ಮುಂಬಯಿಯಲ್ಲಿ ಜರುಗಿದ ಮರಾಠೀ ಸಾಹಿತ್ಯಸಮ್ಮೇಳನದ ಸಮಯದಲ್ಲಿ ಮುಂಬಯಿ ಮಹಾನಗರದಲ್ಲಿ ಒಂದು ಸಾಹಿತ್ಯ ಸಂಸ್ಥೆಯಿಲ್ಲವಲ್ಲ ಎಂಬ ಕಳಕಳಿಯೇ ೧೯೩೫ ರಲ್ಲಿ ಮುಂಬಯಿ ಮರಾಠೀ ಸಾಹಿತ್ಯ ಸಂಘದ ಸ್ಥಾಪನೆಗೆ ಪ್ರೇರಣೆ ನೀಡಿತು. ಐವತ್ತು ವರ್ಷಗಳ ಅವಧಿಯಲ್ಲಿ ಸಾಹಿತ್ಯಕ, ಸಂಸ್ಕೃತಿಕ, ನಾಟಕ ಚಟುವಟಿಕೆಗಳೊಂದಿಗೆ ಸಂಘವು ಕೆಲವು ವೈಶಿಷ್ಟ್ಯಪೂರ್ಣ ಕಾರ್ಯಕ್ರಮಗಳನ್ನು ನಡೆಸಿದೆ. ಅಮೃತ ಭಾರತಿ ಲಾಂಛನದಲ್ಲಿ ನಾಟ್ಯ ಶಿಬಿರ ಹಾಗೂ ತರಬೇತಿ ವರ್ಗಗಳನ್ನು ನಡೆಸಿದ್ದು ಕೈ. ವಾಮನ ಮಲ್ಹಾರ ಜೋಶಿ, ಕೈ. ಜ. ನಾ. ಆಪ್ಟೆ ಸ್ಮಾರಕ. ಮರಾಠಿ ವ್ಯಾಖ್ಯಾನ ಮಾಲೆ, ದಿ. ಭಾಲೇರಾವ ಸ್ಮಾರಕ ವ್ಯಾಖ್ಯಾನ, ಶಂಭು ಮಿತ್ರ ಅವರ ಹೆಸರಿನಲ್ಲಿ ನಾಟಕ ವಿಷಯದ ವ್ಯಾಖ್ಯಾನ ಮಾಲೆ ಪ್ರತಿ ವರುಷ ನಡೆಯುತ್ತ ಬಂದಿದೆ. ೧೯೭೪ರಲ್ಲಿ ಸಂಸ್ಥೆಯ ನಾಟ್ಯ ವಿಭಾಗದ ಕಲಾವಿದರು ಜರ್ಮನಿಯಲ್ಲಿ ಮರಾಠಿ ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿ ಬಂದಿದ್ದಾರೆ. "ರಾಜಮುಕುಟ" "ದೂಸರಾ ಪೇಶವಾ" "ಸವಾಯಿ ಮಾಧವರಾವ್ ಚೀ ಮೃತ್ಯು" ಸಂಸ್ಥೆಯ ನಾಟ್ಯ-ವಿಭಾಗದ ಕಲಾವಿದರು ನೀಡಿದ ಶ್ರೇಷ್ಠ ನಾಟಕಗಳು. ಇವಲ್ಲದೇ ಇತರ ಮರಾಠಿ ನಾಟಕಕಾರನಿಗೆ, ಕಲಾವಿದರಿಗೆ ಮರಾಠಿ ರಂಗಭೂಮಿಯಲ್ಲಿ ಹೊಸ ಹೊಸ ಪ್ರಯೋಗ ನಡೆಸಲು ಸಂಸ್ಥೆಯು ಯಾವಾಗಲೂ ಉತ್ತೇಜನ ಹಾಗೂ ಪ್ರೋತ್ಸಾಹ ನೀಡುತ್ತಲೇ ಬಂದಿದೆ.

ಮುಂಬಯಿ ಮರಾಠಿ ಸಾಹಿತ್ಯ ಸಂಘದ ಅಧ್ಯಕ್ಷರಾಗಿ ಶ್ರೀ ಗಂಗಾಧರ ಗಾಡಗೀಳ, ಕಾರ್ಯಾಧ್ಯಕ್ಷರಾಗಿ ಶ್ರೀ ಬಾಪೂರಾವ ನಾಯ್ಕ, ಗೌ. ಕಾರ್ಯದರ್ಶಿಗಳಾಗಿ ಶ್ರೀ ದಾಜೀ ಭಾಟೊಡೇಕರ ಗೌ. ಕೊಶಾಧಿಕಾರಿಗಳಾಗಿ ಬಾಬಾ ಕಲಗುಟಕರ, ನಾಟ್ಯ ಶಾಖೆಯ ಕಾರ್ಯದರ್ಶಿಗಳಾಗಿ ಡಾ. ಬಾಳ ಭಾಲೇರಾವ್, ಸಾಹಿತ್ಯವಿಭಾಗದ ಕಾರ್ಯದರ್ಶಿಗಳಾಗಿ ಭೀಮರಾವ ಕುಲಕರ್ಣಿ ಹಾಗೂ ಕೇಶವ ಮೇಶ್ರಾಮ ಸಂಘಮಂದಿರದ ವ್ಯವಸ್ಥಾಪಕ ಕಾರ್ಯದರ್ಶಿಗಳಾಗಿ ತ್ರ್ಯಂಬಕ ಗೋಖಲೆ ಹಾಗೂ ಕಾರ್ಯಕಾರಿ ಸಮಿತಿಯ ಇತರ ಸದಸ್ಯರ ಸಹಕಾರ, ಕಾರ್ಯಕ್ಷಮತೆಯಿಂದ ಮುಂಬಯಿ ಮರಾಠಿ ಸಾಹಿತ್ಯ ಸಂಘವು ಐವತ್ತು ವರ್ಷಗಳ ಸಫಲ ಜೀವನ ಪೂರೈಸಿ ಐವತ್ತೊಂದನೆಯ ವರುಷದಲ್ಲಿ ಪಾದಾರ್ಪಣೆ ಮಾಡುತ್ತಲಿದೆ. ಅಖಿಲ ಭಾರತ ಮರಾಠಿ ನಾಟ್ಯ ಪರಿಷದ್ ಸಂಸ್ಥೆಯ ಸಹಕಾರದಿಂದ, ಜನೇವರಿ ೮೬ರಲ್ಲಿ ಮರಾಠಿ-ಕನ್ನಡ ಸಾಂಸ್ಕೃತಿಕ ಬಾಂಧವ್ಯ, ಪ್ರಾಚೀನ ಪರಂಪರೆಯ ಒಂದು ವಿಶೇಷ ಕಾರ್ಯಕ್ರಮವನ್ನು ಈ ಸಂಸ್ಥೆ ಏರ್ಪಡಿಸಿದೆ. ✡

ಪುಸ್ತಕ ವಿಭಾಗ

ಗೋವಾ ಸ್ವಾತಂತ್ರ್ಯವೀರ

# ಟೆಲೊ ದಿ ಮ್ಯಾಸ್ಕರೇನ್ಹಾಸ್

ಸಂಗ್ರಹ: ಶಿಬ್ಬಳ್ಳಿ ಗಣಪತಿ ಶರ್ಮ



# ಟೆಲೊ ಡಿ ಮ್ಯಾಸ್ಕರೇಞಾಸ್

ಭಾರತ ಸ್ವತಂತ್ರವಾದರೂ ಭೌಗೋಲಿಕವಾಗಿ, ಭಾವನಾತ್ಮಕವಾಗಿ, ಸಾಂಸ್ಕೃತಿಕವಾಗಿ ಭಾರತದ್ದೇ ಒಂದು ಭಾಗವಾಗಿದ್ದ ಗೋವೆಗಿನ್ನೂ ಪೋರ್ಚುಗೀಸರ ದಾಸ್ಯ ತಪ್ಪದಾದಾಗ, ತನ್ನ ತಾಯ್ನಾಡಿನ ಬಿಡುಗಡೆಗಾಗಿ ಅವಿರತವಾಗಿ ಅನೇಕ ರೀತಿಯಲ್ಲಿ ಹೋರಾಡಿದ ಧೀಮಂತ ಟೆಲೊ ಡಿ ಮ್ಯಾಸ್ಕರೇಞಾಸ್. 'ಎದ್ದೇಳು ಗೋವೆ' ಎಂಬ ಪತ್ರಿಕೆಯ ಮೂಲಕ ಗೋವನ್ನರಲ್ಲಿ ನಾಡಪ್ರೇಮವನ್ನು ಜಾಗೃತಗೊಳಿಸಿದವರು ಟೆಲೊ.

ಭಾರತ ಸರಕಾರದ ಪರವಾಗಿ ಪ್ರಕಟವಾಗುವ 'ಆಜ್ ಕಲ್' ಪತ್ರಿಕೆಯಲ್ಲಿ ಶ್ರೀ ಅಮಿತ ಶ್ರೀವಾಸ್ತವರು ಬರೆದ 'ಗೋವಾ ಕೆ ಅಮರ ಸೇನಾನಿ' ಲೇಖನದ ಸಂಗ್ರಹ ಇದು.

೧೯೭೦ರ ಆಗಸ್ಟ್ ೧೩, ಗುರುವಾರ. ಸಾಯಂಕಾಲ ಜಡಿಮಳೆ ಸುರಿಯುತ್ತಿದ್ದರೂ ಮಾಂಡವಿಯ ಎದುರಿಗೆ ಪಣಜಿಯಲ್ಲಿ 'ಇನ್‌ಸ್ಟಿಟ್ಯೂಟ್ ಮೆನೆಸ್ಸೆಸ್ ಡಿ ಬ್ರಿಗಾಂಜಾ'ದ ಹೊರಗಡೆ ಅಪಾರ ಜನಸ್ತೋಮ ಸೇರಿತ್ತು. ಒಳಗಡೆ ವಿಶಾಲವಾದ ಜಗುಲಿಯಲ್ಲೂ ಜನರು ಕಿಕ್ಕಿರಿದು ನಿಂತಿದ್ದರು. ಅಲಂಕೃತ ವೇದಿಕೆಯ ಮೇಲೆ ಅಗಲ ಮುಖ, ಸುಪುಷ್ಟ ಶರೀರ, ಎತ್ತರ ನಿಲುವಿನ ಸುಂದರ ವ್ಯಕ್ತಿ ಧ್ವನಿವರ್ಧಕದೆದುರು ನಿಂತು ಮಾತನಾಡುತ್ತಿದ್ದರು. ವಯಸ್ಸು ಎಪ್ಪತ್ತು ಮೀರಿದ್ದರೂ ಹಾಗೆ ಕಾಣುತ್ತಿರಲಿಲ್ಲ.

"ಸಾಮ್ರಾಜ್ಯವಾದಿಗಳ ಜೇಲಿನಿಂದ ಶಾರೀರಿಕ ಯಾತನೆಗಿಂತಲೂ ಮಾನಸಿಕವಾಗಿ ಬಹಳ ನೋವು ಅನುಭವಿಸಿ ಹಿಂತಿರುಗಿದ ಈ ಅಲೆಮಾರಿ ಸಹೋದರನನ್ನು ತಾವು ಹೃತ್ಪೂರ್ವಕವಾಗಿ ಸ್ವಾಗತಿಸುತ್ತಿರುವದಕ್ಕೆ ನಾನು ತುಂಬಾ ಕೃತಜ್ಞನಾಗಿದ್ದೇನೆ. ನಾನು ಈಗ ಒಂದು ಸ್ವತಂತ್ರ ದೇಶದ ಸ್ವತಂತ್ರ ವ್ಯಕ್ತಿಯಾಗಿದ್ದೇನೆ..."

ಈ ಮಾತುಗಳನ್ನು ಕೇಳುತ್ತಿದ್ದಂತೆಯೇ ಕರತಾಡನದ ಭೋರ್ಗರೆತವಾಯಿತು. ಆ ಚಪ್ಪಾಳೆಯ ಮಧ್ಯದಲ್ಲೇ ಮಾತು ಮುಂದುವರಿಯಿತು...

"ನಾನು ವಿಜಯಮಾಲೆಯನ್ನು ಧರಿಸಲು ಬಂದಿಲ್ಲ. ನಾನು ಇಲ್ಲಿಗೆ ಬಂದದ್ದು, ನಿಮ್ಮೊಡನೆ ಸ್ವಾತಂತ್ರ್ಯದ ಸಿಹಿಯನ್ನು ಹಂಚಿಕೊಂಡು ಸ್ವತಂತ್ರ ವ್ಯಕ್ತಿಯಾಗಿ ಒಂದು ಸ್ವತಂತ್ರ ದೇಶದಲ್ಲಿ ಮುಕ್ತ ಜೀವನ ನಡೆಸಲು ಅವಕಾಶ ಸಿಕ್ಕದ್ದಕ್ಕಾಗಿ ಸಂತೋಷಪಡಲು ಬಂದಿದ್ದೇನೆ."

ಈ ಬಾರಿಯ ಕರತಾಡನ ದೀರ್ಘವಾಗಿತ್ತು.

"ನಾನು ನನ್ನ ದೇಶಕ್ಕಾಗಿ ಯಾವ ಸಂತೋಷಕರವಾದ ಆಶ್ವಾಸನೆಯನ್ನೂ ತಂದಿಲ್ಲ. ನಾನು ಕೇವಲ ನನ್ನ ದೇಶ ಮತ್ತು ನನ್ನ ಜನತೆಯ ಕಲ್ಯಾಣಕ್ಕಾಗಿ ದುಡಿಯುವ ಇಚ್ಛೆಯಿಂದ ಬಂದಿ

ದ್ದೇನೆ. ನಾನು ಸದಾ ಸತ್ಯನಿಷ್ಠ ಹಾಗೂ ಅದಮ್ಯ ರಾಷ್ಟ್ರವಾದಿಯಾಗಿದ್ದೆ. ಆದ್ದರಿಂದಲೇ ಸ್ವಂತ ಹಿತಕ್ಕಿಂತಲೂ, ಗೋವೆ ಮತ್ತು ಭಾರತದ ಹಿತಕ್ಕಾಗಿ ಸೇವೆ ಮಾಡುತ್ತಾ ಬಂದಿದ್ದೇನೆ."

ಈ ಮಾತುಗಳನ್ನು ಅಂದು ಆಡಿದವರು ಟೆಲೊ ಡಿ ಮಾಸ್ಕರೇಞಸ್. ಅವರು ಒಬ್ಬ ಸ್ವಾತಂತ್ರ್ಯಯೋಧರಷ್ಟೇ ಅಲ್ಲ ಕವಿ, ಪತ್ರಕರ್ತ, ವಕೀಲ, ಲೇಖಕ ಹಾಗೂ ಮಹಾನ್ ಚಿಂತಕರೂ ಆಗಿದ್ದರು. ಅಂದು ಸಾರ್ವಜನಿಕ ಸಮಾರಂಭದಲ್ಲಿ ಅವರನ್ನು ಸನ್ಮಾನಿಸಲು ವ್ಯವಸ್ಥೆ ನಡೆದಿತ್ತು. ಪೋರ್ಚುಗೀಸರ ಅನೇಕ ಜೈಲುಗಳಲ್ಲಿ ಹತ್ತು ವರ್ಷ ಸೆರೆವಾಸ ಅನುಭವಿಸಿ ತಮ್ಮ ಮಾತೃಭೂಮಿಗೆ ಹಿಂತಿರುಗಿದ್ದರು. ಪೋರ್ಚುಗೀಸರ ದಬ್ಬಾಳಿಕೆಗೆ ತುತ್ತಾಗಿ, ಉಪನಿವೇಶಕ್ಕೆ ಸೇರಿದ್ದ, ಗೋವೆಯನ್ನು ಮುಕ್ತಗೊಳಿಸಲು ತಮ್ಮ ಜೀವನವನ್ನೇ ಅವರು ಸಮರ್ಪಿಸಿದ್ದರು.

ಗೋವೆ, ದೀವ್, ದಮನಗಳ ಮೇಲೆ ಪೋರ್ಚುಗೀಸರ ವಸಾಹತು ನೀತಿ ಎಷ್ಟು ಭಯಂಕರವಾಗಿತ್ತೆಂಬುದು ಸರ್ವವಿದಿತ. ೧೫೧೦ ರಲ್ಲಿ ಅಲ್ಬುಕರ್ಕನ ಸೈನ್ಯ ಗೋವೆಯನ್ನು ವಶಪಡಿಸಿಕೊಂಡಿತು. ೧೪೯೮ರಲ್ಲಿ ವಾಸ್ಕೋಡಿಗಾಮಾ ಭಾರತಕ್ಕೆ ಸಮುದ್ರ ಮಾರ್ಗವಾಗಿ ಬರುವುದನ್ನು ತಿಳಿದ ನಂತರ ಕೇವಲ ಹನ್ನೆರಡು ವರ್ಷಗಳಲ್ಲಿ ಗೋವೆ ಪೋರ್ಚುಗೀಸರ ವಶವಾಯಿತು. ಭಾರತದಲ್ಲಿ ಬ್ರಿಟಿಶರು, ಫ್ರೆಂಚರು ವಸಾಹತುಗಳನ್ನು ಸ್ಥಾಪಿಸುವ ಇನ್ನೂರೈವತ್ತು ವರ್ಷಗಳ ಮೊದಲೆ ಪೋರ್ತುಗೀಸರು ಭಾರತದಲ್ಲಿ ತಮ್ಮ ಶಾಸನವನ್ನು ಸ್ಥಾಪಿಸಿದ್ದರು. ಅಂತೆಯೇ ಬ್ರಿಟಿಶರು, ಫ್ರೆಂಚರು. ಭಾರತದಿಂದ ಹೊರಟು ಹೋದ ಮೇಲೂ ಪೋರ್ಚುಗೀಸರು ಇಲ್ಲಿಂದ ತೊಲಗಲೇ ಇಲ್ಲ. ಅವರನ್ನು ತೊಲಗಿಸಲು ಭಾರತ ಉಪಾಯವಿಲ್ಲದೇ ದಂಡೋಪಾಯವನ್ನೇ ಕೈಗೊಳ್ಳಬೇಕಾಯಿತು. ನವೆಂಬರ್ ೧೫೧೦ ರಲ್ಲಿ ಭಾರತದಲ್ಲಿ ಸ್ಥಾಪಿಸಿದ ಆಳ್ವಿಕೆಯನ್ನು ೧೯೬೧ ಡಿಸೆಂಬರ್‌ನಲ್ಲಿ ನಾನೂರೈವತ್ತು ವರ್ಷಗಳ ನಂತರ ಸಮಾಪ್ತಿಗೊಳಿಸಬೇಕಾಯಿತು. ತಮ್ಮ ನಾನೂರೈವತ್ತು ವರ್ಷಗಳು ಗೋವೆಯಲ್ಲಿ ಆಳಿದ ಸಮಯದಲ್ಲಿ ವ್ಯವಸ್ಥಿತವಾಗಿ ಪೋರ್ಚುಗೀಸರು ಸ್ಥಾನೀಯ ಸಂಸ್ಕೃತಿಯನ್ನೇ ನಿರ್ನಾಮಗೊಳಿಸಿ ತಮ್ಮ ಸಂಸ್ಕೃತಿಯನ್ನು ಹೇರಲು ಪ್ರಯತ್ನಿಸಿದರು. ವಸಾಹತು ಶಾಸನದ ಪ್ರಭಾವದಿಂದ ಗೋವೆಯ ಜನಜೀವನದ ಯಾವ ಭಾಗವೂ ಹಾನಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸುಪ್ರಸಿದ್ಧ ಪೋರ್ಚುಗೀಸ್ ಇತಿಹಾಸಕಾರ ಕುಮ್ಹಾರಿವಾರನ ಅಭಿಪ್ರಾಯದಂತೆ ವಿಜಯೋನ್ಮಾದದಿಂದ ಪೋರ್ಚುಗೀಸರು ಮೊಟ್ಟಮೊದಲು ಗೋವೆಯಲ್ಲಿ ಅನೇಕ ದೇವಾಲಯಗಳನ್ನು ಕೆಡವಿದರು. ಮೂರ್ತಿಪೂಜಕ ಸಂಸ್ಕೃತಿಯನ್ನು ನಷ್ಟಗೊಳಿಸಿದರು. ದೇಶೀ ಭಾಷೆಗಳಲ್ಲಿ ಬರೆದ ಪುಸ್ತಕಗಳನ್ನು ಸುಟ್ಟು ಬೂದಿ ಮಾಡಿದರು. ಗ್ರಂಥಗಳನ್ನು ಸುಡುವುದಕ್ಕೆ ಪ್ರಬಲ ಕಾರಣವೆಂದರೆ ಸ್ಥಳೀಯರಿಗೆ ಪುನಃ ವಿಗ್ರಹಾರಾಧನೆಯ ಮಹತ್ವ ತಿಳಿಯಬಾರದೆಂಬುದು.

ಇತಿಹಾಸಕಾರನ ಮಾತಿನಲ್ಲಿ ಯಾವುದೂ ಅತಿಶಯೋಕ್ತಿ ಇರಲಿಲ್ಲ. ವಾಸ್ತವಿಕತೆಯ ಅಂಶ ಕಡಿಮೆ ಇದ್ದರೂ ಇರಬಹುದು. ವಿಜಯದ ಪ್ರಥಮೋನ್ಮಾದ ಕೊನೆಯವರೆಗೂ ಇಳಿಯಲಿಲ್ಲ. ಭಾರತ ಗೋವೆಯನ್ನು ವಿಮುಕ್ತಗೊಳಿಸಿದಾಗ ಅಲ್ಲಿದ್ದ ಪೋರ್ಚುಗೀಸರ ಭಾವನೆ ಇದಕ್ಕೆ ಪ್ರತೀಕವಾಗಿತ್ತು.

ವಸಾಹತು ನೀತಿ ಯಾರಿಗೂ ಯಾವಾಗಲೂ ಸಂತೋಷಕರವಾಗಿಲ್ಲ ಎನ್ನುವುದು ನಾವು ಚರಿತ್ರೆಯಿಂದ ತಿಳಿದ ಸಂಗತಿ. ಅಸಂತೋಷದ ಬೆಂಕಿ ಸಮಯ ಬಂದಾಗ ಭುಗಿಲೇಳುತ್ತದೆ, ಅಲ್ಲವೇ?

## ವಿದ್ರೋಹ

೧೬೪೪ರಲ್ಲಿ ಕ್ಯಾಸೆಸ್ಟ್ರೋ ಎಂಬ ರೋಮನ್ ಕೆಥೋಲಿಕ್ ಪಾದರಿ ಚಳುವಳಿಗೆ ನಾಂದಿ ಹಾಡಿದ. ಅನಂತರ ಫ್ರೆಂಚ್ ಕ್ರಾಂತಿಗಿಂತ ಎರಡು ವರ್ಷಗಳ ಮುಂಚೆ ೧೭೮೭ರಲ್ಲಿ ಹದಿನೇಳು ಮಂದಿ ಪಾದರಿಗಳೂ ಏಳು ಜನ ಸೈನಿಕ ಅಧಿಕಾರಿಗಳೂ ಸೇರಿದಂತೆ ಅನೇಕರು ಸರಕಾರದ ಆಳ್ವಿಕೆ ಕಿತ್ತು ಗೋವೆಯಲ್ಲಿ ಗಣತಂತ್ರ

# ಪುನರಾಗಮನ

(ಟೆಲೊ ಮ್ಯಾಸ್ಕರೇಞಾಸ್‌ರ ಒಂದು ಪ್ರಸಿದ್ಧ ಕವಿತೆಯ ಭಾವಾನುವಾದ)

ಕಿಬ್ಬಳ್ಳಿ ಗಣಪತಿ ಶರ್ಮ

ಹಿಂತಿರುಗುವೆ, ಎಂದಾದರೊಂದು ದಿನ,
ತಡವಾದರೂ ಸರಿ, ಖಂಡಿತ!
ನನ್ನ ಸುಂದರ ಜನ್ಮ ಸ್ಥಳಕೆ
ಬಾಲ್ಯವನು ಕಳೆದಿರುವ ಆ ಪುಣ್ಯಭೂಮಿಗೆ
ಗಂಧದಾ ನೌಕೆಯುಲಿ ಕುಳಿತು.
ಕುವಿಚಾರಿಗಳಿಗೂ
ಹೃದಯುದಲ್ಲಿಹ ಸದ್ಭಾವನೆಯ ತೋರಿಸುವೆ.
ತಿರಸ್ಕಾರವಾಗಲಿ, ಸೇಡಾಗಲಿ ಯೋಚಿಸದೆ
ಸತ್ಯವನೆ ನಾ ಹೇಳುವೆ.
"ತನ್ನನ್ನು ಕಡಿದ ಕೊಡಲಿಯನ್ನೂ
ಸುವಾಸಿತಗೊಳಿಸುವ ಶ್ರೀಗಂಧ ಮರದಂತೆ"
ಎಂಬ ಗಾದೆಯನು ನಾ ಅಮರಗೊಳಿಸುವೆ.
ನಾ ಕುಳಿತ ಆ ಗಂಧ ನಿರ್ಮಿತ ನೌಕೆ,
ಯಾತ್ರೆಯಾ ಕೊನೆಯಲ್ಲಿ
ಕೊಂಕಣ ಸಾಗರದ ತೀರದಲಿ
ಅಲೆಗಳ ಮಧ್ಯೆ ಲಂಗರು ಹಾಕಿ ನಿಂತಾಗ,
ತಡಮಾಡದೆ ಧುಮುಕುವೆ.
ಇನ್ನೂ ಮಡಿಸದೇ ಇರುವ ನೌಕಾ ವಸ್ತ್ರ
ಪಟಪಟನೆ ಧ್ವಜದಂತೆ ಹಾರುತ್ತಲಿರುವಾಗ
ಬಾಗಿ ಮುದ್ದಿಸುವೆನಾ
ಬಂಗಾರದ ಮರಳನ್ನು.
ತಾಡ ವೃಕ್ಷಗಳೆಂಬ ಹಸಿರು ಸೀರೆಯನುಟ್ಟ
ಜರತಾರಿ ಮಡಿಲಲ್ಲಿ,
ವಿಶಾಲ ವಿಸ್ತಾರ ಸೈಕತದ ಭೂಮಿಯಲಿ,
ಸುತ್ತಲೂ ಹರಡಿರುವ ಹಸಿರು ವರ್ಣದಲಿ,
ಪವಿತ್ರ ಛವಿಯನ್ನು ಹೃದಯದಲಿ
ಅಡಗಿಸಿಕೊಂಡು, ನತಮಸ್ತಕನಾಗಿ
ಕೈ ಜೋಡಿಸಿ, ಸ್ತುತಿಸುವೆ.
ಬಹುಕಾಲ ನಂತರದಿ, ನಿರ್ವಾಸಿತ ವ್ಯಕ್ತಿಯಾಗಿ
ಮಾತೃಭೂಮಿಗೆ ಮರಳಿ ಪ್ರಾರ್ಥಿಸುವೆ.
"...ಓ ಭರತಮಾತೆ
ಸ್ವಾತಂತ್ರ್ಯ ಪಡೆದು ಋಣಿಯಾಗಿ
ಈ ಪುಣ್ಯಕ್ಷಣದಲ್ಲಿ
ನಾ ನಿನ್ನ ಅಡಿಗೆರಗುವೆ
ಜಯ ಹಿಂದ್, ನಿನಗೆ ಜಯವಾಗಲಿ!
ಜಯವಾಗಲಿ!
ಶಾಂತಿ ಭ್ರಾತೃತ್ವದ ಆ
ನಿನ್ನ ವಿನೀತ ಗೌರವದ ಸಂದೇಶಕ್ಕೆ
ಶುಭವಾಗಲಿ."

ಸ್ಥಾಪಿಸಲು ಚಳುವಳಿಯನ್ನು ಸಂಘಟಿಸಿದರು. ಚರಿತ್ರೆಯಲ್ಲಿ ಇದನ್ನು "ಪಿಂಟೋಸ್ ರಿವೊಲ್ಟ್" ಎಂದು ಕರೆಯಲಾಗಿದೆ. ಆದರೆ ಈ ಆಂದೋಲನ ಯಶಸ್ವಿಯಾಗಲಿಲ್ಲ. ಅಂದಿನ ನಿರಂಕುಶ ಸರಕಾರ ವಿದ್ರೋಹದ ಮುಖಂಡರನ್ನು ಕುದುರೆಗಳ ಬಾಲಕ್ಕೆ ಕಟ್ಟಿ ರಸ್ತೆಗಳಲ್ಲಿ ಎಳೆದಾಡಿಸಿ ಕೊಲ್ಲಿಸಿತಂತೆ. ೧೮೩೫ರಲ್ಲಿ ಬರ್ನಾಡೋ ಪೆರಿಸ್ ದ ಸಿಲ್ವಾ ಎಂಬಾತ ಬ್ರಿಟಿಶ್ ಭಾರತದಲ್ಲಿ ಚಳುವಳಿಕಾರರನ್ನು ಸಂಘಟಿಸಿ, ಗೋವೆಯ ಮೇಲೆ ಆಕ್ರಮಣ ಮಾಡಿದ. ಆದರೆ ಅದೂ ಸಫಲವಾಗಲಿಲ್ಲ. ಹತ್ತೊಂಬತ್ತನೇ ಶತಮಾನದ ಉತ್ತರಾರ್ಧ ಹಾಗೂ ಈ ಶತಮಾನದ ಮೊದಲ ದಶಕದಲ್ಲಿ ಸಾತಾರಾದ ರಾಣೇ ಸಹೋದರರು ಪೋರ್ಚುಗೀಸ್ ಶಾಸಕರಿಗೆ ಸಾಕಷ್ಟು ಉಪದ್ರವ ಕೊಟ್ಟರು. ಸಾತಾರಾದ ದುರ್ಗಮ ಆರಣ್ಯ ಗುಡ್ಡಗಾಡು ಪ್ರವೇಶದಲ್ಲಿ ವಿದ್ರೋಹಿಗಳನ್ನು ನೆಲೆಗೊಳಿಸಿ ರಾಣೇ ಬಂಧುಗಳು ೧೮೫೨ ರಿಂದ ೧೯೧೨ ವರೆಗೆ ಸಮಾರು ಅರವತ್ತು ವರ್ಷ ಕಾಲ ಪೋರ್ಚುಗೀಸ್ ವಸಾಹತುವಾದಿಗಳಿಗೆ ನಿದ್ರಿಸಲು ಬಿಡಲಿಲ್ಲ. ದೀಪಾಜಿ ರಾಣೆಯ ಸಾಹಸಿಕ ಕೃತ್ಯಗಳು ಕಥೆಗಳಾಗಿ ಪರಿವರ್ತಿತಗೊಂಡು ಗೋವೆಯ ವಿಮುಕ್ತಿ ಚಳುವಳಿಗೆ ಪ್ರೇರಕವಾದವು.

ಇತ್ತ ಭಾರತದಲ್ಲಿ ಬ್ರಿಟಿಶರ ಶಾಸನದಿಂದ ಮುಕ್ತವಾಗಲು ಗಾಂಧೀಜಿಯ ನೇತೃತ್ವದಲ್ಲಿ ಜನರ ಆದೋಲನ ಮುಂದುವರಿಯುತ್ತಿರುವಾಗ, ಅತ್ತ ಗೋವೆದಲ್ಲೂ ಈ ಪ್ರಭಾವ ಬೀಳದೇ ಇರಲಿಲ್ಲ. ೧೯೨೮ರಲ್ಲಿ ಬ್ರಿಟಿಶ್ ಭಾರತದೊಡನೆ ಸಂಪರ್ಕ ಬೆಳೆಸುವ ಉದ್ದೇಶದಿಂದ ಟ್ರಿಸ್ಟಾಓ ಬ್ರೆಗಾಂಜಾ ಡಿ ಕುನ್ಹಾ ಎಂಬ ಮೂವತ್ತೇಳು ವರುಷದ ಯುವಕ ಗೋವಾ ಕಾಂಗ್ರೆಸ್ ಸ್ಥಾಪಿಸಿ, ಅದನ್ನು ಭಾರತೀಯ ರಾಷ್ಟ್ರಿಯ ಕಾಂಗ್ರೆಸ್ಸಿನ ಭಾಗವೆಂದು ಸಾರಿದ.

ಇದಕ್ಕೂ ಮುಂಚೆ ೧೯೨೬ರಲ್ಲಿ ಮನೆಯನ್ನು ತೊರೆದು ರಾಷ್ಟ್ರಸೇವೆಗೆ ತಮ್ಮನ್ನು ಮುಡಿಪಾಗಿಟ್ಟ ಗೋವೆಯ ಕೆಲವು ವಿದ್ಯಾರ್ಥಿಗಳು ಟೆಲೊ ಡಿ ಮ್ಯಾಸ್ಕರೇಞಸ್ ಎಂಬ ಯುವಕನ ನೇತೃತ್ವದಲ್ಲಿ ಪೋರ್ಚುಗೀಸ್ ರಾಜಧಾನಿ ಲಿಸ್ಬನ್ನಿನಲ್ಲಿ 'ಹಿಂದೂ ನ್ಯಾಶನಲಿಸ್ಟ್ ಸೆಂಟರ್' (ಹಿಂದೂ ರಾಷ್ಟ್ರವಾದೀ ಕೇಂದ್ರ) ಸ್ಥಾಪಿಸಿ ಮಾತೃಭೂಮಿ ಗೋವೆಯನ್ನು ವಿಮುಕ್ತಗೊಳಿಸಲು 'ಇಂಡಿಯಾ ನೋವಾ' ಎಂಬ ಪತ್ರಿಕೆಯನ್ನು ಹೊರಡಿಸಿದ್ದರು. ಅದರ ಉದ್ದೇಶ ಗೋವೆಯನ್ನು ಸ್ವತಂತ್ರಗೊಳಿಸುವುದಾಗಿತ್ತು. ಇಲ್ಲಿಂದಲೇ ಟೆಲೋ ಡಿ ಮಾಸ್ಕರೇಞಸ್‌ರ ಹಾಗೂ ಅವರ ಸ್ವಾತಂತ್ರ್ಯ ಸಂಗ್ರಾಮದ ಕಥೆ ಆರಂಭಗೊಂಡಿತು.

## ಬಾಲ್ಯ ಹಾಗೂ ತಾರುಣ್ಯ

ಟೆಲೊ ತಮ್ಮ ತಂದೆ ತಾಯಿಗೆ ಒಬ್ಬರೇ ಮಗನಾಗಿದ್ದರು. ಅವರಿಗೆ ಎರಡು ವರ್ಷವಾಗುವುದರಲ್ಲೇ ತಂದೆ ತೀರಿಕೊಂಡಿದ್ದರು. ಟೆಲೊ ಅವರ ತಂದೆ ಬೆಸಿಲೋ ಮ್ಯಾಸ್ಕರೇಞಸ್ ಆಫ್ರಿಕದಲ್ಲಿ ಲೊರೆಂಕೋ ಮಾರ್ಕ್ವೆಸ್‌ನಲ್ಲಿ ಪಾದರಿಯಾಗಿದ್ದರು. ಅವರು ಮೂವತ್ತು ವರ್ಷಗಳವರೆಗೆ ಮೊಸಾಂಬಿಕ್ ಮತ್ತು ಜಂಬೇಸಿಯಾದಲ್ಲಿ ಧರ್ಮಾಧಿಕಾರಿ ಮಿಶನರಿಯಾಗಿದ್ದರು. ಮತ್ತೊಬ್ಬ ಚಿಕ್ಕಪ್ಪ ಬರ್ನಾರ್ಡ್ ಬಹಳ ದೂರ ಬರ್ಮಾರ್ಡಾದಲ್ಲಿ ಸಂಗೀತಗಾರರಾಗಿದ್ದರು. ಚಿಕ್ಕಪ್ಪಂದಿರಿಬ್ಬರೂ ತಮ್ಮಿಂದ ಸಾಧ್ಯವಾದಷ್ಟು ಟೆಲೊರಿಗೆ ಸಹಾಯ ಮಾಡಿದರಲ್ಲದೆ, ಆತನ ವಿದ್ಯಾಭ್ಯಾಸಕ್ಕೆ ಗೋವೆ ಹಾಗೂ ಪೋರ್ಚುಗಲ್‌ನಲ್ಲಿ ವಿಶೇಷ ವ್ಯವಸ್ಥೆ ಮಾಡಿದರು.

ಟೆಲೊ ಐದು ವರ್ಷಗಳ ನಂತರ ವಾಲ್ಪಾದಲ್ಲಿರುವ ಪ್ರಾಥಮಿಕ ಶಾಲೆಗೆ ಸೇರಿದರು. ಆದರೆ ಇಲ್ಲಿಯ ವಿದ್ಯಾಭ್ಯಾಸ ಕೇವಲ ಒಂದು ವರುಷ. ಅನಂತರ ಚಿಕ್ಕಪ್ಪ ಬರ್ನಾರ್ಡರ ಮಾತಿನಂತೆ ಟೆಲೊ ವಾಲ್ಪಾದಿಂದ ಐದು ಮೈಲು ದೂರದಲ್ಲಿರುವ ಮಾಜಾರ್ಡೊದ ಒಂದು ಬೋರ್ಡಿಂಗ್ ಸ್ಕೂಲಿಗೆ ಸೇರಿದರು. ಪ್ರಾಥಮಿಕ ಶಿಕ್ಷಣ ಪೂರೈಸಿದ ನಂತರ ಟೆಲೊ ಪಣಜಿಯ ಲೈಸಿಯಮ್ ಸೇರಿದರು.

ಲೈಸಿಯಮ್ಮಿನಲ್ಲಿ ಟೆಲೊರ ಗೆಳೆಯರ ಗುಂಪಿಗೆ ಸ್ಕೂಲು ಪುಸ್ತಕಗಳಿಗಿಂತಲೂ ಹೊರಗಿನ ಪುಸ್ತಕಗಳನ್ನು ಓದುವುದರಲ್ಲಿ ಆಸಕ್ತಿ ಹೆಚ್ಚಾಗಿತ್ತು. ಟೆಲೊ ಹಾಗೂ ಅವರ ಮಿತ್ರರು 'ರೆವಿಸ್ತಾ

ಎಕೆಡೆಮಿಕಾ' (Academic Review) ಎಂಬ ವಿದ್ಯಾರ್ಥಿ ಸಾಹಿತ್ಯಕ ಪತ್ರಿಕೆಯನ್ನು ತಮ್ಮ ಲೈಸಿಯಮ್‌ನಿಂದ ಹೊರಡಿಸಲಾರಂಭಿಸಿದರು. ಇದೊಂದು ಆ ಪಾಠಶಾಲೆಗೆ ಹೊಸದಾಗಿತ್ತು. ಟೆಲೊ ಈ ಪತ್ರಿಕೆಯ ಸಂಪಾದಕರಾಗಿದ್ದರು. ಇವರೊಂದಿಗೆ ಎಂಟೋಸಿಯೊ ಡಿ-ಕುನ್ಹಾ ಗೊಮೇಜ್ ಮತ್ತು ಬಿಲಾ ನೋವಾ ಲೋಬೋ ಎಂಬ ಇಬ್ಬರು ತರುಣರಿದ್ದರು. ಅಲ್ಲದೆ ಆ ಸಮಯದಲ್ಲಿ ಗೋವೆಯ ಪ್ರಮುಖ ಪತ್ರಿಕೆಗಳಾಗಿದ್ದ 'ಓ ಹೆರಾಲ್ಡೊ' ಮತ್ತು 'ಆ ಪ್ರಾವಿಸೆಯಾ'ಕ್ಕೂ ಲೇಖನಗಳನ್ನು ಬರೆಯುತ್ತಿದ್ದರು.

ಲೈಸಿಯಮ್‌ನಲ್ಲಿ ವಿದ್ಯಾಭ್ಯಾಸ ಮುಗಿಸಿದ ಟೆಲೊ ಅವರನ್ನು ಉಚ್ಚ ಶಿಕ್ಷಣಕ್ಕಾಗಿ ಪೋರ್ಚುಗಲ್‌ಗೆ ಕಳಿಸಲಾಯಿತು.

## ಲಿಸ್ಬನ್ ಮತ್ತು ಕೊಎಂಬ್ರಾ

ಲಿಸ್ಬನ್ನಿನಲ್ಲಿ ಟೆಲೊರಿಗೆ ಗೋವೆಯ ಲೈಸಿಯುಮನಲ್ಲಿ ಸಹಾಧ್ಯಾಯಿಯಾಗಿದ್ದ ಡ್ರಸ್ಟನ್ ರೋಡ್ರಿಗ್ಸ್‌ರ ಭೇಟಿಯಾಯಿತು. ಆತ ಪೋರ್ಚುಗಲ್‌ಗೆ ಮೊದಲೇ ಬಂದಿದ್ದರು. ಇವರಿಬ್ಬರೂ ಕೆಲಹರಿಜ್‌ನಲ್ಲಿ ಒಟ್ಟಿಗೆ ಇರಲು ವ್ಯವಸ್ಥೆ ಮಾಡಿಕೊಂಡರು. ಇವರಿದ್ದ ವಾಸಗೃಹಕ್ಕೆ ಸಿಲ್ವಾ ಕೆಲ್ಡೀರಾ ಎಂಬ ಕಾನೂನು ಕೊನೆಯ ವರ್ಷದ ವಿದ್ಯಾರ್ಥಿ ಆಗಾಗ ಬರುತ್ತಿದ್ದ. ಆತ ಬಹಳ ಹೆದರಿಕೆಯ ಸ್ವಭಾವದವನಂತೆ ಕಾಣುತ್ತಿದ್ದ. ಇವನೊಂದಿಗೆ ಅನೇಕ ವರ್ಷಗಳ ನಂತರ ರಾಜನೈತಿಕ ಅಪರಾಧಕ್ಕಾಗಿ ಟೆಲೊ ಇಪ್ಪತ್ತೈದು ವರ್ಷ ಕಠಿಣ ಕಾರಾಗೃಹ ಶಿಕ್ಷೆ ಅನುಭವಿಸಬೇಕಾಯಿತಂತೆ.

ಟೆಲೊ ಪೋರ್ಚುಗಲ್‌ಗೆ ಬಂದ ಸಂದರ್ಭದಲ್ಲಿ ದೇಶವಲ್ಲಿ ಒಂದು ರೀತಿಯ ಪರಿವರ್ತನೆಯ ಕ್ರಾಂತಿ ಆರಂಭವಾಗಿತ್ತು. ೧೯೧೦ರಲ್ಲಿ ರಾಜಪ್ರಭುತ್ವದ ಸ್ಥಾನದಲ್ಲಿ ಪ್ರಜಾಪ್ರಭುತ್ವ ಸ್ಥಾಪಿತಗೊಂಡಿತು. ಆದರೆ, ಅದು ಅನಿಶ್ಚಯಾತ್ಮಕ ಪರಿಸ್ಥಿತಿಯಲ್ಲಿತ್ತು. ೧೯೨೬ರ ವರೆಗೂ ಈ ಅನಿಶ್ಚಿತತೆಯಿದ್ದು, ಕೊನೆಗೆ ಸೈನ್ಯ ಆಡಳಿತವನ್ನು ವಹಿಸಿಕೊಂಡಿತು. ೧೯೨೭ರಲ್ಲಿ ನಡೆದ ಹರತಾಳದಿಂದ ಲಿಸ್ಬನ್ ವಿಶ್ವವಿದ್ಯಾಲಯದಲ್ಲಿ ಒಂದು ವರ್ಷದ ವಿದ್ಯಾಭ್ಯಾಸ ವ್ಯರ್ಥವಾಯಿತು. ಆದ್ದರಿಂದ ಕೊಎಂಬ್ರಾ ವಿಶ್ವವಿದ್ಯಾಲಯದಲ್ಲಿ ಟೆಲೊ ತಮ್ಮ ಹೆಸರನ್ನು ನೊಂದಾಯಿಸಿಕೊಂಡರು.

ಕೊಎಂಬ್ರಾದಲ್ಲಿ ಡಾ. ಎಂಟೋನಿಯುಂ ಡಾ ಓಲಿವಿರಾ ಸಾಲಜಾರ್ ಎಂಬ ಶಿಕ್ಷಕ ಇದ್ದ. ಆತ ಅರ್ಥಶಾಸ್ತ್ರದ ಅಧ್ಯಾಪಕನಾಗಿದ್ದ. ಅವನಿಗೆ ತನ್ನ ವಿಷಯದಲ್ಲಿ ಆಳವಾದ ಜ್ಞಾನವಿತ್ತು. ಸಾಲಜಾರ್ ಬಹಳ ಶಾಂತ ಸ್ವಭಾವದವನಾಗಿದ್ದು ಯಾವಾಗಲೂ ಅಧ್ಯಯನ ನಿರತನಾಗಿರುತ್ತಿದ್ದ. ಪೋರ್ಚುಗಲ್ಲಿನ ಆರ್ಥಿಕ ತೊಂದರೆಗಳ ಜ್ಞಾನ ಅವನಿಗೆ ಇದ್ದುದರಿಂದ ಅವುಗಳ ನಿವಾರಣೆಗೆ ಅವನಲ್ಲಿ ಅನೇಕ ಸಲಹೆಗಳು ಇದ್ದವು. ತಾನು ತಿಳಿದುಕೊಂಡ ಉಪಾಯಗಳನ್ನು ಜಾರಿಗೆ ತರುವ ಸಂದರ್ಭಗಳನ್ನು ಕಾಣುವ ತವಕ ಅವನಲ್ಲಿತ್ತು. ೧೯೨೮ರಲ್ಲಿ ಆ ಸಂದರ್ಭವೂ ಒದಗಿತು. ಅದೇ ವರ್ಷ ಜನರಲ್ ಕಾರಪೋನಾ ಎಂಬ ಸೈನಾಧಿಕಾರಿ ತಾನು ಸ್ಥಾಪಿಸಿದ ಮಿಲಿಟರಿ ಸರಕಾರಕ್ಕೆ ಸಾಲಜಾರನನ್ನು ಆಹ್ವಾನಿಸಿ, ಅವನಿಗೆ ಹಣಕಾಸು ವಿಭಾಗ ಒಪ್ಪಿಸಿ, ದಿವಾಳಿಯಾಗಿದ್ದ ವಿತ್ತ ವ್ಯವಸ್ಥೆಯನ್ನು ಸುಧಾರಿಸಲು ಅವಕಾಶ ಕಲ್ಪಿಸಿದ.

೧೯೩೨ರಲ್ಲಿ ಸಾಲಜಾರ್ ಪೋರ್ಚುಗಲ್‌ನ ಪ್ರಧಾನ ಮಂತ್ರಿಯಾದ. ನಂತರ ವರ್ಷಗಳು ಉರುಳುತ್ತಿದ್ದಂತೆ ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡ ಈತ ಕೊನೆಗೆ ನಿರಂಕುಶ ಅಧಿಕಾರಿಯಾದ. ಸಾಲಜಾರ್ ಈ ರೀತಿ ನಿರಂಕುಶ ಅಧಿಕಾರ ನಡೆಸಿದ ದುಷ್ಪರಿಣಾಮದಿಂದ ಪೋರ್ಚುಗೀಸರ ವಸಾಹತುಗಳಲ್ಲಿ ಸ್ವಾತಂತ್ರ್ಯ ಪಡೆಯುವ ಆಸೆ ಆಕಾಂಕ್ಷೆಗಳೇ ಲುಪ್ತವಾದವು.

ಟೆಲೊ ಅವರು 'ಕ್ರಾಂತಿಯ ಮನೋಭಾವನೆಯ ಅಭಿವ್ಯಕ್ತಿ' ಎಂಬ ಲೇಖನವನ್ನು 'ಓ ಭಾರತ'ದಲ್ಲಿ ಪ್ರಕಟಿಸಲು ಲಿಸ್ಬನ್ನಿನಿಂದ ಗೋವೆಗೆ ಕಳಿಸಿದರು. ಈ ಲೇಖನದ ಶೀರ್ಷಿಕೆ "ಡೆಥ್ ಟು ದಿ ಐಡಲ್ಸ್" (ಮೂರ್ತಿಗಳು ನಾಶವಾಗಲಿ). 'ಓ ಭಾರತ'ದ ಪ್ರಕಾಶಕ, ಸಂಪಾದಕರೂ ಆಗಿದ್ದ ಜೆ. ಪಿ. ಹೆಗಡೊ ದೇಸಾಯಿ ಕ್ವೆಪಮ್(ಗೋವಾ)ನಲ್ಲಿ ವಾಸಿಸುತ್ತಿದ್ದರು.

ಆ ಲೇಖನದ ಸಾರಾಂಶ ಹೀಗಿತ್ತು.

"ನಮಗೆ ಪ್ರಾಥಮಿಕ ಪಾಠಶಾಲೆಯಲ್ಲೇ ಪೋರ್ಚುಗೀಸ್ ಶಾಸಕರು ಪೋರ್ಚುಗಲ್ ನಮ್ಮ ಮಾತೃಭೂಮಿಯೆಂದೂ, ನಾವು ಪೋರ್ಚುಗೀಸರೆಂದೂ ಅಸಹ್ಯ ಹಾಗೂ ಅಸತ್ಯ ಪೂರ್ಣ ವಿಷಯಗಳನ್ನು ಕಲಿಸುತ್ತಾರೆ. ಪೋರ್ಚುಗೀಸರು ಇನ್ನೂ ಅನಾಗರಿಕ ಪಾಶವಿಕ ಜೀವನ ನಡೆಸುತ್ತಿರುವಾಗ, ಗ್ರೀಕ್ ಹಾಗೂ ರೋಮ್ ಸಂಸ್ಕೃತಿಯೂ ಬಾಲ್ಯಾವಸ್ಥೆಯಲ್ಲಿರುವಾಗ ಸುಂದರ, ಸುಸಂಪನ್ನ ಸಾಂಸ್ಕೃತಿಕ ಜೀವನ ನಡೆಸುತ್ತಿದ್ದ ಭಾರತದ ಪುಣ್ಯಭೂಮಿಯ ಪರಂಪರೆಗೆ ನಾವು ಸೇರಿದ್ದೇವೆಂದು ಅವರು ನಮಗೆ ಶಿಕ್ಷಣ ನೀಡುವದಿಲ್ಲ. ಯಾರು ನಮ್ಮ ಮೇಲೆ ಅತ್ಯಾಚಾರ ನಡೆಸಿ, ನಮ್ಮ ದೇವಾಲಯಗಳನ್ನು ಹಾಳು ಮಾಡಿ, ನಮ್ಮ ಮನೆಗಳಿಗೆ ನುಗ್ಗಿ, ನಮ್ಮ ಮೇಲೆ ಬಲಾತ್ಕಾರ ಮಾಡಿ, ನಮ್ಮ ಪವಿತ್ರ ನಿಯಮ, ವಿಧಿಗಳನ್ನು ನಾಶಗೊಳಿಸಿ, ನಮ್ಮ ಮಾತೃಭೂಮಿಯ ಮೇಲೆ ದಾಳಿ ಮಾಡಿದ್ದರೋ ಅಂಥ ನೀಚ ಪೋರ್ಚುಗೀಸ್ ಅಧಿಕಾರಿ, ಶಾಸಕರನ್ನು ಹೊಗಳುವ ಪಾಠಗಳನ್ನು ಕಲಿಸುತ್ತಿದ್ದಾರೆ. ಪೋರ್ಚುಗೀಸರು ನಮ್ಮ ದೇಶದಲ್ಲಿ ಆಕ್ರಮಣ ನಡೆಸಿ, ನಮ್ಮ ಬೆಳೆಗಳನ್ನು ಸುಟ್ಟು ಹಾಕಿ, ನಮ್ಮಲ್ಲಿ ಅಂತಃಕಲಹದ ಬೀಜ ಬಿತ್ತಿ ಸ್ವಾರ್ಥ ಸಾಧಿಸಿಕೊಂಡ ನೀತಿಯನ್ನು ನಮಗೆ ತಿಳಿಯದಂತೆ ಮಾಡುತ್ತಾರೆ...., ಅಲ್ಲದೆ ಅವರು ನಮ್ಮ ಪೂರ್ವಜರ — ಭಾರತೀಯರ ಶೌರ್ಯಪೂರ್ಣ ಸಾಹಸದ ಕಥೆಗಳನ್ನಾಗಲಿ, ಕಾರ್ಯಗಳನ್ನಾಗಲಿ ಇತಿಹಾಸದಲ್ಲಿ ಕಲಿಸದೆ, ಪೋರ್ಚುಗೀಸರ ಚರಿತ್ರೆಯನ್ನೇ ಬಾಯಿಪಾಠ ಮಾಡಿಸುತ್ತಿದ್ದಾರೆ...

"...... ಎಂದು ನಮ್ಮ ಹೃದಯದಲ್ಲಿ ಪ್ರಾಚೀನ ಪರಂಪರೆ, ಹಾಗೂ ಪದ್ಧತಿ-ನಿಯಮಗಳೂ, ಭಾಷೆಗಳ ಬಗ್ಗೆ ಭಕ್ತಿಭಾವ ಹುಟ್ಟುವುವೋ ಅಂದೇ ನಾವು ಇಂದು ನಂಬಿದ ಸುಳ್ಳು ನಂಬಿಕೆಯ ಮಿಥ್ಯಾ ಮೂರ್ತಿಯ ಪೂಜೆ ಕೊನೆಗೊಳ್ಳುತ್ತದೆ."

ಟೆಲೋ ಅವರ ಈ ಲೇಖನ ಸ್ವಾಭಾವಿಕವಾಗಿ ಸರಕಾರಿ ವಿಭಾಗದಲ್ಲಿ ಕಳವಳವನ್ನೇ ಉಂಟು ಮಾಡಿತು. ಲೇಖಕ ಹಾಗೂ 'ಓ ಭಾರತ'ದ ಪ್ರಕಾಶಕರ ಮೇಲೆ ಮೊಕದ್ದಮೆ ಹೂಡಲಾಯಿತು. ಪೋರ್ಚುಗಲ್ಲಿನ ರಾಜಧಾನಿ ಲಿಸ್ಬನ್ನಿನ ಬೋಆ ಹೋರಾದ ಕ್ರಿಮಿನಲ್ ನ್ಯಾಯಾಲಯದಲ್ಲಿ ಟೆಲೊ ಅವರಿಗೆ ಹಾಜರಾಗುವಂತೆ ಆದೇಶ ನೀಡಲಾಯಿತು. ನ್ಯಾಯಾಲಯದಲ್ಲಿ ಎಚ್ಚರಿಕೆ ಕೊಟ್ಟು, ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಯಿತು. ಬಹುಶಃ ಟೆಲೋ ಚಿಕ್ಕ ವಯಸ್ಸಿನವರಾಗಿದ್ದ ಕಾರಣ ಅಧಿಕಾರಿಗಳು ಹೆಚ್ಚು ಗಮನ ಕೊಡಲಿಲ್ಲ. ಇದು ೧೯೨೬ರಲ್ಲಿ ನಡೆದ ಘಟನೆ, (ಆದರೆ ಮುಂದೆ ಮೂವತ್ತಾರು ವರ್ಷಗಳ ನಂತರ ೧೯೬೨ರಲ್ಲಿ ಇದೆ ಬೋಆ ಹೋರಾ ನ್ಯಾಯಾಲಯದಲ್ಲಿ ಟೆಲೊ ಅವರ ಭಯಂಕರವಾದ ಮೊಕದ್ದಮೆ ಎದುರಿಸಬೇಕಾಗಬಹುದೆಂದು ಪ್ರಾಯಶಃ ಭಾವಿಸಿರಲಾರರು.)

ಈ ಮಧ್ಯೆ ಟೆಲೊ ಮತ್ತು ಅವರ ಮಿತ್ರರು ತಮ್ಮ ರಾಷ್ಟ್ರೀಯ ಭಾವನೆಯನ್ನು 'ಸೆಂಟ್ರೋ ನ್ಯಾಶನಲಿಸ್ಟ್ ಹಿಂದು' (ಹಿಂದು ರಾಷ್ಟ್ರೀಯ ಕೇಂದ್ರ) ಸ್ಥಾಪಿಸುವ ಮೂಲಕ ಜಗತ್ತಿಗೆ ತೋರಿಸಿಕೊಟ್ಟರು. ಈ ಸಂಸ್ಥೆ ೧೯೨೬ರ ಜನವರಿ ೨೭ ರಂದು ಜನ್ಮ ತಾಳಿತು. ಇದು ಮಿತ್ರರು ಒಂದು ಕಡೆ ಸೇರುವ ಸ್ಥಳ ಮಾತ್ರವಾಗಿರದೆ, ರಾಷ್ಟ್ರೀಯ ವಿಚಾರಗಳ ವಿನಿಮಯದ ಸಶಕ್ತ ಸಾಧನವಾಯಿತು. ಕೊಎಂಬ್ರಾದಲ್ಲಿ ಟೆಲೊ ಅವರಿಗೆ ತಮ್ಮಂತೆ ಭಾವನೆ ಹೊಂದಿದ ಗೋವೆಯ ಅನೇಕ ವಿದ್ಯಾರ್ಥಿಗಳ ಪರಿಚಯವೂ ಬೆಳೆಯಿತು. ಇವರೆಲ್ಲಾ ಸೇರಿ ಕೆಲವು ಪ್ರಗತಿಪರ ವಿಚಾರ ಹೊಂದಿದ ಅಧ್ಯಾಪಕರ ಪ್ರೋತ್ಸಾಹ ಹಾಗೂ ಪ್ರೇರಣೆಯಿಂದ ೧೯೨೭ರಲ್ಲಿ ಕೊಎಂಬ್ರಾ ವಿಶ್ವವಿದ್ಯಾನಿಲಯದ ಕಲಾ ವಿಭಾಗಕ್ಕೆ ಸೇರಿದಂತೆ ಈ 'ಇಂಡಿಯನ್ ಇನ್‌ಸ್ಟಿಟ್ಯೂಟ್'ನ್ನು ಸ್ಥಾಪಿಸಿದರು. ಈ ಸಂಸ್ಥೆಯಲ್ಲಿ ಭಾರತೀಯ ಇತಿಹಾಸ ಹಾಗೂ ದರ್ಶನ ವೇದಾಂತಗಳನ್ನು ಕಲಿಸುವ ವ್ಯವಸ್ಥೆಯಾಯಿತು. ಅಲ್ಲದೆ 'ಇಂಡಿಯಾ ನೋವಾ' ಎಂಬ ಪತ್ರಿಕೆಯನ್ನು ಹೊರಡಿಸಲಾಯಿತು. 'ಇಂಡಿಯನ್ ಇನ್‌ಸ್ಟಿಟ್ಯೂಟ್' ಮತ್ತು 'ಇಂಡಿಯಾ ನೋವಾ'ಗಳ ಮೂಲ

ಉದ್ದೇಶ ಗೋವೆ ಮತ್ತು ಭಾರತದ ವಿಚಾರಗಳ ಪರಿಚಯ ಮಾಡುವದಾಗಿತ್ತು. 'ಇಂಡಿಯಾ ನೋವಾ' ಪೋರ್ಚುಗೀಸ್ ವಿದ್ಯಾವಂತರಲ್ಲಿ ಪ್ರಾಚ್ಯ ಸಂಸ್ಕೃತಿಯ ಬಗೆಗೆ ಅಭಿಮಾನ ಹುಟ್ಟಿಸುವ ಧ್ಯೇಯವನ್ನು ಹೊಂದಿತ್ತು. ಪ್ರಾಚ್ಯ ಸಂಸ್ಕೃತಿಯ ಪ್ರಚಾರ ಹಾಗೂ ಪ್ರಸಾರ ಮಾಡುತ್ತಿರುವ ಈ ಪತ್ರಿಕೆಯನ್ನು ಪ್ರಶಂಸಿಸಿ ರವೀಂದ್ರನಾಥ ಠಾಕೂರ್, ರೋಮಾಂ ರೊಂಲಾ, ಸಿಲ್ವೆನ್ ಲೆದ ಮುಂತಾದವರು ಶುಭಸಂದೇಶಗಳನ್ನು ಕಳಿಸಿದ್ದರು. ಇವರ ಅಮೂಲ್ಯ ಸಂದೇಶಗಳಿಂದ ಉತ್ಸಾಹಗೊಂಡ ಯುವಕರು ತಮ್ಮ ಸಂಪರ್ಕವನ್ನು ಕೊನೆಯವರೆಗೂ ಉಳಿಸಿಕೊಂಡಿದ್ದರು.

ಕಾನೂನು ಶಾಸ್ತ್ರದ ಅಧ್ಯಯನ ಮುಗಿದ ನಂತರ ಟೆಲೊ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ನೇಮಕಗೊಂಡರು. ಮೂರು ವರ್ಷ ನೌಕರಿ ಮಾಡಿದ ಮೇಲೆ ನೋಟರಿ ಪಬ್ಲಿಕ್ ಉದ್ಯೋಗವನ್ನೂ ಕೈಗೊಂಡರು. ಇದು ಅವರಿಗೆ ಆಕರ್ಷಕವಾಗಿತ್ತಷ್ಟೆ ಅಲ್ಲ, ಇದರಲ್ಲಿ ಹೆಚ್ಚು ಸ್ವಾತಂತ್ರ್ಯ ಸಿಗುತ್ತಿತ್ತು. ವಕಾಲತ್ತನ್ನೂ ಮಾಡುತ್ತಿದ್ದರು.

ಅವಕಾಶ ಸಿಕ್ಕಿದಾಗ ಓದುವುದು ಅವರ ಅಭಿರುಚಿಯಾಗಿತ್ತು. ಜೊತೆಯಲ್ಲೇ ಬರೆಯುವುದೂ ಹವ್ಯಾಸವಾಯಿತು. ತಮ್ಮ ಈ ಪ್ರಯತ್ನದಲ್ಲಿ ಪೋರ್ಚುಗೀಸರಿಗೆ ಸಂಸ್ಕೃತ ಹಾಗೂ ಭಾರತೀಯ ಭಾಷೆಗಳ ಸಾಹಿತ್ಯಕ ಪರಿಚಯ ಮಾಡುವಲ್ಲಿ ಯಶಸ್ವಿಯಾದರು. ಕಾಲಿದಾಸನ 'ಶಾಕುಂತಲ' ನಾಟಕ, ಶೂದ್ರಕನ 'ಮೃಚ್ಛಕಟಿಕ', ಸೋಮದೇವನ 'ಕಥಾಸರಿತ್ಸಾಗರ' ಗ್ರಂಥಗಳನ್ನು ಫ್ರೆಂಚ್ ಭಾಷೆಯಿಂದ ಪೋರ್ಚುಗೀಸ್ ಭಾಷೆಗೆ ಅನುವಾದಿಸಿದರು.

ಟೆಲೊ ಅವರಿಗೆ ಈ ಮಧ್ಯೆ ಪೋರ್ಚುಗೀಸ್ ಯುವತಿಯೊಡನೆ ಪ್ರೇಮ-ವಿವಾಹ ನಡೆಯಿತು. ಅವಳಲ್ಲಿ ಜನಿಸಿದ ಇಬ್ಬರು ಪುತ್ರಿಯರಿಗೆ ಕ್ರಮವಾಗಿ ಪದ್ಮಿನಿ ಮತ್ತು ಲಕ್ಷ್ಮೀ ಎಂದು ನಾಮ

ಕರಣ ಮಾಡಿದರು.

ಇತ್ತ ದೂರದ ಭಾರತದಲ್ಲಿ ಚರಿತ್ರೆಯ ಘಟನೆಗಳು ಕ್ಷಿಪ್ರದಲ್ಲಿ ನಡೆಯುತ್ತ ೧೯೪೭ರ ಆಗಸ್ಟ್ ೧೫ ರಂದು ಸ್ವಾತಂತ್ರ್ಯ ದಿನ ಆಚರಿಸಲಾಯಿತು.

ಭಾರತ ಸ್ವತಂತ್ರವಾಗಿತ್ತು. ಆದರೆ ಟೆಲೊ ಅವರ ಗೋವೆ ಇನ್ನೂ ಪರದಾಸ್ಯದಲ್ಲೇ ಇತ್ತು. ರಾಮಮನೋಹರ ಲೋಹಿಯಾ ಅವರ ನೇತೃತ್ವದಲ್ಲಿ ಗೋವೆಯ ವಿಮೋಚನೆಯ ಚಳುವಳಿಯನ್ನು ೧೯೪೬ರ ಜೂನ್ ೧೮ ರಂದು ನಡೆಸಲಾಗುವುದೆಂಬ ಸುದ್ದಿ ಟೆಲೊ ಅವರಿಗೆ ತಿಳಿದಾಗ ತಾನೀಗ ಗೋವೆಯಲ್ಲಿದ್ದರೆ ಚೆನ್ನಾಗಿರುತ್ತಿತ್ತು ಎಂದುಕೊಂಡರು. ಭಾರತಕ್ಕೆ ಹಿಂತಿರುಗಿ ಗೋವೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗ ವಹಿಸಬೇಕೆಂಬ ಇಚ್ಛೆ ಮೊದಲಿನಿಂದಲೂ ಇತ್ತು. ಆದರೆ ಗೋವೆಯಲ್ಲಿ ನಡೆದ ಪೋರ್ಚುಗೀಸರ ಪ್ರಚಂಡ ದಬ್ಬಾಳಿಕೆ ಹಾಗೂ ಹಿಂಸಾಕಾಂಡಗಳನ್ನು ತಾವು ದೂರದಲ್ಲಿದ್ದು ನೋಡುವುದು ಸರಿಯಾಗದೆಂದು ಭಾವಿಸಿ, ಪ್ರತ್ಯಕ್ಷವಾಗಿ ಭಾಗವಹಿಸಬೇಕೆಂದು ಯೋಚಿಸಿದರು. ಅದಕ್ಕಾಗಿ ತಮ್ಮ ಕೆಲಸಕ್ಕೆ ದೀರ್ಘಾವಧಿಯ ರಜೆ ಹಾಕಿದರು. ರಜೆ ಮಂಜೂರಾದ ಕೂಡಲೇ ೧೯೪೮ರ ಆಗಸ್ಟ್ ೩೧ ರಂದು ಪೋರ್ಚುಗಲ್‌ನಿಂದ ಸ್ವಾತಂತ್ರ್ಯ ಯುದ್ಧದಲ್ಲಿ ಸಕ್ರಿಯ ಭಾಗ ವಹಿಸಲು ಭಾರತಕ್ಕೆ ಹೊರಟರು.

ಟೆಲೊ ೧೯೪೮ರ ಸೆಪ್ಟೆಂಬರ್ ೨ರಂದು ಮುಂಬಯಿ ತಲಪಿದರು. ಇದಕ್ಕೆ ಮುಂಚೆ ಗೋವೆಯನ್ನು ಬಿಟ್ಟರೆ ಭಾರತದ ಯಾವ ಭಾಗವನ್ನೂ ನೋಡಿರದಿದ್ದ ಅವರಿಗೆ ಮುಂಬಯಿ ಅಪರಿಚಿತ ಸ್ಥಳವಾಗಿತ್ತು. ಅವರಿಗೆ ಆಗ ೪೮ ವರ್ಷ. ತಮ್ಮ ವಯಸ್ಸಿನಲ್ಲಿ ೨೫ ವರುಷಕ್ಕಿಂತಲೂ ಹೆಚ್ಚು ಕಾಲ ಪೋರ್ಚುಗಲ್‌ನಲ್ಲಿ ಕಳೆದಿದ್ದರು. ಆದರೂ ಭಾವನಾತ್ಮಕವಾಗಿಯೂ ಆಧ್ಯಾತ್ಮಿಕವಾಗಿಯೂ ತಮ್ಮನ್ನು ಸಂಪೂರ್ಣ ಭಾರತೀಯನಾಗಿ ಅನುಭವಿಸಿಕೊಂಡಿದ್ದರು.

ಟೆಲೊ ಮೊಟ್ಟಮೊದಲು ಸಂಪೂರ್ಣ ಭಾರತದಲ್ಲಿ ಉತ್ತರದಿಂದ ದಕ್ಷಿಣದ ತುದಿಗೂ, ಪೂರ್ವದಿಂದ ಪಶ್ಚಿಮದ ಕೊನೆಗೂ ಬಿರುಗಾಳಿಯಂತೆ ಸಂಚರಿಸಿದರು. ತಮ್ಮ ಸಂಚಾರದ ಅವಧಿಯಲ್ಲಿ ಅನೇಕರನ್ನು ಕಂಡು ಮಾತನಾಡಿದರು. ಆಚಾರ–ವಿಚಾರ, ವ್ಯವಹಾರ–ಸಂಪ್ರದಾಯಗಳನ್ನು ತಿಳಿದುಕೊಂಡರು. ರೈಲಿನಲ್ಲಿ ಮೂರನೇ ದರ್ಜೆಯಲ್ಲಿ ಗುಂಪು ಗದ್ದಲದಲ್ಲಿ ಸಂಚರಿಸಿ ಅವರ ಮನೋಭಾವನೆಯನ್ನು ತಿಳಿಯಲು ಪ್ರಯತ್ನಿಸಿದರು. ಹೈದರಾಬಾದಿನಲ್ಲಿ ಭಾರತೀಯ ಪೋಲೀಸರ ಕ್ರಮವನ್ನು ಕಣ್ಣಾರೆ ಕಂಡರು. ಅಜಂತಾ, ಎಲ್ಲೋರಾಗಳನ್ನು ಸಂದರ್ಶಿಸಿದರು. ಲಖನೌದಲ್ಲಿ ಅಂದು ರಾಜ್ಯಪಾಲರಾಗಿದ್ದ ಸರೋಜಿನಿ ನಾಯಿಡು ಅವರನ್ನು ಕಂಡರು. 'ಭಾರತ ಕೋಕಿಲೆ'ಯ ಕವಿತ್ವವನ್ನು ಆನಂದಿಸಿದರು. ಭಾರತದಲ್ಲಿದ್ದು ಗೋವೆಯ ವಿಮೋಚನೆಗೆ ಕ್ರಮ ಕೈಗೊಳ್ಳಲು ಆಶೀರ್ವಾದ ಬೇಡಿದರು. ನಂತರ ದಿಲ್ಲಿಗೆ ಬಂದರು. ಪ್ರಾರಂಭದಿಂದಲೂ ತಾವು ಗೌರವದಿಂದ ನೋಡುತ್ತಿದ್ದ ಪ್ರಧಾನಿ ಜವಾಹರಲಾಲ ನೆಹರೂರನ್ನು ಮೊಟ್ಟಮೊದಲು ನೋಡಿ ಕೃತಾರ್ಥನಾದೆನೆಂದು ಭಾವಿಸಿದರು.

## ಐತಿಹಾಸಿಕ ಘಟನೆ

೧೯೪೬ರ ಜೂನ್ ೧೮ರಂದು ಐತಿಹಾಸಿಕ ಘಟನೆಯೊಂದು ನಡೆಯಿತು. ಡಾ. ರಾಮಮನೋಹರ ಲೋಹಿಯಾ ಪ್ರಪ್ರಥಮವಾಗಿ ಕ್ರಾಂತಿ ಯುದ್ಧದ ಕಹಳೆ ಊದಿದಾಗ ಬಾಂಬ್ ಸಿಡಿದಂತಾಗಿ ಕ್ರಾಂತಿಯ ಜ್ವಾಲೆಯಿಂದ ಭಾರತದಲ್ಲಿದ್ದ ಕೊನೆಯ ವಸಾಹತು ಮುಕ್ತಿಗೊಳ್ಳಲೇಬೇಕಾಯಿತು.

ಲೋಹಿಯಾ ಮತ್ತು ಮ್ಯಾನೆಜನೇಸ್ ಇಬ್ಬರೂ ಬರ್ಲಿನ್ನಿನಲ್ಲಿ ಸಹಪಾಠಿಗಳಾಗಿದ್ದರಂತೆ. ಜೂನ್ ತಿಂಗಳಿನ ಆದಿಯಲ್ಲಿ ಡಾ. ಜೂಲಿಯೋ ಮ್ಯಾನೆಜನೇಸರು ಡಾ. ಲೋಹಿಯಾರ ಆಹ್ವಾನದಂತೆ ಗೋವೆಗೆ ಬಂದಿದ್ದರು. ಲೋಹಿಯಾರನ್ನು ಅಲ್ಲಿಗೆ ಮನೋರಂಜನೆ ಹಾಗೂ ವಿಶ್ರಾಂತಿಗಾಗಿ ಆಹ್ವಾನಿಸಲಾಗಿತ್ತು. ಅತಿಥಿಗಳಿಗಾಗಲಿ, ಆತಿಥೇಯರಿಗಾಗಲಿ ಈ ಪ್ರಯಾಣ ಕ್ರಾಂತಿಯ ಆಹ್ವಾನವಾಗಿ ಪರಿಣಮಿಸಬಹುದೆಂಬ ಕಲ್ಪನೆ ಬಂದಿರಲಿಲ್ಲ. ಡಾ. ಲೋಹಿಯಾ ಜೂನ್ ೧೮ರಂದು ಮಾರ್ಗೋವಾದಲ್ಲಿ ಭಾಷಣ ಮಾಡುವ

ರೆಂಬ ಸುದ್ದಿ ಕರ್ಣೋಪಕರ್ಣವಾಗಿ ಹರಡಿ ಬಹಳ ಜನರು ಸೇರಿದರು. ಸಂಜೆ ನಾಲ್ಕೂವರೆ ಗಂಟೆಗೆ ಸಮಯಕ್ಕೆ ಲೋಹಿಯಾ ವಿಕ್ಟೋರಿಯಾ(ಕುದುರೆ ಗಾಡಿ)ದಿಂದ ಮ್ಯಾನೆಜನೆಸರ ಜೊತೆ ಇಳಿದಾಗ ಸಾಲಿಸೀಟರ್ ಪ್ರಶಂಸಕ ಕ್ಯಾಸಲೆ ಮಿರಾಂಡಾ ಅಲ್ಲಿ ನಿಂತಿದ್ದನು. ಆತ ಅವರಿಬ್ಬರಿಗೂ ಕೂಡಲೇ ಹಿಂತಿರುಗುವಂತೆ ಆದೇಶ ನೀಡಿದ. ಆತನ ಮಾತನ್ನು ಗಮನಿಸದೆ ಅವರಿಬ್ಬರೂ ಸಭೆಯ ಸ್ಥಳಕ್ಕೆ ನಡೆದೇ ಹೋದರು.

ಸಭಾ ವೇದಿಕೆಯನ್ನು ತಲಪಿದವರೇ ಲೋಹಿಯಾ ತಾವು ಬರೆದು ತಂದ ಭಾಷಣವನ್ನು ಓದಲಾರಂಭಿಸಿದರು. ಕೆಲವೇ ಸಾಲುಗಳನ್ನು ಓದುವದರಲ್ಲೇ ಕ್ಯಾಪ್ಟನ್ ಮಿರಾಂಡಾ ಗುಂಪನ್ನು ಸರಿಸುತ್ತಾ ಲೋಹಿಯಾರ ಬಳಿಗೆ ಬಂದು ಎದುರಿಗೇ ನಿಂತು ಪಿಸ್ತೂಲು ತೋರಿಸಿದನು. ಡಾ. ಲೋಹಿಯಾ ಪಿಸ್ತೂಲು ಸಹಿತ ಕ್ಯಾಪ್ಟನ್ ಮಿರಾಂಡನನ್ನು ಬದಿಗೆ ತಳ್ಳಿ ತಮ್ಮ ಭಾಷಣ ಮುಂದುವರಿಸಿದರು. ಆದರೆ ಅವರು ಭಾಷಣ

ಮುಗಿಸುವದಕ್ಕೆ ಮುಂಚೆಯೇ ಲೋಹಿಯಾ ಮ್ಯಾನೆಜನೇಸ್ ಇಬ್ಬರನ್ನೂ ಬಂಧಿಸಿ ಹತ್ತಿರದ ಪೋಲೀಸ್ ಠಾಣೆಗೆ ಮುಟ್ಟಿಸಿದನು. ಗೋವೆಯಲ್ಲಿ ಸವಿನಯ ಆಜ್ಞೆಯ ಉಲ್ಲಂಘನೆ ಚಳುವಳಿಗೆ ಸೂತ್ರಪಾತವಾಗಿ ಇದು ಪರಿಣಮಿಸಿತು.

ಡಾ. ಲೋಹಿಯಾರ ಈ ಬಂಧನ ಗೋವೆಯ ಜನತೆಗೆ ಸಾಮೂಹಿಕ ಅಸಹಕಾರ ಆಂದೋಲನ ಪ್ರಾರಂಭಿಸಲು ಆಹ್ವಾನ ನೀಡಿತು. ಲೋಹಿಯಾರ ಭಾಷಣಕ್ಕೆ ಪ್ರತಿಕ್ರಿಯೆ ಚನ್ನಾಗಿತ್ತು. ಅವರ ಗೈರುಹಾಜರಿಯಲ್ಲೂ ಜಯಜಯಕಾರಗಳು ಮೊಳಗಿದವು. ಗುಂಪು ಗುಂಪಾಗಿ ಸೇರಿದ ಜನರ ಮೇಲೆ ಲಾಠಿ ಚಾರ್ಜು ನಡೆಯಿತು. ರಕ್ತದ ಹೊಳೆಯೇ ಹರಿಯಿತು. ವರ್ಗಭೇದ, ಜಾತಿ ಭೇದಗಳನ್ನು ಮರೆತು ಎಲ್ಲಾ ಮಕ್ಕಳು, ಮುದುಕರು, ಸ್ತ್ರೀ–ಪುರುಷರು ಒಂದಾಗಿ ಪೋಲೀಸರ ಲಾಠಿ ಪ್ರಹಾರಗಳನ್ನು ಸಹಿಸಿದರು. ತಮ್ಮ ಒಂದೇ ಬೆರಳು ತೋರಿಸಿ ಡಾ. ಲೋಹಿಯಾ ಬಹುಕಾಲದಿಂದ ಮನದಲ್ಲೆ ಹುದುಗಿದ್ದ ಗೋವೆಯ ಜನತೆಯ ಸ್ವಾತಂತ್ರ್ಯ ಬಯಕೆಗೆ ಮಾರ್ಗದರ್ಶನ ಮಾಡಿ ಹೋರಾಡಲು ಪ್ರೇರೆಪಿಸಿದರು. ಇದೊಂದು ಅವಿಸ್ಮರಣೀಯ ಘಟನೆಯ ದಿನ.

## ಟೆಲೊ ಆಗಮನ

೧೯೪೬ರ ಈ ಘಟನೆಯ ನಂತರ ಚರಿತ್ರ ನಾಯಕನಾಗಿ ಟೆಲೊ ಗೋವೆಯಲ್ಲಿ ಕಾಣಿಸಿಕೊಂಡರು. ಅವರು ಬರುತ್ತಿದ್ದಂತೆಯೇ ಅಧಿಕಾರಿಗಣ ಎಚ್ಚರಗೊಂಡಿತು. ಅವರು ಭಾರತದಲ್ಲಿ ಮುಂಬಯಿ ಹಾಗೂ ಇನ್ನಿತರ ಸ್ಥಳಗಳಲ್ಲಿ ನಾಯಕರನ್ನು ಭೇಟಿ ಮಾಡಿದ್ದರಿಂದ ಅವರನ್ನು ಸಂದಿಗ್ಧ ವ್ಯಕ್ತಿಯಾಗಿ ತಿಳಿಯಲಾಗಿತ್ತು. ಸರಕಾರದ 'ಕಪ್ಪು ಪಟ್ಟಿ'ಯಲ್ಲಿ ಟೆಲೋರ ಹೆಸರು ಮೊದಲಿನದಾಗಿತ್ತು. ಅಲ್ಲದೆ ಮುಂಬಯಿಯಿಂದ ಪತ್ರಿಕೆಗಳಿಗೆ ಪ್ರಕಟನೆಗೆಂದು ಟೆಲೊ ಕಳಿಸಿದ್ದ ಹಾಂಡು ಲಿಪಿ, ಕವಿತೆ, ಸಂದೇಶಗಳು ಪೋಲಿಸರ ಕೈಗೆ ಸಿಕ್ಕಿದವು. ಇವೆಲ್ಲ ಶಾಂತಿಗೆ ಭಂಗ ತರುವಂಥವೆಂದು ಗೋವೆಯ ಪೋಲೀಸರು ಭಾವಿಸಿದ್ದರು. ಆದ್ದರಿಂದ ಪೋಲೀಸರ ಕಣ್ಣು ತಮ್ಮ ಮೇಲೆ ಇರುವುದೆಂದು ತಿಳಿದಾಗ ಟೆಲೊ ಮುಂಬಯಿಗೇ ಹೋಗಲು ನಿರ್ಧರಿಸಿದರು.

## 'ರಿಸರ್ಜ್ಟ ಗೋವಾ'

'ರಿಸರ್ಜ್ಟ ಗೋವಾ' (ಎಚ್ಚರಗೊಳ್ಳು ಗೋವೆ!) ಪತ್ರಿಕೆಯನ್ನು ಪ್ರಕಟಿಸಿ ಟೆಲೊ ಪ್ರಖ್ಯಾತರಾದರು. ನಿದ್ರಿತ ಗೋವನ್ನರನ್ನು ಈ ಪತ್ರಿಕೆ ಬಡಿದೆಬ್ಬಿಸಿತು. 'ರಿಸರ್ಜ್ಟ ಗೋವಾ' ದಿಂದಾಗಿ ಗೋವೆಯ ಜನತೆಗೆ ತನ್ನ ನಿಶ್ಚಿತ ಗುರಿಯತ್ತ ಸಾಗಲು ಸಾಧ್ಯವಾಯಿತು.

ಭಾರತದ ಪ್ರಥಮ ಗಣರಾಜ್ಯೋತ್ಸವದ ದಿನ ಅಂದರೆ ೧೯೫೦ರ ಜನವರಿ ೨೬ರಂದು 'ರಿಸರ್ಜ್ಟ ಗೋವಾ'ದ ಮೊದಲನೆ ಸಂಚಿಕೆ ಹೊರಬಂತು. ಟೆಲೊರಿಗೆ ಈ ದಿನಕ್ಕಿಂತಲೂ ಪವಿತ್ರವಾದ ದಿನ ಬೇರೆ ಯಾವುದೂ ಕಾಣಲಿಲ್ಲ. ಅವರು ಈ ಪತ್ರಿಕೆಯ ಸಂಪಾದಕರೂ ಪ್ರಕಾಶಕರೂ ಯಜಮಾನರೂ ಡೈರೆಕ್ಟರೂ ಅಷ್ಟೇ ಅಲ್ಲ, ಪ್ರೂಫ್ ರೀಡರ್ ಕೂಡ ಆಗಿದ್ದರು. ಗುಟ್ಟಾಗಿ ಇದಕ್ಕೆ ಗೋವೆಯಿಂದ ಕೆಲವು ಸುದ್ದಿಗಳು ಬರತೊಡಗಿದವು. ಅಲ್ಲದೆ ಅಲ್ಲಿದ್ದ ಅನೇಕ ಮಿತ್ರರು ಸಹಾನುಭೂಯಿಂದ ಲೇಖನಗಳನ್ನು ಬರೆದು ಪತ್ರಿಕೆಯ ಮೂಲಕ ಮಾತೃಭೂಮಿಯ ಸೇವೆ ಮಾಡುತ್ತಿದ್ದರು.

ಪಾಕ್ಷಿಕ ಪತ್ರಿಕೆ 'ರಿಸರ್ಜ್ಟ ಗೋವಾ' ಮೂರು ಭಾಷೆಗಳಲ್ಲಿ ಮುದ್ರಣಗೊಳ್ಳುತ್ತಿತ್ತು. ಆದಷ್ಟು ಬಹಳ ಜನ ಇದನ್ನು ಓದಬೇಕೆನ್ನುವುದೇ ಅವರ ಆಶಯವಾಗಿತ್ತು.

ಹೆಸರು ಹಾಗೂ ಅದರ ಉದ್ದೇಶ ಎರಡರಲ್ಲೂ ಪ್ರಾಮಾಣಿಕತೆಯಿಂದ ಈ ಪತ್ರಿಕೆ ಗೋವೆಯ ಜನತೆಯಲ್ಲಿ ರೊಚ್ಚೆಬ್ಬಿಸಿತು. ಪತ್ರಿಕೆಯ ಮುಖ್ಯ ಧ್ಯೇಯ ರಾಜಕೀಯ ನೀತಿ, ಅದರ ಮೂಲಕ ಗೋವೆಯನ್ನು ಪರಕೀಯರ ನೊಗದಿಂದ ಮುಕ್ತಗೊಳಿಸುವದಾಗಿತ್ತು. ಫಲವಾಗಿ ಗೋವೆಯಲ್ಲಿ ಈ ಪತ್ರಿಕೆಯನ್ನು ನಿಷೇಧಿಸಲಾಗಿತ್ತು. ಆದರೆ ಅನೇಕ ನಿಷ್ಠಾವಂತ ಕಾರ್ಯಕರ್ತರ ಸಹಾಯದಿಂದ ಈ ಪತ್ರಿಕೆಯ ಸಂಚಿಕೆಗಳು ಗುಟ್ಟಾಗಿ ಹಸ್ತಾಂತರಗೊಳ್ಳುತ್ತ ಗೋವೆಯ ಸಾವಿರಾರು ಓದುಗರಿಗೆ

ಸಂದೇಶಗಳನ್ನು ಮುಟ್ಟಿಸುತ್ತಿದ್ದವು.

## ಹೊಸ ತಿರುವು

೧೯೪೬ರ ಜೂನ್ ತಿಂಗಳಿನಲ್ಲಿ ಡಾ. ಲೋಹಿಯಾರ ಮೂಲಕ ಗೋವೆಯಲ್ಲಿ ಆರಂಭವಾದ ಸವಿನಯ ಕಾನೂನು-ಭಂಗ ಚಳುವಳಿ ಆ ವರ್ಷ ನವೆಂಬರ್ ತಿಂಗಳು ಪೂರ್ತಿ ಪರಿಣಾಮಕರವಾಗಿಯೇ ನಡೆಯಿತು. ಆದರೆ ಕ್ರಮೇಣ ಸರಕಾರದ ಭಯಂಕರ, ಭೀಷಣ ಹಿಂಸೆ, ಅತ್ಯಾಚಾರಗಳಿಂದಲೂ, ಪ್ರಮುಖ ನಾಯಕರನ್ನೆಲ್ಲಾ ಗಡಿಪಾರು ಮಾಡಿದ ಕಾರಣದಿಂದಲೂ ಚಳುವಳಿಯ ಪ್ರಭಾವ ಕುಗ್ಗಿಹೋಯಿತು. ಆರು ತಿಂಗಳ ಅವಧಿಯಲ್ಲಿ ಸುಮಾರು ೧೫೦೦ ಜನರು ಬಂಧಿತರಾದರು. ಅವರಿಗೆ ಅನೇಕ ರೀತಿಯ ಚಿತ್ರಹಿಂಸೆ ಕೊಡಲಾಯಿತು. ನಾಗರಿಕ ಅಧಿಕಾರಗಳನ್ನು ನೀಡದೇ ಪೀಡಿಸಿದರು. ಹಕ್ಕುಗಳನ್ನು ಬೇಡಿ, ಒತ್ತಾಯಿಸಿ ಪ್ರತಿಬಂಧಕಾಜ್ಞೆಗಳನ್ನು ಮುರಿದ ಅಪರಾಧಕ್ಕಾಗಿ (?) ಕಠಿಣ ಕಾರಾಗೃಹ ಶಿಕ್ಷೆಯನ್ನು ವಿಧಿಸಲಾಯಿತು.

ಈ ಅವಧಿಯಲ್ಲಿ ಭಾರತದಲ್ಲಿ ರಾಜನೈತಿಕವಾಗಿ ಸಂಧಾನಗಳು ಆರಂಭವಾದವು. ೧೯೪೭ರಲ್ಲಿ ಭಾರತದ ಶಾಸನವನ್ನು ಇಂಗ್ಲೀಷರು ಶಾಂತಿಯಿಂದ ಬಿಟ್ಟುಕೊಟ್ಟಂತೆ, ಪೋರ್ಚುಗೀಸರು ಗೋವೆಯನ್ನು ಬಿಟ್ಟು ಹೊರಡುವರೆಂಬ ಆಸೆಯನ್ನು ನೆಹರೂ ಇಟ್ಟುಕೊಂಡಿದ್ದರು. ಕನಿಷ್ಠ ಪಕ್ಷ ಪೋರ್ಚುಗೀಸರು ಈ ವಿಷಯವಾಗಿ ಮಾತುಕತೆ ಆರಂಭಿಸಬಹುದೆಂದು ನಂಬಿದ್ದರು. ಈ ನಂಬಿಕೆಯಿಂದಲೇ ಭಾರತ ಸರಕಾರ ಲಿಸ್ಬನ್ನಿನಲ್ಲಿ ಒಂದು ಕಛೇರಿ ತೆರೆಯಿತು. ೧೯೪೯ರಲ್ಲೇ ಇದು ಅಸ್ತಿತ್ವಕ್ಕೆ ಬಂದಿತ್ತು. ಆದರೆ ಭಾರತದ ಯಾವ ಪ್ರಸ್ತಾಪವನ್ನು ಒಪ್ಪಲೂ ಲಿಸ್ಬನ್ ಸರಕಾರ ಸಿದ್ಧವಿರಲಿಲ್ಲ. ಗೋವೆಯ ಸಮಸ್ಯೆಗೆ ಪರಿಹಾರವನ್ನು ಭಾರತ ಸೂಚಿಸುತ್ತಿದ್ದರೂ ಸಾಲಜಾರ್ ಸ್ವೀಕರಿಸುತ್ತಿರಲಿಲ್ಲ. ಆತನ ದೃಷ್ಟಿಯಲ್ಲಿ ಗೋವೆ ಒಂದು ಸಮಸ್ಯೆಯೇ ಆಗಿರಲಿಲ್ಲ.

ಆದ್ದರಿಂದಲೇ ಗೋವೆಯ ನಾಗರಿಕರು ಭಾರತದ ಗಡಿಯಿಂದಲೇ ಯುದ್ಧವನ್ನು ಮಾಡಲು ನಿಶ್ಚಯಿಸಿದರು. ೧೯೫೪ರ ಜುಲೈಯಲ್ಲಿ ಒಂದು ಸಣ್ಣ ಸತ್ಯಾಗ್ರಹಿಗಳ ತಂಡ ದಮನ್ ಹತ್ತಿರದ ಮಾರ್ಗದಲ್ಲಿರುವ ಪೋರ್ಚುಗಲ್ ವಸಾಹತು ದಾದರಾವನ್ನು ವಶಪಡಿಸಿಕೊಂಡು ಭಾರತೀಯ ಧ್ವಜವನ್ನು ಹಾರಿಸಿತು. ನಂತರ ಕೆಲವೇ ದಿನಗಳಲ್ಲಿ ಇದಕ್ಕಿಂತಲೂ ಸ್ವಲ್ಪ ದೊಡ್ಡದಾದ ನಗರ ಹವೇಲಿಯನ್ನು ಆಕ್ರಮಿಸಿಕೊಂಡು, ಮುಖ್ಯ ನಗರವಾದ ನೆಲವಾಸಾದ ಮೇಲೆ ಪ್ರಭುತ್ವ ಸ್ಥಾಪಿಸಿತು. ಈ ಸತ್ಯಾಗ್ರಹಿಗಳಿಗೆ ಅದುವರೆಗೂ ಪೋರ್ಚುಗೀಸರ ಯಾವ ಪ್ರತಿಭಟನೆಯನ್ನು ಎದುರಿಸುವ ಪ್ರಮೇಯ ಬರಲಿಲ್ಲ.

೧೯೫೫ರ ಆಗಸ್ಟ್ ೧೫ ರಂದು ನಿಶ್ಶಸ್ತ್ರರಾಗಿ ಗೋವನ್‌ರ ಮೂರು ಗುಂಪುಗಳು ಭಾರತದ ಧ್ವಜವನ್ನು ಹಾರಿಸುತ್ತಾ, ಮೂರು ಕಡೆ ಗಡಿಯನ್ನು ಗೋವೆಯಲ್ಲಿ ಪ್ರವೇಶಿಸಿದವು. ಮಾಜಾಳಿ ಮತ್ತು ಬಾಂದಾ ಮೂಲಕ ಪ್ರವೇಶಿಸಿದ ಸತ್ಯಾ-ಗ್ರಹಿಗಳು ಗಡಿಯನ್ನು ದಾಟುತ್ತಿದ್ದಂತೆ ಅವರನ್ನು ಬಂಧಿಸಲಾಯಿತು. ಆದರೆ ತೀರಾಕೋಲ ಮೂಲಕ ಪ್ರವೇಶಿಸಿದ ಗುಂಪು ಗೋವೆಯಲ್ಲಿ ಬಹು ದೂರ ಮುಂದುವರಿದಿತ್ತು. ಆ ಸತ್ಯಾಗ್ರಹಿಗಳು ದುರ್ಗದ ರಕ್ಷಕರನ್ನು ಹಿಂದಕ್ಕೆ ತಳ್ಳಿ ಕೋಟೆಯ ಮೇಲೆ ಧ್ವಜ ಹಾರಿಸಿಯೇ ಬಿಟ್ಟರು. ಮರುದಿನವೇ ದುರ್ಗವನ್ನು ಪೋರ್ಚುಗೀಸರು ವಿಮುಕ್ತಗೊಳಿಸಿ ತಮ್ಮ ವಶಕ್ಕೆ ತೆಗೆದುಕೊಂಡರು. ಈ ಹೋರಾಟದಲ್ಲಿ ಒಬ್ಬ ಸತ್ಯಾಗ್ರಹಿ ಮಡಿದು, ಉಳಿದ ಹನ್ನೆರಡು ಜನರಿಗೆ ತೀವ್ರ ಗಾಯಗಳಾದವು.

ಸಾಧ್ಯವಾದಷ್ಟು ಶಾಂತಿಯ ಮೂಲಕ ಗೋವೆಯನ್ನು ವಿಮುಕ್ತಗೊಳಿಸಿ, ನ್ಯಾಯಸಂಗತವಾಗಿ ಭಾರತದಲ್ಲೇ ಸೇರಿಸಬೇಕೆಂದು ಇಚ್ಛಿಸುತ್ತಿದ್ದ ಪ್ರಧಾನಿ ನೆಹರೂರಿಗೆ, ಪೋರ್ಚುಗೀಸರ ಈ ರೀತಿಯ ಭೀಕರ ಹಿಂಸಾಚಾರಗಳು ಕಳವಳ ಉಂಟು ಮಾಡದೇ ಇರಲಿಲ್ಲ. ಗೋವೆ ಕೇವಲ ಅಲ್ಲಿಯ ನಿವಾಸಿಗಳಿಗೆ ಸಂಬಂಧಿಸಿದ ವಿಷಯವಾಗಿರಲಿಲ್ಲ. ಅದು ಭಾರತದ ಒಂದು ಅಂಗವಾಗಿತ್ತು. ಮಾತೃಭೂಮಿಗೆ ಸೇರಬೇಕೆಂಬ ಅವರ ಅಭಿಲಾಷೆಯನ್ನು ಕಡೆಗಣಿಸುವಂತಿರಲಿಲ್ಲ. ಉಪಾಯವಿಲ್ಲದೆ, ನೆಹರೂ ಬೇರೆ ಮಾರ್ಗ

ಯೋಚಿಸಲೇಬೇಕಾಯಿತು.

೧೯೫೫ರ ಮೇ ೧೮ನೇ ದಿನಾಂಕ ಪುಣೆಯಲ್ಲಿ ಗೋವೆಯ ವಿಮೋಚನೆಗಾಗಿ ಭಾರತದ ಸರ್ವ ಪಕ್ಷಗಳ ಸಮಿತಿಯೊಂದು ಸಂಘಟಿಸಲ್ಪಟ್ಟಿತು. ಇದರ ಉದ್ದೇಶ ಗೋವೆಯ ವಿಮೋಚನೆಗಾಗಿ ಪ್ರತ್ಯಕ್ಷವಾಗಿ ಭಾಗವಹಿಸಿ ಹೋರಾಡುವುದಾಗಿತ್ತು. ಭಾರತ ಸರಕಾರ ಇದಕ್ಕೆ ಯಾವ ಆಕ್ಷೇಪಣೆಯನ್ನೂ ಮಾಡಲಿಲ್ಲ.

ಈ ಸಮಿತಿಯ ಆದೇಶದಂತೆ ಭಾರತೀಯ ಸತ್ಯಾಗ್ರಹಿಗಳ ಒಂದು ತಂಡ ೧೯೫೫ರ ಮೇ ೧೮ರಂದು ಗೋವೆಯ ಗಡಿಯನ್ನು ದಾಟಿ ಬಂಧನಕ್ಕೆ ಒಳಗಾಯಿತು.

೧೯೫೫ ರ ಆಗಸ್ಟ್ ೧೫ ರಂದು ಈ ಚಳುವಳಿ ಪರಾಕಾಷ್ಠೆಯನ್ನು ತಲಪಿತು. ಇದುವರೆಗೂ ಸಣ್ಣ ಸಣ್ಣ ತಂಡಗಳಲ್ಲಿ ಪ್ರವೇಶಿಸುತ್ತಿದ್ದ ಸತ್ಯಾಗ್ರಹಿಗಳು ಆ ದಿನ ಪ್ರವಾಹದೋಪಾದಿಯಲ್ಲಿ ಎಡಬಿಡದೆ ಗೋವೆಯನ್ನು ಪ್ರವೇಶಿಸತೊಡಗಿದರು. ಸುಮಾರು ನಾಲ್ಕು ಸಾವಿರ ಸ್ತ್ರೀ-ಪುರುಷರು ನಿರಾಯುಧರಾಗಿ ಅನೇಕ ಸ್ಥಳಗಳ ಮೂಲಕ ಗೋವೆಯ ಗಡಿಯನ್ನು ದಾಟಿದರು. ಇದರಿಂದ ಪೋರ್ಚುಗೀಸ್ ಶಾಸಕರು ಹತಾಶರಾಗಿ ಗುಂಡುಗಳ ಸುರಿಮಳೆಯನ್ನೇ ಸುರಿಸಿದರು. ಗೋವೆಯ ಗಡಿ ಪ್ರದೇಶಗಳು ರಕ್ತರಂಜಿತಗೊಂಡವು. ಗಾಯಗೊಂಡವರ ಸಂಖ್ಯೆ ಅನೇಕ ನೂರಕ್ಕೆ ತಲಪಿತು.

## ಆಲ್ ಇಂಡಿಯಾ ರೇಡಿಯೊದಲ್ಲಿ

೧೯೫೬ರಲ್ಲಿ ಸಾಲಜಾರ್ ಸರಕಾರದ ಸುಳ್ಳು ಪ್ರಚಾರಗಳನ್ನು ಖಂಡಿಸಲು, ಹಾಗೂ ತನ್ನ ವಿಚಾರಗಳನ್ನು ಪ್ರಪಂಚಕ್ಕೆ ತಿಳಿಸಲು, ಭಾರತ ಸರಕಾರ ಆಲ್ ಇಂಡಿಯಾ ರೇಡಿಯೋದ ವಿದೇಶ ಪ್ರಸರಣದಲ್ಲಿ ಪೋರ್ಚುಗೀಸ್ ಭಾಷೆಯಲ್ಲೂ ಸುದ್ದಿ ಸಮಾಚಾರ ನೀಡುವ ವ್ಯವಸ್ಥೆ ಮಾಡಿತು. ಟೆಲೊರನ್ನು ಪೋರ್ಚುಗೀಸ್ ಭಾಷಾ ವಿಭಾಗಕ್ಕೆ ನೇಮಿಸಲಾಯಿತು. ಆ ಭಾಷೆಯ ಮೇಲೆ ಅವರಿಗಿದ್ದ ಪ್ರಭುತ್ವ, ಪತ್ರಕರ್ತರಾಗಿದ್ದ ಅನುಭವ

ಹಾಗೂ ಪೋರ್ಚುಗೀಸರ ರಾಜನೀತಿಯನ್ನು ಚೆನ್ನಾಗಿ ತಿಳಿದಿದ್ದ ಟೆಲೊರಿಗಿಂತಲೂ ಆ ವಿಭಾಗಕ್ಕೆ ಹೆಚ್ಚು ದಕ್ಷರು ಯಾರೂ ಇರಲಿಲ್ಲ ವೆಂದರೆ ಅತಿಶಯೋಕ್ತಿಯಲ್ಲ.

ಆಲ್ ಇಂಡಿಯಾ ರೇಡಿಯೋದಲ್ಲಿ ಕಾಮೆಂಟೇಟರ್ ಸ್ಥಾನದಲ್ಲಿ ಟೆಲೊ ತಾವು 'ರಿಸರ್ಜ್ ಗೋವಾ'ದ ಸಂಪಾದಕನಾಗಿ ಕೆಲಸ ಮಾಡುತ್ತಿದ್ದಂತೆ ಪೋರ್ಚುಗೀಸ್ ನೀತಿಯನ್ನು ಚೆನ್ನಾಗಿ ಬಿಂಬಿಸುತ್ತಿದ್ದರು. ಪೋರ್ಚುಗೀಸ್ ಭಾಷೆಯ ಪ್ರಸಾರ ಕೇವಲ ಗೋವೆ ಹಾಗೂ ಪೋರ್ಚುಗಲ್ಲಿನಲ್ಲಿ ಸೀಮಿತವಾಗಿದ್ದರೂ, ಬ್ರೆಜಿಲ್ ಮತ್ತು ಆಫ್ರಿಕದ ಕೆಲವು ಭಾಗಗಳಲ್ಲಿ ಕೇಳುವವರೂ ಇದ್ದರು. ಟೆಲೊ ಆಕರ್ಷಕವಾಗಿ ಪ್ರಸಾರ ಮಾಡುತ್ತಿದ್ದ ಕಾರಣ, ಅವರಿಗೆ ಆಫ್ರಿಕದ ಅನೇಕ ಪೋರ್ಚುಗೀಸ್ ವಸಾಹತುಗಳಿಂದ ಸಂದೇಶಗಳು ಬರುತ್ತಿದ್ದವು. ಆಲ್ ಇಂಡಿಯಾ ರೇಡಿಯೋದಲ್ಲಿ ಟೆಲೊ ಮೂರು ವರ್ಷ ಮಾತ್ರ ಇದ್ದರು. ಅಧಿಕಾರಿಗಳ ಕಠೋರ ನಿಯಮ ನೀತಿಗಳಿಗೆ ಸೀಮಿತಗೊಂಡು ವಿಚಾರ ಸ್ವಾತಂತ್ರ್ಯ ಕಳೆದುಕೊಳ್ಳುವುದು ಅವರಿಗೆ ಕಠಿಣವಾಯಿತು. ಆದ್ದರಿಂದ ೧೯೫೮ರಲ್ಲಿ ಅವರ ಕಾಂಟ್ರಾಕ್ಟ್ ಅವಧಿ ಮುಗಿದ ಬಳಿಕ, ಅದನ್ನು ನವೀಕರಿಸಲು ಒಪ್ಪದೆ ಮುಂಬಯಿಗೆ ಹಿಂತಿರುಗಿದರು.

ಗೋವೆಯ ವಿಮುಕ್ತಿಗಾಗಿ ಟೆಲೊ ಹತ್ತು ವರುಷಗಳ ವರೆಗೆ ಮುಂಬಯಿ ಮತ್ತು ದಿಲ್ಲಿಯಲ್ಲಿ ಕೆಲಸ ಮಾಡಿದ್ದರು. ಅವರೂ ಅವರಂತೆಯೆ ಇನ್ನೂ ಅನೇಕ ದೇಶಭಕ್ತರೂ ಹೋರಾಟ ನಡೆಸಿದರೂ ಗೋವೆಯ ವಿಮೋಚನೆ ಹತ್ತಿರವಾಗುವಂತೆ ಕಾಣಲಿಲ್ಲ. ಚಳುವಳಿಯ ನಿಧಾನ ಗತಿ ಬೇರೆ ಸತ್ಯಾಗ್ರಹಿಗಳಿಗೆ ಬೇಸರ ತಂದಂತೆ, ಟೆಲೊರಿಗೂ ನಿರಾಶೆ, ಸಿಟ್ಟು ಬರುವುದಕ್ಕೆ ಕಾರಣವಾಯಿತು. ಸಾಲಜಾರನ ಭಯಂಕರ ಅತ್ಯಾಚಾರ, ಹಾಗೂ ದಬ್ಬಾಳಿಕೆಯನ್ನು ಬಹಳ ಕಾಲ ಅನುಭವಿಸುವುದಕ್ಕೆ ಗೋವೆಯ ನಿವಾಸಿಗಳನ್ನು ಬಿಡದೆ, ತಕ್ಷಣ ಭಾರತ ಸರಕಾರ ಕೊನೆಯ ಹೆಜ್ಜೆ ಇಡಬೇಕೆಂದು ಅನೇಕ ಮುಂದಾಳುಗಳು ಒತ್ತಾಯಿಸುತ್ತಿದ್ದರು. ಆದರೆ, ೧೯೬೧ರ ವರೆಗೂ ಭಾರತ ಸರಕಾರ ಕಾರ್ಯಾಚರಣೆಯನ್ನು ಕೈಗೊಳ್ಳಲೇ ಇಲ್ಲ.

## ಮರಳಿ ಗೋವೆಯಲ್ಲಿ

ಟೆಲೊ ಹತ್ತು ವರುಷಗಳ ನಂತರ ಗೋವೆಗೆ ಹಿಂತಿರುಗಿದರು. ಗೋವೆಯನ್ನು ಪ್ರವೇಶಿಸಿದ ಕೂಡಲೇ ಪಣಜಿಯ ಪೋಲೀಸ್ ಸ್ಟೇಶನ್ನಿನಲ್ಲಿ ತಮ್ಮ ಪರಿಚಯ ತಿಳಿಸಿದರು.

ಪೋಲೀಸ್ ಕಮೀಶನರ್ ಲೆಫ್ಟಿನೆಂಟ್ ಆರೊನ್ಸಾರಿಗೆ ಟೆಲೊರ ನಿರ್ಭಯತೆಯನ್ನು ಕಂಡಾಗ ಆಶ್ಚರ್ಯವೂ ಗೌರವ ಭಾವವೂ ಉಂಟಾದವು. ಟೆಲೊರನ್ನು ಕುಳ್ಳಿರಿಸಿ ವರಿಷ್ಠ ಅಧಿಕಾರಿಗಳ ಸಲಹೆ ಪಡೆಯಲು ಅವರು ತಮ್ಮ ಕಮಾಂಡರ್ ಬಳಿಗೆ ಹೋದರು. ಬಹಳ ಹೊತ್ತಿನ ನಂತರ ಬಂದವರೇ ಟೆಲೊರನ್ನು ಬಂಧಿಸುವಂತೆ ತಮಗೆ ಆಜ್ಞೆ ನೀಡಲಾಗಿದೆ ಎಂದು ಹೇಳಿ ಟೆಲೊರನ್ನು ಬೇರೆ ಕೊಠಡಿಗೆ ಕರೆದುಕೊಂಡು ಹೋದರು. ಮುಂದೆ ಮೂರು ತಿಂಗಳು ಕಾಲ ಟೆಲೊ ಅಲ್ಲಿಯೇ ಇರಬೇಕಾಯಿತು.

ಈ ಮಧ್ಯೆ ಒಂದು ದಿನ ಪೋಲೀಸ್ ಮುಖ್ಯ ಅಧಿಕಾರಿಯೊಬ್ಬರು ಬಂದು ಗವರ್ನರ್ ಜನರಲ್ ಕ್ಷಮಾದಾನ ಮಾಡಿದ್ದಾರೆಂದೂ ಟೆಲೊರನ್ನು ಜೈಲಿನಿಂದ ಬಿಡುಗಡೆ ಮಾಡುತ್ತಿರುವುದಾಗಿಯೂ ಹೇಳಿದರು. ಮತ್ತೊಂದು ವಾರದ ನಂತರ ಅದೇ ಪೋಲೀಸ್ ಅಧಿಕಾರಿ ಬಂದು "ನಿಮ್ಮನ್ನು ಲಿಸ್ಬನ್ನಿಗೆ ಕಳಿಸಿಕೊಡಬೇಕಾಗುತ್ತದೆಂ"ದು ಟೆಲೊರಿಗೆ ಹೇಳಿದರು.

"ಆದರೆ ಯಾವ ರೀತಿಯಲ್ಲೂ ಆರ್ಥಿಕ ಸಂಪಾದನೆ ಇಲ್ಲದೆ ಲಿಸ್ಬನ್ನಿನಲ್ಲಿ ಇರುವುದು ಹೇಗೆ?" ಟೆಲೋ ಕೇಳಿದರು.

"ಅದನ್ನು ನೀವು ಯೋಚಿಸಬೇಕಾಗಿಲ್ಲ. ನಿಮ್ಮ ಹೆಂಡತಿಯೊಡನೆ ಲಿಸ್ಬನ್ನಿಗೆ ಹೋಗಲು ಗವರ್ನರ್ ಜನರಲ್ ಅನುಮತಿ ನೀಡಿದ್ದಾರೆ," ಎಂದು ಆ ಅಧಿಕಾರಿ ಆಶ್ವಾಸನೆ ನೀಡಿದರು. ಟೆಲೊ ಪೋರ್ಚುಗಲ್ ಪ್ರಯಾಣಕ್ಕೆ ಸಿದ್ಧಗೊಳ್ಳಲು ಹದಿನೈದು ದಿನಗಳ ಕಾಲಾವಕಾಶ ನೀಡಲಾಯಿತು. ಅವರಿಗೆ ಕ್ಷಮಾದಾನ ಸಿಕ್ಕಿದ್ದರಿಂದ, ಪೋರ್ಚುಗಲ್‌ಗೆ ಹೋಗಬೇಕಿದ್ದರೂ, ಅವರು ಸ್ವತಂತ್ರ ವ್ಯಕ್ತಿಯಾಗಿದ್ದರು.

ಲಿಸ್ಬನ್ ತಲಪಿದ ಟೆಲೊ ತಮ್ಮ ಪತ್ನಿ-

ಯೊಂದಿಗೆ ಒಂದು ಹೊಟೇಲಿನಲ್ಲಿ ಎರಡು ತಿಂಗಳು ಕಳೆದರು. ಅವರ ಮನಸ್ಸಿನಲ್ಲಿ ಸಂದೇಹ ಹಾಗೂ ಕಳವಳ ಹೆಚ್ಚುತ್ತಾಹೋಯಿತು. ಕೊನೆಗೆ ವಿದೇಶ ಸಚಿವಾಲಯದ ಸಲಹೆಯ ಪ್ರಕಾರ ಅವರನ್ನು ನಗರದ ಮಧ್ಯದಲ್ಲಿರುವ ಮನೆಯಲ್ಲಿಡಲಾಯಿತು. ಆದರೆ ಅವರಿಗೆ ಸಾಲಜಾರ್ ಸರಕಾರದ ಗುಪ್ತದಳ 'ಪಾಇಡ್' (ಪೊಲೀಸಿಯಾ ಇಂಟರ್‌ನ್ಯಾಶನಲ್ ಪಿ. ಡಿ. ಡೆಫೆರ್ಸಾಡಿ ಎಸ್ಟಾಡೊ) ಅನುಮತಿ ಇಲ್ಲದೆ ಎಲ್ಲೂ ಹೋಗಿ ಬರಲು ಸಾಧ್ಯವಿರಲಿಲ್ಲ. ಕೊನೆಗೂ 'ಪಾಇಡ್' ಅವರ ವಿಚಾರಣೆ ಆರಂಭಿಸಿತು. ೧೯೬೦ನೆಯ ನವೆಂಬರ್ ಮಧ್ಯದವರೆಗೆ ವಿಚಾರಣೆ ಮುಂದುವರಿಯುತ್ತಿದ್ದಂತೆ ಟೆಲೊರಿಗೆ ನಿರ್ದೇಶಕ ಕರ್ನಲ್ ಹೊಗೆರೋಡಿ ಮಾಟೋಸ್‌ರನ್ನು ಕಾಣುವಂತೆ ಸಲಹೆ ನೀಡಲಾಯಿತು. ಟೆಲೊರನ್ನು ಒಂದು ದೊಡ್ಡ ಕೋಣೆಗೆ ಕರೆತರಲಾಯಿತು. ಒಂದು ದೊಡ್ಡ ಮೇಜಿನ ಎರಡೂ ಕಡೆಗೆ ಕುರ್ಚಿಗಳನ್ನು ಇಟ್ಟಿದ್ದರು. ಪಾಇಡ್ ನಿರ್ದೇಶಕ ಇಲ್ಲಿಯೇ ಕುಳಿತು ಅಧಿಕಾರ ನಡೆಸುತ್ತಿದ್ದ. ಮಾಟೋಸ್ ಕುರ್ಚಿಯಲ್ಲಿ ಕುಳಿತಿದ್ದ. ಆತ ಕುಳಿತುಕೊಳ್ಳುವಂತೆ ಟೆಲೊರಿಗೆ ಹೇಳಿ ಕರ್ಕಶ ಸ್ವರದಿಂದ ಕೇಳಿದ:

"ಮಿಸ್ಟರ್ ಮ್ಯಾಸ್ಕರೇಣಾಸ್, ನೀವು ನಿಮ್ಮ ಮೇಲೆ ಮೊಕದ್ದಮೆ ನಡೆಸಲು ಬರೆದು ಪ್ರಾರ್ಥಿಸಿಕೊಳ್ಳಿ."

"ನಾನೇನೂ ಹೇಳುವದಿಲ್ಲ. ನಿಮಗೆ ಒಂದು ವೇಳೆ ನನ್ನ ಮೇಲೆ ಮೊಕದ್ದಮೆ ಹೂಡುವ ಇಚ್ಛೆ ಇದ್ದರೆ ಹೂಡಬಹುದು. ನಾನೇನೂ ಪ್ರಾರ್ಥಿಸಿಕೊಳ್ಳುವುದಿಲ್ಲ."

"ಆದರೆ ನೀವು ಒಳ್ಳೇ ಸಂಬಳ ಬರುತ್ತಿದ್ದ ಕೆಲಸವನ್ನೇಕೆ ಬಿಟ್ಟಿರಿ, ಡಾಕ್ಟರ್! ನೀವು ಏತಕ್ಕೆ ಸಂಘರ್ಷಕ್ಕೆ ಹೊರಟಿರಿ? ನೀವೂ ಉಳಿದ ವಕೀಲರಂತೆ ಇಷ್ಟು ಹೊತ್ತಿಗೆ ದೊಡ್ಡ ಶ್ರೀಮಂತರಾಗಬಹುದಿತ್ತು."

"ನಾನು ಒಂದು ಆದರ್ಶಕ್ಕಾಗಿ ಹೋರಾಡುತ್ತಿದ್ದೇನೆ."

"ನಾನು ನಿಮಗೆ ಹೊರಗೆ ಹೋಗಲು ಅನುಮತಿ ನೀಡಲಾರೆ."

ಈ ಪರಿಸ್ಥಿತಿ ಬರಬಹುದೆಂದು ಟೆಲೊ ಮೊದಲೇ ಭಾವಿಸಿ ಬಂದಿದ್ದರು. ಅವರ ಮಗಳು ಲಕ್ಷ್ಮಿಗೆ ಬರುವಂತೆ ಸೂಚನೆ ಕೊಡಲಾಯಿತು. ಅವಳು ಬಂದು ತಂದೆಯನ್ನು ತಬ್ಬಿಕೊಂಡಾಗ, ಒಂದು ಜಪಮಾಲೆಯನ್ನು ಕೊಟ್ಟು ಆಧ್ಯಾತ್ಮಿಕ ಸಮಾಧಾನ ಪಡೆಯುವಂತೆ ಹೇಳಿ ಅವರು ಸೂಟ್‌ಕೇಸ್ ತೆಗೆದುಕೊಂಡರು. ಅದರಲ್ಲಿ ಕೆಲವು ಪುಸ್ತಕಗಳು ಮಾತ್ರ ಇದ್ದವು. ಜೈಲಿನ ದೀರ್ಘ ವಾಸಕ್ಕಾಗಿ ಟೆಲೊ ಮಾಡಿಕೊಂಡ ಸಿದ್ಧತೆ ಇದು.

ಬಂಧಿಸಿದ ದಿನ ಬಹಳ ಹೊತ್ತಿನ ಮೇಲೆ ಸಾಯಂಕಾಲ 'ಪಾಇಡ್'ನ ಮುಖ್ಯಾಲಯದಿಂದ ಅಲ್ಜೂಬೆಗೆ ಟೆಲೊರನ್ನು ಕರೆದೊಯ್ಯಲಾಯಿತು. ಅಲ್ಜೂಬೆ ಬಹಳ ಹಳೆಯ ಜೈಲು. ಕತ್ತಲೆ ತುಂಬಿದ ಜೇಡ ಬಲೆ ಕಟ್ಟಿದ್ದ ಸಣ್ಣ ಕೊಠಡಿಯದು. ಕಿಟಕಿಯ ಸರಳುಗಳಿಗೆ ಜಾಳಿಗೆ ಹಾಕಲಾಗಿತ್ತು. ಹೀಗಾಗಿ ಕೈದಿ ಹೊರಗೆ ಯಾವುದೇ ರೀತಿಯ ಸುದ್ದಿ ಬರೆದು ಕಳಿಸಲು ಅಥವಾ ಹೊರಗೆ ಬಿಸಾಕಲು ಸಾಧ್ಯವಿರಲಿಲ್ಲ. ಕೆಟ್ಟ ಆಹಾರ ಹಾಗೂ ಜೇಡರ ಬಲೆಯಿಂದ ಕೂಡಿದ ಇಕ್ಕಟ್ಟಾದ ಕೋಣೆಯ ಗಾಳಿಯಿಂದ ಟೆಲೊರ ಆರೋಗ್ಯ ಹದಗೆಟ್ಟಿತು. ಮೂಳೆಗಳ ಸಂದಿನಲ್ಲಿ ಊದಿಕೊಂಡ ಪರಿಣಾಮವಾಗಿ ಭಯಂಕರ ಯಾತನೆಯನ್ನು ಅನುಭವಿಸಬೇಕಾಗಿತ್ತು. ಅವಯವಗಳ ಚಲನೆಗೂ ಅವಕಾಶವಿರಲಿಲ್ಲ. ಆರು ತಿಂಗಳ ನಂತರ ಅವರನ್ನು ಲಿಸ್ಬನ್ನಿಗೆ ಹತ್ತು ಕಿಲೋಮೀಟರ್ ದೂರದಲ್ಲಿ ಕ್ಲೇಸಿಯಸ್ ಕೋಟೆಯಲ್ಲಿ ಇಡಲಾಯಿತು.

## ಗೋವೆಯ ವಿಮೋಚನೆ

೧೯೫೫ರ ಅಗಸ್ಟ್ ತಿಂಗಳಲ್ಲಿ ಗೋವಾ ಭಾರತ ಗಡಿಯಲ್ಲಿ ಪೋರ್ಚುಗೀಸರು ರಕ್ತದ ಹೋಳಿಯನ್ನು ಆಚರಿಸಿದ ಕಾರಣ ಸಂಪೂರ್ಣ ಭಾರತದಲ್ಲಿ ಕ್ರೋಧಾಗ್ನಿ ಪಸರಿಸಿತ್ತು. ದೇಶದ ಮೂಲೆ ಮೂಲೆಯಲ್ಲೂ ಸಭೆ ಮೆರವಣಿಗೆಗಳು ನಡೆದವು. ನೆಹರೂರರಿಗೆ ಶಾಂತಿಪೂರ್ವಕವಾಗಿ ಗೋವೆಯನ್ನು ವಿಮೋಚನೆಗೊಳಿಸಬೇಕೆಂಬ ಬಗ್ಗೆ ಇದ್ದ ವಿಶ್ವಾಸ ಕಡಿಮೆಯಾಯಿತು. ೧೯೬೧ರ ಅಗಸ್ಟ್ ತಿಂಗಳಲ್ಲಿ ಲೋಕಸಭೆಯಲ್ಲಿ ಅವರು ಈ ರೀತಿ ಹೇಳಿದರು: "ನನಗೆ ಈಗ ಯಾವುದೇ

ಆಶ್ವಾಸನೆ ಕೊಡಲು ಸಾಧ್ಯವಿಲ್ಲ. ಗೋವೆಯ ಮೇಲೆ ಬಲ ಪ್ರಯೋಗ ಮಾಡುವುದಿಲ್ಲವೆಂದು ಖಂಡಿತ ನಿಮಗೆ ಹೇಳಲಾರೆ." ಇದು ನೆಹರೂ ರವರ ಇಂಗಿತದ ಸಂಕೇತವಾಗಿತ್ತು.

ಭಾರತ ಸರಕಾರದ ನಿರ್ದೇಶನದಂತೆ ಭಾರತೀಯ ಸೈನ್ಯವು ಗೋವೆಯಲ್ಲಿ ಪ್ರವೇಶಿಸುವ ಯೋಜನೆಯನ್ನು ಸಾಕಷ್ಟು ಮುಂಚೆಯೇ ಮಾಡಿಕೊಂಡಿತು. ಉತ್ತೇಜಕ ಘಟನೆಗಳು ನಡೆಯುತ್ತಿದ್ದಂತೆ ಗೋವೆ, ದಮನ್, ದಿವುಗಳ ಗಡಿಯಲ್ಲಿ ಭಾರತೀಯ ಸೇನೆಯನ್ನು ಸಿದ್ಧ ಪಡಿಸಲಾಗಿತ್ತು. ೧೯೬೧ರ ಡಿಸೆಂಬರ್ ೧೬ ರಂದು ಮುನ್ನುಗ್ಗುವಂತೆ ಸೈನ್ಯಕ್ಕೆ ಸೂಚನೆ ಕೊಡಲಾಯಿತು. ಸೂಚನೆ ಸಿಗುತ್ತಿದ್ದಂತೆ ೧೭–೧೮ರ ಮಧ್ಯ ರಾತ್ರಿಯಲ್ಲಿ ಭಾರತೀಯ ಸೈನಿಕರು ಗೋವೆಯನ್ನು ಪ್ರವೇಶಿಸಿ ಬಿಟ್ಟರು. ಮತ್ತೊಂದು ಕಡೆ ವಾಯುದಳದ ವಿಮಾನಗಳು ಬೆಂಬೋಲಿನ್ ವೈರ್‌ಲೆಸ್ ಸ್ಟೇಶನ್ ಮೇಲೆ ದಾಳಿ ಮಾಡಿ, ಅದನ್ನು ಧ್ವಂಸಗೊಳಿಸಿದವು. ಭಾರತೀಯ ನೌಕಾದಳದ ಯುದ್ಧ ನೌಕೆಗಳು ಮಡಗಾಂವಿನ ಬಂದರದಲ್ಲಿದ್ದ ಪೋರ್ಚುಗೀಸರ ಯುದ್ಧನೌಕೆ 'ಎಫೊಂಜೋಡಿ ಅಲ್ಬುಕರ್ಕ್' ಮೇಲೆ ದಾಳಿ ಮಾಡಿ ಪೋರ್ಚುಗೀಸರ ಯೋಜನೆಯನ್ನು ವ್ಯರ್ಥಗೊಳಿಸಿದವು. ದಾಳಿ ಆರಂಭವಾದ ಮೂವತ್ತಾರು ಘಂಟೆಗಳಲ್ಲೇ ಭಾರತೀಯ ಸೈನಿಕರು ಗೋವೆಯ ರಾಜಧಾನಿ ಪಣಜಿಯನ್ನು ತಲುಪಿದರು. ಅಲ್ಲಿ 'ಆಪರೇಶನ್ ವಿಕ್ಟರಿ'ಗೆ ಗೌರವಯುತವಾದ ಹಾರ್ದಿಕ ಸ್ವಾಗತ ದೊರೆಯಿತು.

ಕೆಕ್ಸಿಯಸ್ ಜೈಲಿನಲ್ಲೇ ಟೆಲೊರಿಗೆ ಗೋವೆಯಲ್ಲಿ ನಡೆಯುತ್ತಿದ್ದುದು ಅಲ್ಪ ಸ್ವಲ್ಪ ತಿಳಿಯುತ್ತಿತ್ತು. ಅವರು ಬಹಳ ದಿನ ನಿರೀಕ್ಷಿಸಬೇಕಾಗಲಿಲ್ಲ. ಡಿಸೆಂಬರ್ ೨೧ನೇ ದಿನಾಂಕ ಬೆಳಿಗ್ಗೆ 'ಸೆಕೊಲೋ' ಎಂಬ ಪತ್ರಿಕೆಯಿಂದ ವಿಷಯ ತಿಳಿಯಿತು. ನಿರೀಕ್ಷಿಸಿದ ಘಟನೆ ನಡೆದಿತ್ತು. ಪೋರ್ಚುಗೀಸರು ಶರಣಾಗತರಾಗಿದ್ದರು. ಗೋವೆ ಸ್ವತಂತ್ರವಾಯಿತು. ಟೆಲೊರಿಗಾದ ಸಂತೋಷ ಅಷ್ಟಿಷ್ಟಲ್ಲ. ಟೆಲೊ ಮತ್ತು ಅವರ ಮಿತ್ರ ಮೋಹನ ರಾನಡೆ ಉತ್ಸುಕತೆಯಿಂದ ಬಿಡುಗಡೆಯ ಹಾಗೂ ಸ್ವದೇಶ ಗಮನದ ನಿರೀಕ್ಷೆಯಲ್ಲಿದ್ದರು. ೧೯೬೨ನೇ ಏಪ್ರಿಲ್ ೧೫ ರಂದು ಟೆಲೊ ಲಿಸ್ಬನ್ನಿನಲ್ಲಿರುವ ವಿದೇಶಾಂಗ ಕಾರ್ಯಾಲಯಕ್ಕೆ ಈ ರೀತಿ ಕಾಗದ ಬರೆದು ಕಳುಹಿಸಿದರು:

ಕೆಳಗೆ ಸಹಿ ಹಾಕಿರುವ ನಾನು ಟೆಲೊ ಡಿ ಮಾಸ್ಕರೇಞಸ್, ನಿವೃತ್ತ ಮೆಜಿಸ್ಟ್ರೇಟ್ ಮತ್ತು ಅಡ್ವೋಕೇಟ್, ಭಾರತೀಯ ತಂದೆ–ತಾಯಿಗಳ ಮಗ, ನನ್ನ ಜನ್ಮಭೂಮಿ ಗೋವೆ. ಜನನ ಹಾಗೂ ರಕ್ತ ಸಂಬಂಧದಿಂದ ನಾನು ಭಾರತೀಯನಾಗಿದ್ದೇನೆ. ಸದ್ಯ ನಾನು ಕೈಕ್ಸಿಯಸ್ ಜೈಲಿನಲ್ಲಿದ್ದೇನೆ. ನಾನು ಜನ್ಮದಿಂದ ಗೋವೆಯ ನಿವಾಸಿಯಾದ್ದರಿಂದ ನನ್ನ ಮುಂದಿನ ಜೀವನವನ್ನು ನನ್ನ ಜನ್ಮಭೂಮಿಯಾದ ಗೋವೆಯಲ್ಲಿ ನಡೆಸಲು ಇಚ್ಛಿಸುತ್ತೇನೆ. ನಾನು ಭಾರತ ಮತ್ತು ಪೋರ್ಚುಗಲ್ ಸರಕಾರಗಳ ಮಧ್ಯೆ ನಡೆದ ಒಪ್ಪಂದದಂತೆ, ಪೋರ್ಚುಗೀಸ್ ನಾಗರಿಕತೆಯನ್ನು ತೊರೆದು, ಭಾರತೀಯ ನಾಗರಿಕತೆಯನ್ನು ಸ್ವೀಕರಿಸುತ್ತೇನೆ... ಆದ್ದರಿಂದ ಈ ಮೂಲಕ ನಾನು ನನ್ನ ಬಿಡುಗಡೆಗಾಗಿ ತಮ್ಮನ್ನು ಒತ್ತಾಯಿಸುತ್ತಿದ್ದೇನೆ. ಏಕೆಂದರೆ, ಗೋವೆಯ ವಿಮೋಚನೆಯ ನಂತರ, ಪೋರ್ಚುಗಲ್ ಸರಕಾರಕ್ಕೆ ನನ್ನ ಮೇಲೆ ಯಾವ ರೀತಿಯ ಅಧಿಕಾರವೂ ಇರುವದಿಲ್ಲ.

ಇತಿ

ಟೆಲೊ ಡಿ ಮ್ಯಾಸ್ಕರೇಞಸ್

## ೨೪ ವರ್ಷ ಶಿಕ್ಷೆ!

ಟೆಲೊರ ಪ್ರಾರ್ಥನೆಗೆ ಗಮನ ಕೊಡದ ಪೋರ್ಚುಗಲ್ ಸರಕಾರ ಬದಲಾಗಿ ಅವರ ಮೇಲೆ ಮೊಕದ್ದಮೆ ಹೂಡಲು ನಿಶ್ಚಯಿಸಿತು. ಜೂನ್ ೧೪ರಂದು ಮೊಕದ್ದಮೆ ಮುಂದೂಡಲಾಯಿತು. ಬೋಆ ಹೋರಾದ ನ್ಯಾಯಾಲಯದಲ್ಲಿ ಪುನಃ ಟೆಲೊ ತಾವು ಭಾರತೀಯ ನಾಗರಿಕನಾದ್ದರಿಂದ ಕೋರ್ಟಿಗೆ ತನ್ನ ಮೇಲೆ

ವಿಚಾರಣೆ ನಡೆಸಲು ಅಧಿಕಾರವಿಲ್ಲವೆಂದು ತಿಳಿಸಿದರು. ಆದರೆ ಅವರ ವಾದವನ್ನು ತಿರಸ್ಕರಿಸಲಾಯಿತು.

ಮೊಕದ್ದಮೆಯ ತೀರ್ಪು ಪೂರ್ವ ನಿರ್ಧಾರಿತವೇ ಆಗಿತ್ತು. ಟೆಲೊರ ಮೇಲೆ ರಾಜದ್ರೋಹದ ಗಂಭೀರ ಆರೋಪ ಹೊರಿಸಿ, ದೋಷಿಯೆಂದು ನಿರ್ಣಯಿಸಿ ನ್ಯಾಯಾಧೀಶರು ೨೪ ವರ್ಷ ಕಠಿಣ ಕಾರಾಗೃಹ ಶಿಕ್ಷೆಯನ್ನು ವಿಧಿಸಿದರು. ಟೆಲೊ ಶಾಂತರಾಗಿ ಧೈರ್ಯದಿಂದಲೇ ತೀರ್ಪು ಕೇಳಿದರು.

ಕೈಕ್ಸಿಯೆಸ್‌ನ ಕಾರಾಗೃಹದಲ್ಲಿ ಟೆಲೊರಿಗೆ ಇದು ಎರಡನೇ ಬಾರಿ ಅನುಭವಿಸಬೇಕಾದ ಜೈಲು ಶಿಕ್ಷೆಯಾಗಿತ್ತು. ಅರವತ್ತು ವರುಷಕ್ಕಿಂತಲೂ ಹೆಚ್ಚು ಆಯುಷ್ಯ ಕಳೆದಿರುವ ಅವರ ಶರೀರ ವೃದ್ಧಾಪ್ಯದ ಭಾರದಿಂದ ಬಾಗಿತ್ತು. ಕಳೆದ ಎರಡು ವರುಷಗಳಿಂದ ಅನುಭವಿಸಿದ ನೋವು ವೇದನೆಗಳಿಂದ ಅವರ ಆರೋಗ್ಯ ಕ್ಷೀಣಿಸಿತ್ತು.

## ಮುಕ್ತಿ

ಗೋವೆ ಕೈಬಿಟ್ಟದ್ದರಿಂದ ಕೆರಳಿದ ಸಾಲಜಾರ್ ಪುನಃ ಅದನ್ನು ವಶಪಡಿಸಿಕೊಳ್ಳುವ ಯತ್ನದಲ್ಲೇ ಇದ್ದ. ಆದರೆ ಇತಿಹಾಸದಲ್ಲಿ ಗೋವೆಯ ವಿಮುಕ್ತಿ ಅಳಿಸದ ಅಧ್ಯಾಯವಾಗಿತ್ತು. ಭಾರತ ಸರಕಾರ ಟೆಲೊ ಮತ್ತು ಮೋಹನ ರಾನಡೆಯ ಬಿಡುಗಡೆಗಾಗಿ ಪ್ರಯತ್ನ ಮಾಡುತ್ತಿತ್ತು. ಕೊನೆಗೆ ೧೯೭೦ರ ಮೇ ತಿಂಗಳಿನಲ್ಲಿ ಪೋರ್ಚುಗಲ್‌ನ ರಾಷ್ಟ್ರಪತಿ ಕಾರ್ಮೋನಾರ ಜನ್ಮದಿನದ ಸಂದರ್ಭದಲ್ಲಿ ಪೋರ್ಚುಗಲ್ ಸರಕಾರ ಕೆಲವು ಕೈದಿಗಳಿಗೆ ಕ್ಷಮಾದಾನ ನೀಡಿತು. ಅಂತೆಯೇ ೧೯೭೦ರ ಮೇ ೨೯ರಂದು ಜೈಲು ವಾರ್ಡನ್ ಟೆಲೊರವರ ಕೊಠಡಿಗೆ ಬಂದು ಸಾಮಾನುಗಳನ್ನು ಕಟ್ಟಲು ಹೇಳಿದ. ಈ ರೀತಿ ಒಂಭತ್ತೂವರೆ ವರುಷ ಕಾರಾಗೃಹ ಶಿಕ್ಷೆ ಅನುಭವಿಸಿ ಟೆಲೊ ಕೈಕ್ಸಿಯಸ್ ಜೈಲಿನ ಕಂಬಿಗಳ ಹಿಂದಿನಿಂದ ಹೊರ ಬಂದು ಸ್ವಾತಂತ್ರ್ಯದ ಗಾಳಿಯನ್ನು ಸೇವಿಸಿದರು.

ಸರಕಾರ ತನ್ನ ವಿಜ್ಞಪ್ತಿಯಲ್ಲಿ "ಕೃಶಕಾಯ ಹಾಗೂ ಖಾಯಿಲೆಯನ್ನು ಗಮನಿಸಿ ಸದ್ಭಾವನೆಯ ಪ್ರತೀಕವಾಗಿ ಟೆಲೊರನ್ನು ಬಿಡುಗಡೆ ಮಾಡಲಾಯಿತು," ಎಂದು ಹೇಳಿಕೊಂಡಿತು.

## ಸ್ವದೇಶಕ್ಕೆ

ಭಾರತದಲ್ಲಿ ಟೆಲೊರ ಸ್ವಾಗತಕ್ಕಾಗಿ ಸಿದ್ಧತೆ ನಡೆದಿತ್ತು. ಗೋವೆಯ ಸರಕಾರ ಹಾಗೂ ಅನೇಕ ಸಂಘ, ಸಂಸ್ಥೆಗಳು ಅವರ ಆಗಮನಕ್ಕಾಗಿ ಒಬ್ಬ ಮಹಾನ್ ನಾಯಕನಿಗೆ ಸಲ್ಲುವ ಗೌರವಾಭಿಮಾನಗಳೊಂದಿಗೆ ಸಿದ್ಧವಾಗಿ ಕಾದಿದ್ದವು. ಅವರ ಆಗಮನದ ಸುದ್ದಿ ಭಾರತಲ್ಲೆಲ್ಲ ರೋಮಾಂಚನವುಂಟುಮಾಡಿತ್ತು. ನಿರ್ಭೀತಿಯಿಂದ ಯಾವ ಭೌತಿಕ ಲಾಭವನ್ನೂ ಅಪೇಕ್ಷಿಸದೆ ಸಾಲಜಾರ್‌ನ ಕ್ರೂರ ಅಧಿಕಾರಶಾಹಿಯ ವಿರುದ್ಧ ಅವರ ನೆಲದಲ್ಲೇ ಹೋರಾಡಿ ಬಗ್ಗಿಸಿದ ಸುಪುತ್ರನನ್ನು ಕಾಣುವ ಇಚ್ಛೆ ಭಾರತೀಯರಲ್ಲಿ ಇರಬೇಕಾದದ್ದು ಸಹಜವೇ. ಟೆಲೊ ಜೀವಂತವಾಗಿ ಮರಳಲಾರರೆಂದು ಬಹಳ ಜನರ ಅಭಿಪ್ರಾಯವಾಗಿತ್ತು.

ಆಗಸ್ಟ್ ಒಂದನೇ ತಾರೀಖು, ಶನಿವಾರ, ತಮ್ಮ ಯಾತ್ರೆಯ ಕೊನೆಯ ಭಾಗವನ್ನು ಪೂರೈಸಿ ಲಂಡನ್ನಿನಿಂದ ಭಾರತಕ್ಕೆ ಟೆಲೊ ಪ್ರಯಾಣಿಸಿದರು. ಮರುದಿನ ಸೂರ್ಯೋದಯಕ್ಕೆ ಸರಿಯಾಗಿ ಟೆಲೊ ಕುಳಿತಿದ್ದ ಏರ್ ಇಂಡಿಯಾ ಬೋಯಿಂಗ್ ೭೦೭ 'ಗೌರಿಶಂಕರ' ಮುಂಬಯಿಯ ಸಾಂತಾ ಕ್ರೂಜ್ ವಿಮಾನ ನಿಲ್ದಾಣದಲ್ಲಿ ಇಳಿಯಿತು.

ಮರುದಿನವೇ ಟೆಲೊ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕಾಣಲು ದಿಲ್ಲಿಗೆ ಬಂದರು. ಟೆಲೊರ ಆಗಮನದ ಸುದ್ದಿ ತಿಳಿದ ಕೂಡಲೇ ಸ್ವಾಗತಿಸಲು ಪ್ರಧಾನಿ ಇಂದಿರಾ ಸಂಸತ್ ಭವನದ ತಮ್ಮ ಕೊಠಡಿಯಿಂದ ಹೊರಗೆ ಬಂದರು. ಆತ್ಮೀಯತೆಯಿಂದ ಟೆಲೊರ ಜೈಲು ವಾಸ ಹಾಗೂ ಆರೋಗ್ಯದ ಬಗ್ಗೆ ವಿಚಾರಿಸಿದರು. ಅಪರಾಹ್ನ ಟೆಲೊ ರಾಷ್ಟ್ರಪತಿ ಶ್ರೀ ಗಿರಿಯವರನ್ನು ಭೇಟಿ ಮಾಡಿದರು.

ಟೆಲೊರಿಗೆ ಅಂದು ಸ್ವಾಗತ ನೀಡಲು ಏರ್ಪಡಿಸಿದ ಸಭೆಯಲ್ಲಿ ಆಚಾರ್ಯ ಕೃಪಲಾನಿಯವರು ಸ್ವಾತಂತ್ರ್ಯ ಸಂಗ್ರಾಮದ ಈ ಮಹಾ ನಾಯಕನನ್ನು ತುಂಬು ಕಂಠದಿಂದ ಪ್ರಶಂಸಿಸಿ

ದರು. ಅವರಲ್ಲದೆ ಅಂದಿನ ಸಂಜೆಯ ಸಭೆಯಲ್ಲಿ ಅನೇಕ ನಾಯಕರು ಟೆಲೊರನ್ನು ಮುಕ್ತಕಂಠ ದಿಂದ ಹೊಗಳಿದರು.

## ಕೊನೆಯ ಹತ್ತು ವರುಷ

ಗೋವೆಗೆ ಹಿಂತಿರುಗಿದಾಗ ಟೆಲೊ ಎಪ್ಪತ್ತು ವರುಷಗಳನ್ನು ದಾಟಿದ್ದರು. ತಾವು ನಡೆದು ಬಂದ ದಾರಿಯನ್ನು ಅವಲೋಕಿಸಿದಾಗ. ಅವರಿಗೆ ಹೆಮ್ಮೆಯಾಗುತ್ತಿತ್ತು. ಆರಂಭದಲ್ಲಿ ತಾವು ಹೊಸ ಹೊಣೆಯನ್ನು ಗೌರವದಿಂದ ಚಾಚೂ ತಪ್ಪದೆ ನಿರ್ವಹಿಸಿರುವುದಕ್ಕೆ ಪ್ರತಿಫಲವೆಂಬಂತೆ ತಾಯಿನಾಡು ಸ್ವತಂತ್ರವಾಯಿತಲ್ಲಾ ಎಂಬ ಸಂತೋಷ ಅವರಿಗೆ.

ಅನೇಕ ವರ್ಷಗಳ ಹಿಂದೆ ಟೆಲೊ ಒಮ್ಮೆ ಹೇಳಿದ್ದರು– "ಗೋವೆ ಒಂದು ಬಾರಿ ಸ್ವತಂತ್ರ ವಾಗಲಿ, ಆಗ ಅದು ತನ್ನ ಪ್ರತಿಭೆಯನ್ನು ಉಪಯೋಗಿಸಿಕೊಂಡು ಮುಂದುವರಿಯುವುದ-ರಲ್ಲಿ ಸಂದೇಹವೇ ಇಲ್ಲ. ಜಾತೀಯತೆ, ಸ್ವಾರ್ಥ ಭಾವನೆ ಎಲ್ಲಾ ದೂರವಾಗಿ ಗೋವೆಯಲ್ಲಿ ಹಾಲು ಜೇನಿನ ಹೊಳೆ ಹರಿದು ಗೌರವದಿಂದ ತಲೆ ಎತ್ತಿ ನಿಲ್ಲುವುದು. ಇಲ್ಲಿಯ ಪ್ರತಿಯೊಬ್ಬ ನಿವಾಸಿಗೂ ಉದ್ಯೋಗ ದೊರಕಿ, ಅನ್ನ, ವಸ್ತ್ರ, ಆಶ್ರಯದ ಅಭಾವ ತೊಲಗುವುದು, ಸ್ವಾತಂತ್ರ್ಯದಿಂದ ನಮ್ಮ ಕಷ್ಟಗಳೆಲ್ಲಾ ಅಳಿಸಿ ಹೋಗುವವು..."

ಟೆಲೊ ನಂಬಿದ್ದ ರಾಜಕೀಯ ನೀತಿ ಹಾಗೂ ಸಾಮಾಜಿಕ, ಆರ್ಥಿಕ ವಿಚಾರಧಾರೆಗಳಿಂದ ಗೋವೆ ಸ್ವಾತಂತ್ರ್ಯ ಗಳಿಸಿದರೂ ಅವರ ಸ್ಥಿತಿ ಉಳಿದ ಸ್ವಾತಂತ್ರ್ಯಯೋಧರಂತೆಯೇ ಇತ್ತು. ತಮ್ಮ ವಿಚಾರ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟು ಅನುಚಿತ ಲಾಭಕ್ಕಾಗಿ ಸಾಮಾನ್ಯ ಲೋಕಪ್ರಿಯತೆ, ಧನ ಸಂಪಾದನೆಗಾಗಿ ಬಾಯಿ ಬಿಡುವುದನ್ನು ಟೆಲೊ ಜೀವಿತದ ಕೊನೆವರೆಗೂ ಅಪಮಾನಕರ-ವೆಂದೇ ಭಾವಿಸಿದರು.

ತಮ್ಮ ಬಿಡುವಿಲ್ಲದ ಸಾಮಾಜಿಕ, ರಾಜನೈತಿಕ ಜೀವನದಲ್ಲೂ ಬಿಡುವು ಮಾಡಿಕೊಂಡು ಅವರು ಬರೆಯುತ್ತಿದ್ದರು. 'ಕ್ವಾಸೀ ಮೆಮಾಯರ್ಸ್' ಅವರ ಜೀವನದ ಸ್ಮರಣೆಯ ಗ್ರಂಥ. ಇದರ ಮೊದಲನೇ ಶೀರ್ಷಿಕೆ 'ಮಾವಿನ ಮರಗಳು ಹೂ-ಬಿಟ್ಟಾಗ...'

೧೯೭೭ರ ಜನವರಿ ೨೬ ರಂದು ಅವರನ್ನು 'ಪದ್ಮಶ್ರೀ' ಪ್ರಶಸ್ತಿ ನೀಡಿ ಭಾರತ ಸರಕಾರ ಗೌರವಿಸಿತು. ಟೆಲೊರಿಗೆ ಮಾತ್ರವಲ್ಲ, ಸಮಸ್ತ ಗೋವೆಗೆ ದೊರೆತ ಗೌರವವಾಗಿತ್ತದು.

೧೯೭೯ರ ಅಕ್ಟೋಬರ್ ೧೯ರಂದು ಪತ್ನಿ ಎಲಿಸಾರಿಗೆ ಟೆಲೊ ತಮ್ಮ ಅನಾರೋಗ್ಯದ ವಿಚಾರ ತಿಳಿಸಿದಾಗ ಆಕೆ ಹೆದರಿದರು. ಆದರೆ ೨೦ನೇ ತಾರೀಖನ್ನು ಅವರು ಪತ್ನಿಯೊಂದಿಗೆ ಸಂತೋಷವಾಗಿಯೇ ಕಳೆದರು. ಎಂದಿನಂತೆ ರಾತ್ರಿ ಬಹಳ ಹೊತ್ತಿನವರೆಗೂ ಬರೆಯುತ್ತಲೇ ಇದ್ದರು. ಅರ್ಧರಾತ್ರಿಯ ನಂತರ ಎದೆಯಲ್ಲಿ ನೋವು ಕಾಣಿಸಿಕೊಂಡಿತು. ಅಪಾಯದ ಅರಿವಾದಾಗ ಡಾಕ್ಟರರಿಗೂ ಪಾದರಿಯವರಿಗೂ ಕರೆ ಹೋಯಿತು.

ವೈದ್ಯರೂ ಪಾದರಿಗಳೂ ಬರುವುದಕ್ಕೆ ಮುಂಚೆಯೇ ೨೧-೧೦-೧೯೭೯ರ ಬೆಳಿಗ್ಗೆ ಐದೂ ಕಾಲು ಗಂಟೆಗೆ ಸರಿಯಾಗಿ ಟೆಲೊ ಪ್ರಪಂಚ ವನ್ನು ತ್ಯಜಿಸಿದರು. ✡

Edited, printed & and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli-580 020, Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46-42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Regitrar of Newspapers for India under No. 3539/57*

# ಬೆಳೆಯುವ ಕುಡಿಯಲ್ಲೇ 'ನ್ಯಾಯವೇ ದೇವರು' ಎಂಬ ಮಹತ್ವದ ಅರಿವು!

ಅಮೂಲ್ಯ ಬಾಲ್ಯದ ಸ್ವಚ್ಛಂದತೆ. ಉತ್ಸಾಹ. ಹುರುಪು. ಕುತೂಹಲ. ವಿನೋದ. ಉಲ್ಲಾಸಗಳಿಗೆ ಮಿತಿಯಿಲ್ಲದ ಸಮಯ. ಎಲ್ಲವನ್ನೂ ಪ್ರಯೋಗಿಸಬೇಕು. ಕಲಿಯಬೇಕು. ಅನುಭವ ಪಡೆಯಬೇಕೆಂಬ ಹಂಬಲ.

ಅದೊಂದು ಸುಂದರ ಸಮಯ. ಬಂಧನಗಳಿಲ್ಲದ ಕಾಲ. ಅದು ಜೀವನದ ಪ್ರಕೃತಿ-ಗುಣಮಟ್ಟ ಮಧುರ ಮತ್ತು ಮಹತ್ತರ ನೆನಪಿನ ಭಂಡಾರ. ಆರೋಗ್ಯಕರ. ಪುಷ್ಟಿಯ ವಿಚಾರದೊಂದಿಗೆ ಆನಂದದ ವಿಕಾಸ—ಬಿಸ್ಕತ್ತಿನಂತೆ.

ಕ್ವಾಲಿಟಿ ಗ್ಲೂಕೋಸ್ ಆರೋಗ್ಯ ಮತ್ತು ಪುಷ್ಟಿಗಾಗಿ ಅತ್ಯುತ್ತಮ ಸಾಮಗ್ರಿಗಳಿಂದ ಕೂಡಿದೆ. ಶುಚಿಯಾದ ತಯಾರಿಕೆ.

ಕ್ವಾಲಿಟಿ—ಜೀವನದ ಅಭಿರುಚಿ.




## ಕ್ವಾಲಿಟೀಸ್ ಗ್ಲೂಕೋಸ್

